# ಬಹುಮುಖ ಪ್ರತಿಭೆಯ
# ಪ್ರೊ. ಕಾಳಿದಾಸ ಪತ್ತಾರ್







ಉತ್ತರ ಕರ್ನಾಟಕದ ಬಾಗಲಕೋಟೆಯಲ್ಲಿ ಜನಿಸಿದ (೧೯೪೩) ಪತ್ತಾರ್ ಕಲಾ ಡಿಪ್ಲೋಮಾ ಪಡೆದದ್ದು ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ (೧೯೬೯). ಸಿಕ್ಕ ಯಾವುದೇ ಅವಕಾಶಗಳನ್ನು ತಮ್ಮದಾಗಿಸಿ ಕೊಳ್ಳುವ ಜಾಣ್ಮೆ ಇರುವ ಪತ್ತಾರ್ ರಾಜಸ್ತಾನ ಯೂನಿವರ್ಸಿಟಿಯ ಬನಸ್ತಲಿ ವಿದ್ಯಾಪೀಠದಿಂದ ಫ್ರೆಸ್ಕೊ ತರಬೇತಿ, ಧಾರವಾಡದ ಸ್ಕೂಲ್ ಆಫ್ ಆರ್ಟ್ ಮೂಲಕ ಆರ್ಟ್ ಮಾಸ್ಟರ್ ತರಬೇತಿ ಪಡೆದು ಕೊಂಡರು. ಆರ್ಟ್‌ನಲ್ಲಿ ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸಹ ಪಡೆದಿದ್ದಾರೆ. ಹೀಗೆ ಹಲವು ಹತ್ತು ತೆರನಲ್ಲಿ ಚಿತ್ರಕಲೆಯ ಹಲವು ಮುಖಗಳ ಅಧ್ಯಯನ ಮಾಡಿದವರು ಪತ್ತಾರ್ ಅವರು.



ಇವರ ಕಲಾರಚನೆ ಗ್ರಾಫಿಕ್ ಆಗಿರಲಿ, ವರ್ಣಮಯವಾದ ಕಲಾ ರಚನೆಯಾಗಿರಲಿ ಜನಜೀವನದ ವಿವಿಧ ಮುಖಗಳನ್ನು, ನಿತ್ಯಜೀವನದ ಹಲವು ಹತ್ತು ಮಜಲುಗಳನ್ನು ಚಿತ್ರಿಸುವುದೇ ಆಗಿರುತ್ತದೆ. ಅದರಲ್ಲೂ ಗ್ರಾಮ್ಯ ಜೀವನದ ಸೊಗಡು ಎದ್ದು ಕಾಣುತ್ತದೆ. ರೊಮ್ಯಾಂಟಿಕ್ ನೆಲೆಯಲ್ಲಿಯೇ ಚಿತ್ರಿಸಿದರೂ ಹೆಚ್ಚಿನ ಅಲಂಕಾರವಾಗಲಿ, ಕುಸುರಿ ಕೆಲಸವಾಗಲಿ ಕಂಡುಬರದೆ ಇಡೀ ಚಿತ್ರ ಸಮೂಹವನ್ನು ಕ್ಷಣಬಿಂಬ ವಾದಂತೆ ಚಿತ್ರಿಸುವುದು ಇವರ ಶೈಲಿಯ ವಿಶೇಷ.

ಹಲವಾರು ಶಿಬಿರಗಳಲ್ಲಿ ಭಾಗವಹಿಸಿದ ಅನುಭವ ಇವರದು : ಮುಖ್ಯವಾಗಿ ಶ್ರೀರಂಗಪಟ್ಟಣದಲ್ಲಿ ನಡೆದ ರಾಜ್ಯ ಲಲಿತ ಕಲಾ ಅಕಾಡೆಮಿ ಆಯೋಜಿಸಿದ ಶಿಬಿರ, ಮೈಸೂರಿನ ವಿಶ್ವಕನ್ನಡ ಸಮ್ಮೇಳನ, ಬೆಂಗಳೂರಿನ ಸಾರ್ಕ್ ಸಮ್ಮೇಳನ, ನೆಹರು ಜನ್ಮಶತಾಬ್ದಿ ಗ್ರಾಫಿಕ್ ವರ್ಕ್ ಶಾಪ್, ದಕ್ಷಿಣ ಭಾರತದ ಕುಂಚಕಲಾವಿದರ ಶಿಬಿರ (ಅಮರಾವತಿ), ಭಿತ್ತಿ ಚಿತ್ರಗಳ ಕಾರ್ಯಾಗಾರ (ಗುರುವಾಯೂರು), ಇತ್ಯಾದಿ.



ರಾಜ್ಯಾದ್ಯಂತ ಹಾಗೂ ಹೊರಗೆ ಒಂದಲ್ಲಾ ಒಂದು ಪ್ರದರ್ಶನ ಮಾಡುತ್ತಾ ಬಂದಿರುವ ಇವರು ಬಾಂಗ್ಲಾದೇಶದಲ್ಲಿ ನಡೆದ ೨ನೇ ಏಷ್ಯಾ ಬಿನಾಲೆ, ಅಂತರರಾಷ್ಟ್ರೀಯ ಕಲಾಪ್ರದರ್ಶನ ಮತ್ತು ಸಮಕಾಲೀನ ಕಲೆಯ ಮುದ್ರಣ ಕಲಾ ವಿನ್ಯಾಸೋತ್ಸವ (ಯು.ಎಸ್.ಎ.) ಇತ್ಯಾದಿ ಗಳಲ್ಲಿ ಭಾಗವಹಿಸಿದ್ದಾರೆ.

ಪ್ರಸ್ತುತ ದಾವಣಗೆರೆ ಕಲಾ ಕಾಲೇಜಿನ ಗ್ರಾಫಿಕ್ ಮತ್ತು ಪೇಂಟಿಂಗ್ ವಿಭಾಗದ ಮುಖ್ಯಸ್ಥರಾಗಿರುವ ಪತ್ತಾರರಿಗೆ ಈ ಹಿಂದೆ ಮೈಸೂರಿನ ಕಾವಾ ದೃಶ್ಯ ಕಲಾ ಅಕಾಡೆಮಿಯ ಡೀನ್ ಆಗಿ ಸೇವೆ ಸಲ್ಲಿಸಿದ ಅನುಭವವೂ ಇದೆ. ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಭಾಜನರಾಗಿದ್ದಾರೆ.

ಚಿತ್ರ-ಲೇಖನ : ಎಲ್. ಶಿವಲಿಂಗಪ್ಪ
ಆಚಾರ್ಯ ಚಿತ್ರಕಲಾ ಭವನ, ಬಸವನಗರ, ಮಾರತಹಳ್ಳಿ ಅಂಚೆ, ಬೆಂಗಳೂರು-೩೭

# ಹೊಸತು

## ಒಳಗೇನಿದೆ.....


ಮಂದಗತಿಯದೇ ಆದರೂ ನಿಖರ ಅಭಿವೃದ್ಧಿ ಮಾರ್ಗ ಬೇಕು (ಸಂದರ್ಶನ) — ಕೆ. ಎಸ್. ಪಾರ್ಥಸಾರಥಿ ... ೩೪
ನಮ್ಮ ರಾಜ್ಯದಲ್ಲಿ ಜಲಸಂಪನ್ಮೂಲ ಬಳಕೆ ಎಷ್ಟು? — ರಾ. ನಂ. ಚಂದ್ರಶೇಖರ ... ೧೦
ಬಸವಪ್ರಜ್ಞೆ: ದಲಿತರ ಬಿಡುಗಡೆ ಮತ್ತು ಬಂಧನ — ಡಾ// ರಂಗರಾಜ ವನದುರ್ಗ... ೫೮

ಗರುಡಗಂಬದ ಸುತ್ತ — ಸತ್ಯನಾರಾಯಣ ಬಿ. ಆರ್ ... ೧೫
ಜೀವೇಚ್ಛೆ — ತೆಲುಗು ಮೂಲ : ವಿಶ್ವನಾಥ ಸತ್ಯನಾರಾಯಣ ... ೨೩

ಸೊರಗಿದ ಕನ್ನಡ ತಾಯಿಯ ಅಳಲು — ಶರ್ಮಿಲಾ ಸುಬ್ರಹ್ಮಣ್ಯ ರಾವ್ ... ೮
ಆದರ್ಶ — ಭೋಜರಾಜ ಸೊಪ್ಪಿಮಠ ... ೧೯
ಸಜ್ಜನರ ದುರ್ಜನರ ಸಂಗ — ಸತ್ಯವತಿ ... ೨೬
ಕ್ಯೂ... — ಬೃಂದಾ ಎನ್. ರಾವ್ ... ೨೯
ವಾಸ್ತವ — ರವಿ ಸೋ. ದೇವರೆಡ್ಡಿ ... ೪೭
ವಿಷ್ಣುವಿಗೆ ಒಂದು ಕಿವಿಮಾತು — ಎಂ. ಎಸ್. ರಘುನಂದನ ... ೫೭

ಕಾವ್ಯಧಾರೆ — ೧೩, ೧೭, ೨೦, ೪೩, ೫೨, ೫೬, ೫೭

ಪುಸ್ತಕ ಪ್ರಿಯ ಶೇಷಗಿರಿ ಮಾಸ್ತರರು — ಕೆ. ಪಿ. ಸ್ವಾಮಿ ... ೫೦

ಹಿಂದುತ್ವದ ಹಿಂದೆ... — ಅರವಿಂದ ಚೊಕ್ಕಾಡಿ ... ೧೨
ಕೊಳೆಯುತ್ತಿರುವ ಕ್ರಿಕೆಟ್ ಜಗತ್ತು — ಡಾ// ಬಿ. ಆರ್. ಮಂಜುನಾಥ್ ... ೪೫

ನೀರದೀವಿಗೆ (ನಾನು ಓದಿದ ಪುಸ್ತಕ) — ಶಿವರಾಮಯ್ಯ ... ೫೩

ಓದುವುದು ಅನಿವಾರ್ಯ ಚಟವಾಗಬೇಕು — ಎಸ್. ಬಿ. ಜೋಗುರ ... ೨೧
ದಲಿತ ಸಂವೇದನೆ ಕಲಾವಿದರ ನಿಲುವೇನು ? — ರಾಜಶೇಖರ ರಾಮಣ್ಣ ಬಿಲ್ವಪತ್ರಿ... ೩೮
ಬಿ. ಟಿ. ಹತ್ತಿ ಬಿಟ್ಟಿ ಕೊಟ್ಟರೂ ಬೇಡ — ಎನ್. ಎಂ. ನಟರಾಜ ನಾಗಸಂದ್ರ ... ೪೨

ಸೋಡಾ ಗ್ಲಾಸಿಗೆ ಸೋಡ ಚೀಟಿ — ಡಾ// ಕರವೀರಪ್ರಭು ಕ್ಯಾಲಕೊಂಡ ... ೪೮
ಹೋಮಿಯೋಪತಿಯಲ್ಲಿ ಇಂಗು — ಡಾ// ವಿ. ಎನ್. ಮೂರ್ತಿ ... ೯
ಶರದೃತುವಿನಲ್ಲಿ ನಿಮ್ಮ ಆರೋಗ್ಯ ಪಾಲನೆ — ಡಾ// ಕೆ. ಪೂರ್ಣಿಮಾ ಕೋಡೂರು... ೪೪

ಕನಕಪುರ ತಾಲ್ಲೂಕಿನ ಮೂರು ಪ್ರಾಚೀನ ಜೈನ ಸ್ಥಳಗಳು — ಮುತ್ತುರಾಜು ... ೪೯
ಪ್ರಾಚೀನ ಭಾರತದ ಸ್ತ್ರೀವಾದಿಗಳು — ಬಿ. ವಿ. ವೀರಭದ್ರಪ್ಪ ... ೫೧
ಸರ್ವೆ ಮಾಡಲು ಬಂದು ಕೈಫಿಯತ್ತುಗಳನ್ನು ಸಂಗ್ರಹಿಸಿದ ಕರ್ನಲ್ ಕಾಲಿನ್ ಮೆಕೆಂಜಿ — ಡಾ// ಎಚ್. ಎಸ್. ಗೋಪಾಲ ರಾವ್ ... ೫೫
ಬರ - ನೆಲದಿಂದ ಮುಗಿಲಿಗೆ — ಡಾ// ಬಿ. ಎಸ್. ಶೈಲಜಾ ... ೩೭
ಒಳ್ಳೆಯ ಓದು — ಇಂದಿರಾ ಕುಮಾರಿ ... ೩೧
ಮಹಮದ್ ಕಣ್ಣು ... ೨೫

ಕೀರ್ತಿಶನಿ (ತಿಳಿವು) — ಬಿ. ವಿ. ವೀರಭದ್ರಪ್ಪ ... ೬೨



*ಚಿತ್ರಗಳು : ಪಿ. ಮಹಮ್ಮದ್, ರವಿಕುಮಾರ್ ಅಜ್ಜೀಪುರ, ಶ್ರೀಹರಿ ದಿಲೀಪ್, ಹರಿಣಿ, ಬಿ. ವಿಲ್ಸನ್, ಮೋನಪ್ಪ , ಸತೀಶ್ ಯಲ್ಲಾಪುರ*

*ಮುಖಚಿತ್ರ : ಶ್ರೀ ಕ್ಲೆಮೆಂಟ್ ಫ್ರಾನ್ಸಿಸ್ ಎಂ.*

*(ಪಕ್ಷಿ : ಸೊಪ್ಪು ಕುಟರ* - Small green Barbet)

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ನಮ್ಮಲ್ಲಿ ಆಗಾಗ್ಗೆ ಜರುಗುವ ಘಟನೆಗಳು ಕೇವಲ ಪ್ರಹಸನಗಳಾಗಿದ್ದರೆ ತಲೆದೂಗಿ ಸಹಿಸಿಕೊಳ್ಳಬಹುದಿತ್ತು. ಆದರೆ ಅವುಗಳ ಹಿಂದೆ ಭಯಾನಕ ವಿಷದ ಪಾತ್ರಗಳಿರುವುದರಿಂದ ಅಸಹ್ಯ ಮತ್ತು ಆತಂಕ ಉಂಟಾಗುತ್ತದೆ. ಕೆಡುಕನ್ನು ಧ್ವಂಸ ಮಾಡಿ ಒಳಿತನ್ನು ಪ್ರತಿಷ್ಠಾಪಿಸುವ ಆಶಯವನ್ನು ಹೊಂದಿರುವ ವಿಜಯ ದಶಮಿಯಂದು ಮುಂಬೈನ ಸಿಂಹ ಬಾಳ ಠಾಕ್ರೆ ಸಂದೇಶವೊಂದನ್ನು ನೀಡಿ ಆತ್ಮಾಹುತಿ ದಳಗಳ ರಚನೆಯ ಅಗತ್ಯವನ್ನು ಪ್ರತಿಪಾದಿಸಿದ್ದು ಮತ್ತು ನಂತರದ ಬೆಳವಣಿಗೆಗಳು ವ್ಯಾಪಕವಾಗಿ ವರದಿಯಾಗಿವೆ. ಮಾತಿನ ಸ್ವಾತಂತ್ರ್ಯವನ್ನು ಮಾನ್ಯ ಮಾಡಬೇಕೆಂದು ಹೇಳಿ ಅರುಣ ಜೈಟ್ಲಿ ಠಾಕ್ರೆ ಸಮರ್ಥನೆಯ ವಕ್ತಾರರಾಗಿದ್ದಾರೆ. ಇದಕ್ಕೆ ಸ್ವಲ್ಪ ಮುಂಚೆ ಸೋಲಾಪುರದಲ್ಲಿ ಸೊಲ್ಲಡಗಿಸುವ ಹೀನ ಅಪರಾಧಗಳ ಸರಣಿಯು ದೇಶವನ್ನು ತಲ್ಲಣಗೊಳಿಸಿತು. ಯಾವನೋ ಪಾದ್ರಿ ಅಮೆರಿಕಾದಲ್ಲಿ ''ದೇವದೂತ'' ಮಹಮ್ಮದರನ್ನು ಭಯೋತ್ಪಾದಕರೆಂದು ಹೀಯಾಳಿಸಿದ್ದಕ್ಕೆ ಪ್ರತಿಕ್ರಿಯೆ ಸೊಲ್ಲಾಪುರದಲ್ಲಿ! ಮಹಮ್ಮದರ ನೈತಿಕ ಉದಾತ್ತತೆಯನ್ನು ರಕ್ಷಿಸಲು ಅವರ ಮತಾಂಧ ಅನುಯಾಯಿಗಳು ದಾಂಧಲೆ ನಡೆಸಿ ದುಷ್ಟತನದಿಂದ ಅಪಾರ ಜೀವಹಾನಿ ಉಂಟುಮಾಡಿದ್ದಾರೆ. ಇವರಿಗೆ ಎಂತಹ ಶಿಕ್ಷೆ ವಿಧಿಸಿದರೂ ಕಡಿಮೆಯೇ ಎನ್ನಬೇಕು. ನೇರವಾಗಿ ಅಮೆರಿಕಾಕ್ಕೆ ಹೋಗಿ ಆ ಪಾದ್ರಿಯನ್ನು ತರಾಟೆಗೆ ತೆಗೆದುಕೊಳ್ಳುವ ಸ್ಥೈರ್ಯ ಇಲ್ಲದವರು ಇಲ್ಲಿ ಅಮಾಯಕ ಅನ್ಯಮತೀಯರನ್ನು ಕೊಂದಿದ್ದಾರೆ. ಪಾಕಿಸ್ತಾನದ ಪಿತೂರಿಯ ಹುಟ್ಟಡಗಿಸಲು ಹಿಂದುಗಳು ಸಾಯಲು ಸಿದ್ಧರಾಗಬೇಕೆನ್ನುವ ಠಾಕ್ರೆ ಒಂದೆಡೆ, ಜೀವ ತೆಗೆಯುವ ಕೆಲವು ಮುಸಲ್ಮಾನ ಮತಾಂಧರು ಇನ್ನೊಂದು ಕಡೆ; ಒಟ್ಟಿನಲ್ಲಿ ಮಹಾರಾಷ್ಟ್ರದ ವಾತಾವರಣ ತಿಳಿಯಾಗುವ ದಿನ ದೂರವೇ ಉಳಿಯಿತು !

ಕಳೆದ ವರ್ಷದ ಸೆಪ್ಟೆಂಬರ್ ೧೧ರ ಘಟನೆಯ ನಂತರ ಅಮೆರಿಕಾ ಸೌಹಾರ್ದತೆಯತ್ತ ಹೆಜ್ಜೆ ಹಾಕುವ ಬದಲು ಸೇಡು ತೀರಿಸಿಕೊಳ್ಳುವ ಕ್ರಿಯೆಯಲ್ಲಿ ತೊಡಗಿರುವಾಗ ಬಾಲಿ ದ್ವೀಪದಲ್ಲಿ ಭಯೋತ್ಪಾದನೆಯ ಇನ್ನೊಂದು ಪರ್ವ ಮಹತ್ತರ ಪ್ರಶ್ನೆಯನ್ನು ಮಾನವ ಜನಾಂಗದ ಮುಂದಿಟ್ಟಿದೆ: ವೈರಶಮನದ ಆಯ್ಕೆಯೋ, ಪ್ರತೀಕಾರದ ಹುನ್ನಾರವೋ, ಎಂದು. ರಷ್ಯದ ಅಧ್ಯಕ್ಷರನ್ನುಳಿದು ಬೇರೆ ಯಾರೂ ಬಾಲಿ ನರಹತ್ಯೆಯನ್ನು ಈ ಧಾಟಿಯಲ್ಲಿ ಅರ್ಥೈಸಲಿಲ್ಲ. ಬಿಗಿಭದ್ರತೆ ಮತ್ತು ಭಯೋತ್ಪಾದಕರ ಬೇಟೆ, ಇವು ಸಮಸ್ಯೆಗೆ ಪರಿಹಾರವೆಂಬ ದೈತ್ಯ ತಿಳುವಳಿಕೆ ಎಲ್ಲೆಲ್ಲೂ ಜ್ವಾಲೆಯನ್ನು ಹಬ್ಬಿಸುತ್ತಿದೆ. ಸದ್ದಾಂನನ್ನು ಸದೆಬಡಿಯಲು ಪಣತೊಟ್ಟಿರುವ ಬುಷ್ ಮಾನವ ಕುಲಕ್ಕೆ ಸದ್ದಾಂಗಿಂತಲೂ ಹೆಚ್ಚಿನ ವಿನಾಶ ತರುವಂಥವನು, ತಂದಿರುವವನು. ಆತನು ಬಡಬಡಿಸುವುದನ್ನೆಲ್ಲಾ ವಿಶ್ವದ ಎಲ್ಲ ಜನ ಒಪ್ಪಬೇಕೆಂಬುದು ಆತನ ಆಗ್ರಹ. ಆದರೆ ಮಾನವ ಹಕ್ಕುಗಳ ಹೆಸರಿನಲ್ಲಿ ಆತನ ಸರ್ಕಾರ ಎಸಗಿರುವ ಪಾತಕಗಳು ಎಷ್ಟಿವೆಯೆಂದರೆ ವಿಶ್ವದ ಪ್ರತಿಯೊಂದು ದೇಶದಲ್ಲೂ ಅಮೆರಿಕಾದ ಉಗ್ರತೆಯನ್ನು ಖಂಡಿಸುವ ಸಾವಿರಾರು ಜನರಿದ್ದಾರೆ. ಸ್ವತಃ ತನ್ನ ಶ್ವೇತಭವನದ ಹತ್ತು ಕಿಲೋಮೀಟರ್ ಸುತ್ತಳತೆಯಲ್ಲಿ ಜನಕ್ಕೆ ರಕ್ಷಣೆ ನೀಡುವಲ್ಲಿ ಸೋತಿರುವ ಬುಷ್‌ನ ಪರಾಕ್ರಮಕ್ಕೆ ಏನೆನ್ನಬೇಕು ? ವರ್ಜೀನಿಯಾದ ಪೆಟ್ರೋಲ್ ಬಂಕ್‌ಗಳ ಬಳಿ ಈವರೆಗೆ ಒಂಭತ್ತು ಮಂದಿ ಕೊಲೆಯಾಗಿದ್ದಾರೆ. ಅಮೆರಿಕಾ ಮತ್ತು ಇಸ್ರೇಲ್ ಇರಿಸಿಕೊಳ್ಳದ ಯಾವ ಅಸ್ತ್ರಗಳನ್ನೂ ಬೇರೆ ಯಾವ ದೇಶದವರೂ ಹೊಂದಿಲ್ಲ; ಆದರೂ ವಿಶ್ವಸಂಸ್ಥೆಯನ್ನು ಧಿಕ್ಕರಿಸಿ ಗೂಳಿ ಮುನ್ನುಗ್ಗುತ್ತಿದೆ. ಇದನ್ನು ನೋಡಿಯೇ ನೆಲ್ಸನ್ ಮಂಡೇಲಾ ಹೇಳಿದ್ದು, ಅಮೆರಿಕಾ ಒಂದು ಡೈನೋಸರಸ್ ಎಂದು. ಏಕಮುಖವಾಗಿ ನುಗ್ಗಿ ಹಾಳುಗೆಡಹುವುದು ಮತ್ತು ಕೊನೆಗೆ ನಾಶಗೊಳ್ಳುವುದು, ಇದು ಆ ದೈತ್ಯ ಪ್ರಾಣಿಯ ಲಕ್ಷಣ. ಇರಾಕ್ ದೇಶವನ್ನು ಧ್ವಂಸಮಾಡುವ ಮೊದಲೇ ಆ ದೇಶದ ಸಂಪತ್ತನ್ನು ಹೇಗೆ ಲೂಟಿ ಮಾಡಬೇಕೆಂಬ ನೀಲಿನಕ್ಷೆ ಬುಷ್ ಜೇಬಿನಲ್ಲಿದೆ. ಅಂತಹವನ ಸಖ್ಯ ನಮ್ಮ ಇಂದಿನ ಕೇಂದ್ರ ಸರ್ಕಾರದ ನಾಯಕರಿಗೆ ಆಪ್ಯಾಯಮಾನವಾಗಿದೆಯೆಂದರೆ ನಾಚಿಕೆಯೆನಿಸುತ್ತದೆ.

ಪಾಕಿಸ್ತಾನದಲ್ಲಿ ಹಾಗೂ ನಮ್ಮ ದೇಶದ ಕಾಶ್ಮೀರದಲ್ಲಿ ಚುನಾವಣೆಗಳು ಈ ತಿಂಗಳ ವಿಶೇಷ. ಮೋದಿಯ ಉಪಟಳದಿಂದ ಸೊರಗಿದ್ದ ಗುಜರಾತಿಗೆ ಬೇಗನೆ ಹೋಗದಿದ್ದ ವಾಜಪೇಯಿ, ಅದ್ವಾನಿ ಮುಂತಾದ ಪ್ರಮುಖರು ಅಕ್ಷರಧಾಮಕ್ಕೆ ಕೂಡಲೇ ಧಾವಿಸಿ ಯಥಾಪ್ರಕಾರ ನಮ್ಮ ಯೋಧರನ್ನು ಶ್ಲಾಘಿಸಿದರು, ಪಾಕಿಸ್ತಾನವನ್ನು ದೂಷಿಸಿದರು. ಕಾಶ್ಮೀರದ ಚುನಾವಣೆಗಳು ಸುಸೂತ್ರವಾಗಿ ನಡೆದದ್ದರಿಂದ ಸ್ವಾಮಿ ನಾರಾಯಣ ಪಂಥದ ಮೇಲೆ ಮುಶಾರಫ್ ಕೆಂಗಣ್ಣು ಬಿಟ್ಟನೆಂದು ಹೇಳಿ ನಮ್ಮ ನಾಯಕರು ಕೈತೊಳೆದುಕೊಂಡರು. ಪ್ರಕ್ಷುಬ್ಧತೆ ನಿವಾರಿಸಲು ದೂಷಣೆಗಳ ಸರಮಾಲೆಯು ಆಯುಧವಾಗುವುದಿಲ್ಲ. ಕಾಶ್ಮೀರದಲ್ಲಿ ರಾಜಕೀಯ ವ್ಯವಹಾರಗಳನ್ನು ಕುದುರಿಸುವಾಗ ಇನ್ನು ಮುಂದಾದರೂ ಇದನ್ನು ತಿಳಿಯುವುದೊಳ್ಳೆಯದು. ಮತ್ತು ಅಕ್ಷರಧಾಮದ ದುರ್ಘಟನೆ ಮರುಕಳಿಸದಿರಬೇಕಾದರೆ ಬುಷ್-ಬ್ಲೇರ್ ಕೈಂಕರ್ಯವನ್ನು ನಿಲ್ಲಿಸಿ ನಮ್ಮ ಆಂತರಿಕ ಸುವ್ಯವಸ್ಥೆಗೆ ಗಮನ ನೀಡುವುದಕ್ಕೆ ಆದ್ಯತೆ ಇರಬೇಕು. ಪಾಕಿಸ್ತಾನದಲ್ಲಿ ಅಮೆರಿಕಾ-ವಿರೋಧಿ, ಧಾರ್ಮಿಕ ಜಡ್ಡುತನದ ಪಕ್ಷಗಳು ಮೇಲುಗೈ ಸಾಧಿಸಿರುವುದು ಸಮಾಧಾನದ ವಿಷಯವೂ ಅಲ್ಲ, ಆಶ್ಚರ್ಯದ ವಿಷಯವೂ ಅಲ್ಲ. ತಾವೇ ಬೆಳೆಸಿದ್ದ ಭೂತಗಳು

ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೪ ಸಂಚಿಕೆ - ೪ ನವೆಂಬರ್ ೨೦೦೨



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

ಈಗ ಅಮೆರಿಕಾದ ನಾಯಕರನ್ನು ಕಾಡುತ್ತಿವೆ; ಆದರೆ ಅದಕ್ಕೆ ಬೆಲೆ ತೆರಬೇಕಾದವರು ನಾವು ಮತ್ತು ಆಫ್ಘಾನಿಸ್ತಾನದ ಸಾಮಾನ್ಯ ಜನ. ದಿನಬೆಳಗಾದರೆ ಅಮೆರಿಕಾದಿಂದ ಬಂದು ಇಲ್ಲಿ ಕೇಂದ್ರದ ಮಂತ್ರಿಗಳನ್ನು ಒಬ್ಬ ಶಾಲಾ ಮುಖ್ಯೋಪಾಧ್ಯಾಯಿನಿಯಂತೆ ದಂಡಿಸುವ ರೊಕ್ಕಾ ಎಂಬ ಮಹಿಳೆಗೆ ಇದನ್ನು ಸ್ಪಷ್ಟವಾಗಿ ಹೇಳಲು ವಾಜಪೇಯಿ ವೃಂದಕ್ಕೆ ಬಾಯಿ ಬರುವುದಿಲ್ಲ! ತಮ್ಮ ಸರ್ಕಾರ ಮೂರು ವರ್ಷಗಳಲ್ಲಿ ಏನೆಲ್ಲಾ ಸಾಧಿಸಿದೆ ಎಂಬುದನ್ನು ಪ್ರಚಾರ ಮಾಡಲು ಅದ್ವಾನಿ ಕೆಲವು ಸರ್ಕಾರಿ ಪುಸ್ತಕಗಳನ್ನು ಬಿಡುಗಡೆ ಮಾಡಿ ನಿರರ್ಗಳವಾಗಿ ಒಂದು ಗಂಟೆ ಮಾತನಾಡುತ್ತಾರೆ. ಇವರ ಸಾಧನೆ ಜನಕ್ಕೆ ತಿಳಿದಿಲ್ಲವಂತೆ; ಆದ್ದರಿಂದ ಪ್ರಚಾರ ಬೇಕು ! ಜನರಿಗೆ ಕಾಣದಂತಹ ಅದಾವ ಅದ್ಭುತ ಸಾಧನೆಗಳು ಇವರ ಬತ್ತಳಿಕೆಯಲ್ಲಿವೆಯೋ ಸಂಶೋಧನೆ ಮಾಡಿ ಹೊರತೆಗೆಯಬೇಕು. ವಾರಕ್ಕೊಮ್ಮೆ ಪೆಟ್ರೋಲ್-ಡೀಸೆಲ್ ಬೆಲೆ ಏರಿಕೆ, ಸಾರ್ವಜನಿಕ ಆಸ್ತಿಯಾದ ಬಾಲ್ಕೋದಂತಹ ಖ್ಯಾತ ಉದ್ದಿಮೆಗಳ ಹರಾಜು, ಗುಜರಾತಿನ ದಾರುಣ ಹತ್ಯೆಗಳು, ಹೊಸ ಪಠ್ಯಪುಸ್ತಕಗಳ ಮುಖೇನ ಶಿಕ್ಷಣವನ್ನು ಚರಂಡಿಗೆ ಎಳೆಯುವುದು, ದೇಶದ ಸಾರ್ವಭೌಮತ್ವವನ್ನು ಅಮೆರಿಕಾಕ್ಕೆ ಒತ್ತೆ ಇಟ್ಟಿರುವುದು, ಇವೆಲ್ಲಾ ಸಾಧನಗಳೆಂಬ ಹಣೆಪಟ್ಟಿ ಧರಿಸುವುದಾದರೆ ಅವುಗಳ ಪಟ್ಟಿಯನ್ನು ಬೇಕಾದಷ್ಟು ಬೆಳೆಸಬಹುದು.

ಇದನ್ನೆಲ್ಲಾ ಮಾಡುತ್ತಿರುವ ಮಂದಿ ಮಾನ್ಯ ಜಯಪ್ರಕಾಶ ನಾರಾಯಣರ ಜನ್ಮ ಶತಮಾನೋತ್ಸವ ಆಚರಿಸಿ ಸಂಪೂರ್ಣ ಕ್ರಾಂತಿಯ ಕಹಳೆಯನ್ನು ಮತ್ತೆ ಊದಹೊರಟಿದ್ದಾರೆ. ಎಪ್ಪತ್ತರ ದಶಕದಲ್ಲಿ ಈ ಕ್ರಾಂತಿಯ ಹರಿಕಾರರಾಗಿ ಪ್ರವರ್ಧಮಾನಕ್ಕೆ ಬಂದವರನೇಕರು ಇಂದು ಎಂತಹ ದೊಡ್ಡ ಹೊಟ್ಟೆಗಳನ್ನು ಬೆಳೆಸಿಕೊಂಡಿದ್ದಾರೆಂಬುದನ್ನು ಕುತೂಹಲಕ್ಕಾದರೂ ಅಭ್ಯಾಸ ಮಾಡಲು ಯೋಗ್ಯವಾಗಿದೆ. ಅಂದು ಸಂಪೂರ್ಣ ಕ್ರಾಂತಿಯ ಅವಧೂತರಾಗಿದ್ದವರೇ ಇಂದು ಕೇಂದ್ರದಲ್ಲಿ ಆಡಳಿತ ನಡೆಸುತ್ತಿದ್ದಾರೆ. ಹಾಗಿದ್ದರೆ ಅಂದಿನ ಆಶಯಗಳು ಕಸದ ಬುಟ್ಟಿಗೆ ಹೋಗಲಾರವಲ್ಲವೆ ? ನಲವತ್ತು-ಐವತ್ತರ ದಶಕದ ಜೆ.ಪಿ.ಯೇ ಬೇರೆ, ಎಪ್ಪತ್ತರ ದಶಕದ ಜೆ.ಪಿ.ಯೇ ಬೇರೆ ಎಂಬುದು ಅರುಚಿಕರವಾದ ಸತ್ಯ. ''ಆರೆಸ್ಸೆಸ್ ಫ್ಯಾಸಿಸ್ಟ್ ಆದರೆ ನಾನೂ ಫ್ಯಾಸಿಸ್ಟ್'' ಎಂದು ಜೆ.ಪಿ. ೪೦-೫೦ರ ದಶಕಗಳಲ್ಲಿ ಹೇಳಲು ಶಕ್ಯವಿದ್ದಿತೆ ? ಈ ಸಂದರ್ಭದಲ್ಲಿ ಏಂಗೆಲ್ಸ್ ಅಕ್ಟೋಬರ್ ೧೮೮೨ರಲ್ಲಿ ಜರ್ಮನಿಯಲ್ಲಿದ್ದ ಬೆಬೆಲ್‌ಗೆ ಬರೆದ ಒಂದು ಪತ್ರವನ್ನು ನೆನಪಿಸಿಕೊಳ್ಳಬಹುದು: ಆಗ್ಗೆ ಸಮಾಜವಾದ-ವಿರೋಧಿ ಕಾನೂನು ಜಾರಿಯಲ್ಲಿದ್ದು, ಜನಸಮುದಾಯದ ಪ್ರತಿಭಟನೆಗಳಿಂದಾಗಿ ಬಿಸ್ಮಾರ್ಕ್ ಅದನ್ನು ಹಿಂದೆಗೆದುಕೊಂಡಿದ್ದ. ವೋಲ್ಮಾರ್ ಎಂಬೊಬ್ಬ ಹೋರಾಟಗಾರ ಅದರ ವಿಶ್ಲೇಷಣೆ ಮಾಡಿದ್ದ ಹಿನ್ನೆಲೆಯಲ್ಲಿ ಏಂಗೆಲ್ಸ್ ಹೇಳಿದ್ದಿದು: ಇದು ಹೇಗಿದೆಯೆಂದರೆ ಅಧಿಕೃತ ಪಕ್ಷಗಳೆಲ್ಲಾ ಒಂದು ಕಡೆ ಮತ್ತು ಎಲ್ಲ ಸಮಾಜವಾದಿಗಳ ಸುಭದ್ರ ಸೈನ್ಯ ಇನ್ನೊಂದು ಕಡೆ; ನಿರ್ಣಾಯಕ ಯುದ್ಧ ನಡೆದಿದೆ ಮತ್ತು ಸಂಪೂರ್ಣ ಯಶಸ್ಸು ಪಡೆಯಲಾಗಿದೆ, ಎನ್ನುವಂತೆ. ನಿಜ ಜೀವನದಲ್ಲಿ ಹಾಗಾಗುವುದಿಲ್ಲ. ಹಾಗೆ ನೋಡಿದರೆ, ಕ್ರಾಂತಿ ನಡೆಯುವುದು ಒಂದು ಪರ್ಯಾಯವಾದ ರೀತಿಯಲ್ಲಿ. ಜನರ ಬಹುಭಾಗ ಮತ್ತು ಅಧಿಕೃತ ಪಕ್ಷಗಳ ಬಹುಭಾಗ ಒಂದಾಗಿ ಸರ್ಕಾರದ ವಿರುದ್ಧ ಸಜ್ಜಾಗುತ್ತಾರೆ; ಸರ್ಕಾರವು ಆಗ ಪ್ರತ್ಯೇಕಗೊಂಡು ಒಂಟಿಯಾಗಿ ನಿಲ್ಲುತ್ತದೆ ಮತ್ತು ಅದನ್ನು ಹೊರದೂಡಲಾಗುತ್ತದೆ.

ಮಾನ್ಯ ಜೆ. ಪಿ. ಅವರ ನೇತೃತ್ವದ ಸಂಪೂರ್ಣ ಕ್ರಾಂತಿಗೆ ಈ ಲಕ್ಷಣಗಳು ಯಾವುವೂ ಇರಲಿಲ್ಲ. ಇಂದಿನ ಜನತಾ ದಳದ ಪರಿವಾರ ಹಾಗೂ ಸಂಘ ಪರಿವಾರಗಳನ್ನುಳಿದು ಸರ್ವೋದಯದವರೂ ಸೇರಿದಂತೆ ಬೇರೆಯವರು ನಗಣ್ಯವಾಗಿದ್ದುದು ಎದ್ದುಕಾಣುತ್ತಿತ್ತು. ಯಾವ ಬಂಡವಳಿಗ ಗುಂಪುಗಳ ವಿರುದ್ಧ ಹೋರಾಟ ಅಗತ್ಯವಿದ್ದಿತೋ ಅವುಗಳ ಪ್ರತಿನಿಧಿಗಳು ಸಹ ಕ್ರಾಂತಿಯ ನೇತೃತ್ವ ವಹಿಸಿದ್ದುದು ಆಕಸ್ಮಿಕವಾಗಿರಲಿಲ್ಲ. ಜೆ. ಪಿ. ಚಳುವಳಿಯ ಅಂದಿನ ಸನ್ನಿವೇಶವನ್ನು ವ್ಯಾಖ್ಯಾನಿಸಿದ್ದ ವೈಖರಿಯು ಏಂಗೆಲ್ಸ್ ಬರೆದಿದ್ದ ಇನ್ನೊಂದು ಪತ್ರವನ್ನು ನೆನಪಿಗೆ ತರುತ್ತದೆ. ಜನವರಿ ೧೮೭೨ರಲ್ಲಿ ಇಟಲಿಯಲ್ಲಿದ್ದ ಕ್ಯೂನೋಗೆ ಬಾಕುನಿನ್ ಸಿದ್ಧಾಂತದ ಬಗ್ಗೆ ಬರೆಯುತ್ತಾ ಏಂಗೆಲ್ಸ್ ಹೀಗೆಂದರು : ಬಾಕುನಿನ್ನನ ಸಿದ್ಧಾಂತ ಫ್ರಾನ್ಸಿನ ಪ್ರೂಧೋನ್ ಮತ್ತು ಸಮಾಜವಾದದ ಕಲಸುಮೇಲೋಗರದಂತಿದೆ. ಪ್ರೂಧೋನ್‌ಗೆ ಬಂಡವಾಳದ ಹೊಡೆತದಲ್ಲಿ ನಂಬಿಕೆ ಇರಲಿಲ್ಲ. ಸಾಮಾಜಿಕ ಬೆಳವಣಿಗೆಗಳ ಹಾದಿಯಲ್ಲಿ ವರ್ಗ ವೈರುಧ್ಯ ಎಂಬುದೊಂದು ಕಾಣಿಸಿಕೊಳ್ಳುತ್ತದೆಂದು ಆತ ಒಪ್ಪಿರಲಿಲ್ಲ. ಅವನ ಪ್ರಕಾರ ರಾಜ್ಯ ಪ್ರಭುತ್ವವೊಂದೇ ಎಲ್ಲಾ ಕೆಡಕುಗಳ ತವರೂರು. ಆದ್ದರಿಂದ ಅದನ್ನು ಭಗ್ನಗೊಳಿಸುವುದೇ ಪರಿಹಾರವೆಂದು ಆತ ಸೂಚಿಸಿದ್ದ. ಬಾಕುನಿನ್ ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುತ್ತಾನೆ : ಬಂಡವಾಳವನ್ನು ಸೃಷ್ಟಿಸಿರುವುದೇ ರಾಜ್ಯ ಪ್ರಭುತ್ವ. ಬಂಡವಳಿಗನಲ್ಲಿ ಬಂಡವಾಳದ ಶೇಖರಣೆ ಆಗಿರುವುದು ಪ್ರಭುತ್ವದ ಕೃಪೆಯಿಂದ. ಆದ್ದರಿಂದ ಪ್ರಭುತ್ವವನ್ನು ಧ್ವಂಸಗೊಳಿಸಿದರೆ ಬಂಡವಾಳದ ಶಕ್ತಿಯು ತಾನೇತಾನಾಗಿ ಕುಗ್ಗಿಹೋಗುತ್ತದೆ.

ಮಾನ್ಯ ಜೆ.ಪಿ.ಯವರು ಅಂದಿನ ಕೇಂದ್ರ ಸರ್ಕಾರವನ್ನು ಕಿತ್ತೊಗೆಯುವುದೇ ಸಂಪೂರ್ಣ ಕ್ರಾಂತಿಯೆಂದು ವ್ಯಾಖ್ಯಾನಿಸಿದ್ದಂತೆ ತೋರುತ್ತದೆ. ತುರ್ತು ಪರಿಸ್ಥಿತಿಯ ತರುವಾಯದಲ್ಲಿ ಆ ಸರ್ಕಾರ ಬಿದ್ದಿತು; ಆದರೆ ಕ್ರಾಂತಿಯ ಫಲ ಯಾರಿಗೆ ದಕ್ಕಿತೋ ತಿಳಿಯದು. ಇಂದು ಶತಮಾನೋತ್ಸವ ಆಚರಿಸುವ ಸಂದರ್ಭದಲ್ಲಿ ಇದನ್ನು ವಿಶ್ಲೇಷಣೆ ಮಾಡಿಕೊಂಡು ಮುಂದಿನ ದಾರಿಯನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳುವ ಅವಶ್ಯಕತೆ ಇದೆ. ಜಾರ್ಜ್ ಫರ್ನಾಂಡಿಸ್ ಅಂತಹವರು ಇದನ್ನು ಮಾಡಿಯಾರೆ ಎಂಬುದು ಶಂಕಾಸ್ಪದ. ಏಕೆಂದರೆ ಈ ಬರೋಡ ವೀರರು ಸಾರ್ವಜನಿಕ ಆಸ್ತಿಯನ್ನು ಖಾಸಗಿಯವರಿಗೆ ವಹಿಸಿಕೊಡುವುದನ್ನು ಮೂಲಭೂತವಾಗಿ ವಿರೋಧಿಸದೆ ತನ್ನ ರಾಜಕೀಯ ಅವಶ್ಯಕತೆ ಇದ್ದಾಗ ಅಪಸ್ವರವನ್ನೆತ್ತಿ ಆಮೇಲೆ ತಣ್ಣಗಾಗಿದ್ದಾರೆ. ಅಂತಹವರು ಸಂಪೂರ್ಣ ಕ್ರಾಂತಿಗೆ ಬದ್ಧವಾಗಿರುವುದಿರಲಿ, ಸದ್ಯದ ಸಾರ್ವಜನಿಕ ಸಂಪತ್ತಿನ ರಕ್ಷಣೆಯ ಬಗ್ಗೆ ಕೂಡ ಕಾಳಜಿ ವಹಿಸುವುದಿಲ್ಲ. ವಾಜಪೇಯಿಯಂತಹವರಾದರೆ ಜಾಗತೀಕರಣ-ಖಾಸಗೀಕರಣ ಪ್ರಕ್ರಿಯೆಯ ಹಿನ್ನಡೆಯೇ ಅಸಾಧ್ಯವೆಂದು ವಾದಿಸುತ್ತಾರೆ. ಅಂದರೆ, ಜನರ ಹಿತಕ್ಕಿಂತಲೂ ಅವರಿಗೆ ಅವರ ಪೋಷಕರಾದ ಬಂಡವಳಿಗ ಲೂಟಿಕೋರರ ಹಿತವೇ ಆದ್ಯತೆಯ ವಿಷಯ. ನಮ್ಮ ದೇಶದ ಜನಸಾಮಾನ್ಯರು ಇದನ್ನು ಅಂಗೀಕರಿಸಿ ಮೂಕರಾಗಿ, ನಿಷ್ಕ್ರಿಯರಾಗಿ ಉಳಿಯುತ್ತಾರೆಯೇ ಎಂಬುದು ಪ್ರಶ್ನೆ.

ದೂರದ ಬ್ರೆಝಿಲ್ಲಿನ ಜನ ಇದಕ್ಕೆ ಈ ತಿಂಗಳಲ್ಲಿ ಬಲವಾದ ಉತ್ತರ ಕೊಟ್ಟಿದ್ದಾರೆ. ಜಾಗತೀಕರಣದ ಹೆಸರಿನಲ್ಲಿ ಆ ದೇಶದ ಆರ್ಥಿಕತೆಯು ಕುಗ್ಗಿ ದೇಶವು ಹಿಂದೆಂದಿಗಿಂತಲೂ ಹೆಚ್ಚಾಗಿ ಅಮೆರಿಕಾದ ಭಂಟನಾಯಿತು. ಅಲ್ಲೂ ಆರ್ಥಿಕ ಪ್ರಕ್ರಿಯೆಯಲ್ಲಿ ಹಿಂದಕ್ಕೆ ಹೋಗುವ ಪ್ರಶ್ನೆಯೇ ಇಲ್ಲವೆಂದು ಸಾರಲಾಗುತ್ತಿತ್ತು. ಹಾಗೆ ಒದರುತ್ತಿದ್ದ ಸರ್ಕಾರವನ್ನು ಚುನಾವಣೆಯಲ್ಲಿ ಜನ ಒದ್ದೋಡಿಸಿದರು. ಪ್ರಗತಿಪರ ಪ್ರಜಾಪ್ರಭುತ್ವವಾದಿ ಸರ್ಕಾರವನ್ನು ತಂದುಕೊಳ್ಳುವ ಕ್ರಿಯೆ ಅಲ್ಲಿ ಪ್ರಾರಂಭವಾಗಿದೆ. ನಾವು ಅದನ್ನು ಯಾವ ರೀತಿಯಲ್ಲಿ ಮಾಡುತ್ತೇವೆಂಬುದರ ಬಗ್ಗೆ ಹಲವು ಸಾಧ್ಯತೆಗಳಿರಬಹುದು, ಆದರೆ ಗುರಿಯಲ್ಲಿ ವಿಮುಖರಾಗುವ ಸಂಭವವಿಲ್ಲ.

ನವೆಂಬರ್ ೨೦೦೨

ಸಂಪಾದಕೀಯ

## ವಾಸ್ತವಿಕತೆಯ ಅರಿವಿನತ್ತ....

ಅಕ್ಟೋಬರ್ ಮೂರನೆಯ ವಾರದಲ್ಲಿ ಸ್ವಲ್ಪ ಮಳೆ ಬಂದು ನಮ್ಮ ರಾಜ್ಯವು ಗಮನಾರ್ಹವಾಗಿ ತಂಪಾಯಿತು. ಮುಖ್ಯಮಂತ್ರಿಗಳ ಪಾದಯಾತ್ರೆಯಿಂದಾಗಿ ಮಳೆ ಬಂತೆಂಬ ಕುಹಕ ಬೇಡ. ಆದರೆ ಅದೂ ರಾಜ್ಯದಲ್ಲಿ ಉಂಟಾಗಿದ್ದ ಬೇಗೆಗೆ ಸ್ವಲ್ಪ ನೀರೆರೆಯಿತು. ಅದನ್ನು ಅಂತಃಸ್ಫೂರ್ತಿಯಿಂದ ಕೈಗೊಂಡದ್ದೆಂದು ಶ್ರೀ. ಕೃಷ್ಣ ಹೇಳಿಕೊಂಡಿದ್ದಾರೆ. ಎಲ್ಲ ಪಕ್ಷಗಳವರ ಸಭೆಯ ನಂತರ ಈ ಸ್ಫೂರ್ತಿ ಹೊಳೆಯಲು ಏನೋ ವಿಶಿಷ್ಟ ಕಾರಣಗಳಿರಬೇಕು. ಗಾಂಧೀಜಿ ಸಹ ಇಂತಹ ಸ್ಫೂರ್ತಿಗಳ ನಂತರ ಪಾದಯಾತ್ರೆ ಕೈಗೊಳ್ಳುತ್ತಿದ್ದುದುಂಟು. ಸೋನಿಯಾ ಗಾಂಧಿ ಪಕ್ಷದಲ್ಲಿ ಹೊಸ ಗಾಂಧಿಯೊಬ್ಬರು ಹುಟ್ಟಿಕೊಂಡರೆ ಯಾರದೂ ಆಕ್ಷೇಪವಿರಲಾರದು. ಆದರೆ ಬೇರೆ ಪಕ್ಷಗಳವರನ್ನು ಕೂಡಿಕೊಂಡು ಶಾಂತಿಯಾತ್ರೆ ಮಾಡಬೇಕೆಂಬ ಸ್ಫೂರ್ತಿ ಹೊಳೆಯದಿದ್ದುದೊಂದು ಸೋಜಿಗ. ತಾವು ಏಕಪಕ್ಷೀಯವಾಗಿ ತೀರ್ಮಾನಿಸಿದ್ದ ಯಾತ್ರೆಗೆ ಬೇರೆ ಪಕ್ಷಗಳವರೂ ಸೇರಿಕೊಳ್ಳಬಹುದೆಂದು ಹೇಳಿದ್ದು ಮುಖ್ಯಮಂತ್ರಿಗಳಿಗೆ ಶೋಭೆ ತರುವುದಿಲ್ಲ. ರಾಜಕೀಯ ಪಕ್ಷಗಳಿಗೆ ಅಂತಹ ಕರೆ ನೀಡುವುದು ಔಚಿತ್ಯಪೂರ್ಣವೇ ಎಂಬುದು ಕೃಷ್ಣ ಅವರಿಗೆ ತಿಳಿದಿದೆ. ಅವರ ಪಕ್ಷ ಅಂತಹ ಸಂದರ್ಭಗಳಲ್ಲಿ ಹೇಗೆ ಸ್ಪಂದಿಸುತ್ತಿತ್ತೆಂಬುದು ಗೂಢವಾದ ವಿಷಯವೇನಲ್ಲ ; ಪಾದಯಾತ್ರೆಯು ಒಂದು ರಾಜಕೀಯ ಪ್ರದರ್ಶನವಾಗಿತ್ತೆಂಬುದು ಸಹ ಮುಚ್ಚಿಟ್ಟ ಸಂಗತಿಯೇನಲ್ಲ. ಆ ರಾಜಕೀಯವನ್ನು ತಾವು ಮಾಡಿಕೊಂಡು ಲಾಭ ಗಳಿಸಲಾಗಲಿಲ್ಲವೆಂಬ ವ್ಯಥೆ ವಿರೋಧ ಪಕ್ಷಗಳ ಕೆಲವರನ್ನು ಅಲುಗಾಡಿಸಿದೆ. ಆದ್ದರಿಂದಲೇ ಅವರಲ್ಲಿ ಕೆಲವರು ಕಟುವಾಗಿ ಮಾತನಾಡಿ ಮೈ ಪರಚಿಕೊಂಡರು. ಪಾದಯಾತ್ರೆಯಿಂದ ಶಾಂತಿ ನೆಲೆಸಿತೆಂಬುದಕ್ಕಿಂತಲೂ ಕೊಡಗು-ಮೈಸೂರು ಜಿಲ್ಲೆಗಳಲ್ಲಿ ಆದ ಮಳೆ ಜೀವ ತುಂಬಿತೆಂದು ಹೇಳುವುದು ಹೆಚ್ಚು ಸಮಂಜಸ. ಪಾದಯಾತ್ರೆ ಮಾಡಿದ್ದು ಸರಿಯೇ, ಇಲ್ಲವೇ, ಎಂಬುದು ಅಪ್ರಸ್ತುತ. ಏಕೆಂದರೆ ತಮ್ಮ ಪಕ್ಷದ ರಾಜಕೀಯ ವರ್ಚಸ್ಸನ್ನು ವೃದ್ಧಿಗೊಳಿಸಿಕೊಳ್ಳುವುದು ಎಲ್ಲರ ಹಕ್ಕೂ ಆಗಿರುತ್ತದೆ. ಕಾವೇರಿ ಸಂದರ್ಭದಲ್ಲಿ ಇಂತಹ ಯತ್ನ ನಡೆದುದಕ್ಕೆ ಪಶ್ಚಾತ್ತಾಪ ಪಡಬೇಕೋ, ಇಲ್ಲವೋ, ಎಂಬುದು ವೈಯ್ಯಕ್ತಿಕ ಅಭಿಪ್ರಾಯವಷ್ಟೇ ಆಗಬಲ್ಲದು.

ಕಾವೇರಿ ನೀರಿನ ಹಂಚಿಕೆಯ ಬಗೆಗೆ ಈ ವರ್ಷ ನಡೆದ ಘಟನೆಗಳಲ್ಲಿ ಅತಿ ಮಾರ್ಮಿಕವಾದುದು ಸರ್ವೋಚ್ಚ ನ್ಯಾಯಾಲಯದ ಉಚ್ಚಾರಣೆಗಳು. ನ್ಯಾಯಾಲಯವನ್ನು ಅವಹೇಳನ ಮಾಡಿದರೆಂಬ ಆಪಾದನೆಗೆ ಗುರಿಯಾಗಿರುವ ಮುಖ್ಯಮಂತ್ರಿಗಳು ಒಬ್ಬೊಂಟಿಗರಾಗಿ ಶಿಕ್ಷೆಗೆ ಗುರಿಯಾಗಕೂಡದೆಂಬುದನ್ನು ಯಾರೂ ನಿರಾಕರಿಸುವಂತಿಲ್ಲ. ವೈಯ್ಯಕ್ತಿಕ ಲಾಭಕ್ಕಾಗಿ ನ್ಯಾಯಾಲಯದ ನಿಂದನೆ ಮಾಡುವ ಪ್ರಸಂಗ ಇದಾಗಿರಲಿಲ್ಲ. ಇಷ್ಟಾಗಿಯೂ ಅವರ ಮೇಲಿನ ಆಪಾದನೆ ಸ್ಥಿರೀಕೃತವಾದರೆ ಇಡೀ ರಾಜ್ಯವು ಆ ಆಪಾದನೆಯನ್ನು ತನ್ನ ಮೇಲೆ ಹೊತ್ತುಕೊಳ್ಳುವುದು ಸಹಜಕ್ರಿಯೆಯಾಗಬೇಕು.

ಪ್ರಕೃತಿ ನಿಯಮವನ್ನು ಮೀರಿ ಯಾವ ಸಂವಿಧಾನವೂ ತನ್ನ ಶ್ರೇಷ್ಠತೆಯನ್ನು ಸಾರಿಕೊಳ್ಳಲಾಗದು. ಅಂತೆಯೇ ಸಂವಿಧಾನದಡಿಯಲ್ಲಿ ಬರುವ ಎಲ್ಲ ಅಂಗಗಳೂ ಕೂಡ. ಕಡಿಮೆ ಪ್ರಮಾಣದಲ್ಲಿ ಮಳೆ ಆದ ಸಂದರ್ಭದಲ್ಲಿ ನೀರಿನ ಹಂಚಿಕೆಯ ಸೂತ್ರವನ್ನು ಇಡೀ ದತ್ತಾಂಶಗಳ ಆಧಾರದ ಮೇಲೆ ಕೈಗೊಳ್ಳಬೇಕೇ ವಿನಾ ಅಧಿಕಾರಯುತವಾದ ಆಜ್ಞೆಗಳಿಂದಲ್ಲ. ಅಂದರೆ, ಯಾವುದೇ ತೀರ್ಮಾನವು ಪ್ರಾಯೋಗಿಕವಾಗಿ ಸಾಧ್ಯವಾಗಬಹುದಾದ ನೆಲೆಯಲ್ಲಿದ್ದರೆ ಮಾತ್ರ ಅದು ಕಾರ್ಯಗತವಾಗಬಲ್ಲದು. ಪ್ರಜಾಪ್ರತಿನಿಧಿಗಳು ಇದನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ಅಂತೆಯೇ ನ್ಯಾಯಾಲಯಗಳು ಸಹ. ಆಜ್ಞೆಯೊಂದನ್ನು ಹೊರಡಿಸಿ ಕಲ್ಲು ಬೇಯುವಂತಹ ನೀರನ್ನು ಹೊಂದಿಸಿಕೊಳ್ಳಲಾಗುವುದಿಲ್ಲವಲ್ಲ, ಹಾಗೆ ಬೇರೆಷ್ಟೋ ಪ್ರಸಂಗಗಳಿರುತ್ತವೆ. ಅದರ ವಿವೇಚನೆ ಯಥಾವತ್ತಾಗಿದ್ದರೆ ಜೀವನಕ್ರಮಕ್ಕೆ ಭಂಗ ಬರುವುದಿಲ್ಲ.

ನ್ಯಾಯಾಲಯಗಳ ಪರಿಧಿಗೆ ಸೇರಲಾಗದ ವಿಷಯಗಳೇನೂ ಇಲ್ಲವೇ ಎಂಬುದನ್ನು ಕೂಡ ಈ ಸಂದರ್ಭದಲ್ಲಿ ಚರ್ಚೆಗೆ ಒಡ್ಡಬೇಕು. ಉದಾಹರಣೆಗೆ, ಶ್ರೀರಾಮಚಂದ್ರನು ಹುಟ್ಟಿದ ಜಾಗ ಯಾವುದೆಂಬುದನ್ನು ಯಾವ ನ್ಯಾಯಾಲಯವು ಹೇಗೆ ತೀರ್ಮಾನಿಸಿದರೂ ಅವನು ವಾಲ್ಮೀಕಿಯ ಕವಿ ಪ್ರತಿಭೆಯಲ್ಲಿ ಹುಟ್ಟಿದವನೆಂಬ ಸತ್ಯ ಕಮರಿಹೋಗುವುದಿಲ್ಲ, ಅಂತಹ ಪ್ರಶ್ನೆಗೆ ಉತ್ತರ ಕೊಡುವ ಗೋಜಿಗೆ ಹೋಗದಿರುವುದೇ ನ್ಯಾಯಾಲಯಕ್ಕಿರುವ ಶ್ರೇಷ್ಠ ಮಾರ್ಗ. ಅಂತೆಯೇ, ಅಯೋಧ್ಯೆಯಲ್ಲಿ ಕೆಡವಲಾದ ಮಸೀದಿ ಇದ್ದ ಜಾಗದಲ್ಲಿ ಹಿಂದೊಮ್ಮೆ ಶ್ರೀರಾಮನ ದೇವಸ್ಥಾನವಿದ್ದಿತೇ ಎಂಬ ಪ್ರಶ್ನೆ ಕೂಡ ನ್ಯಾಯಾಲಯದಲ್ಲಿ ತೀರ್ಮಾನವಾಗುವುದರ ಬದಲು ಉತ್ಖನನ ಶಾಸ್ತ್ರದ ತಜ್ಞರ ವಾದ-ಪ್ರತಿವಾದಗಳಿಂದ ಇತ್ಯರ್ಥವಾಗುವುದು ಉಚಿತ. ಬಹುಶಃ ಪುರಾವೆಗಳನ್ನು ಪರೀಕ್ಷಿಸಲು ಅವರಿಗಿರುವ ಪರಿಣತಿ ಬೇರಾರಿಗೂ ಇರುವುದಿಲ್ಲ. ಮಳೆ ಬಾರದಿದ್ದಾಗ ಕತ್ತೆಗಳ ಮೆರವಣಿಗೆಯು ಎಷ್ಟು ಫಲಪ್ರದವೋ, ನೀರಿಲ್ಲದಿದ್ದಾಗ ಅದರ ಹಂಚಿಕೆಯ ಬಗೆಗಿನ ಉತ್ಕೃಷ್ಟ ಆಕಾಂಕ್ಷೆಗಳೂ ಅಷ್ಟೇ ಫಲಪ್ರದ. ಬರದ ಪರಿಸ್ಥಿತಿಯು ವಾಸ್ತವವೇ ಅಲ್ಲವೆಂಬಂತೆ ನಡೆದುಕೊಳ್ಳುವುದು ಜಯಲಲಿತಾ ಅಂಥವರಿಗೆ ಮಾತ್ರ ಸಾಧ್ಯ. ನಮ್ಮ ಮುತ್ಸದ್ದಿಗಳೆಲ್ಲಾ ಆ ಹಂತಕ್ಕೆ ಇಳಿದರೆ ನಮ್ಮ ಭವಿಷ್ಯ ಹೇಗಿದ್ದೀತು? ಗಂಭೀರವಾಗಿ ಯೋಚಿಸಬೇಕಾದ ಸಂಗತಿ.

ಕಾವೇರಿ ಸಂಬಂಧದಲ್ಲಿ ಇನ್ನೊಂದು ಪ್ರಶ್ನೆ ಪರಿಶೀಲನೆಗೆ ಯೋಗ್ಯವಾಗಿದೆ: ರಾಷ್ಟ್ರದ ಐಕ್ಯತೆಗಾಗಿ, ರಾಷ್ಟ್ರದ ಹಲವು ರಾಜ್ಯಗಳು ಏಕೀಭವಿಸಿಕೊಂಡು ಮುನ್ನಡೆಯಲು, ನೀರಿನ ಹಂಚಿಕೆಯ ವಿವಾದವೆದ್ದಾಗ ಪ್ರಾಜ್ಞರು ಯಾವ ನಿಲುವು ತಾಳಬೇಕು? ತಮ್ಮನ್ನು ತಾವು ಪ್ರಾಜ್ಞರೆಂದು ಭಾವಿಸಿಕೊಳ್ಳುವವರಿಗೆ ಮತ್ತು ತಾವು ಮಾತ್ರ ಪ್ರಾಜ್ಞರೆಂದು ತಿಳಿದುಕೊಳ್ಳುವವರಿಗೆ ಈ ಪ್ರಶ್ನೆ ಅನ್ವಯಿಸುವುದಿಲ್ಲ; ಏಕೆಂದರೆ, ಅವರು ಉಪದೇಶ ನೀಡುವ ಸ್ಥಾನದಲ್ಲಿ ನಿಂತು ಅವಲೋಕಿಸುತ್ತಾರೆ. ಕುಲದೀಪ ನಯ್ಯರ್, ನಾಗರಿಕ ಹಕ್ಕುಗಳ ಸಂಘ, ಮುಂತಾದ ಕಡೆಗಳಿಂದ ಬಂದ ವಿವೇಕವಾಣಿ ಈ ತೆರನಾದ್ದು. ಸಂವಿಧಾನಕ್ಕೆ ಚ್ಯುತಿಯುಂಟುಮಾಡುವುದೇ ಕರ್ನಾಟಕ ಸರ್ಕಾರದ ನೀತಿ ಎಂಬ ಭಾವನೆ ಉಂಟುಮಾಡುವ ರೀತಿಯಲ್ಲಿ ಆ ವಾಣಿ ಮೊಳಗಿತು. ಸೌಹಾರ್ದಯುತವಾಗಿ ಎಲ್ಲವನ್ನೂ ಬಗೆಹರಿಸಿಕೊಳ್ಳಬೇಕೆಂಬುದು ಎಲ್ಲರ ಆಶಯವೂ ಹೌದು. ಆದರೆ, ಇಂತಿಷ್ಟು ನೀರನ್ನು ಪ್ರತಿದಿನವೂ ಹರಿಸಬೇಕೆಂದು ಹೇಳಿದಾಗ ಅದು ಪ್ರಾಯೋಗಿಕವಾಗಿ ಅಸಾಧ್ಯವಾದರೆ ಏನು ಮಾಡಬೇಕೆಂಬ ಕ್ಲಿಷ್ಟಕರ ಪ್ರಶ್ನೆಯನ್ನು ಕ್ಲೀಶೆಗಳಿಂದ ಉತ್ತರಿಸಿದರೆ ಅದು ಅಸಂಬದ್ಧವಾಗುತ್ತದೆ. ಕಾವೇರಿ ನೀರಿನ ಬಗ್ಗೆ ಕರ್ನಾಟಕ ಸರ್ಕಾರದ ನೀತಿಯನ್ನು ಸಮರ್ಥಿಸುವವರೆಲ್ಲಾ ತಮಿಳುನಾಡಿನ ಜನರ ದ್ವೇಷಿಗಳೆಂದು ವ್ಯಾಖ್ಯಾನಿಸುವುದು ಮೂರ್ಖತನವೆಂದು ಒತ್ತಿಹೇಳಬೇಕಾಗಿಲ್ಲ, ಹಾಗೆ ಸಮರ್ಥನೆ ಮಾಡುವವರಲ್ಲಿ ಅನ್ಯಭಾಷಾ ದ್ವೇಷಿಗಳೂ ಇರಬಹುದೆಂಬ ಕಾರಣಕ್ಕೆ ಆ ನೀತಿಯನ್ನು ಪ್ರಾಜ್ಞರು ಯಾರೂ ಸಮರ್ಥಿಸಕೂಡದೆಂದು ನಿರೀಕ್ಷಿಸುವುದು ಅತಿಬುದ್ಧಿವಂತಿಕೆಯಾಗಬಹುದು ಇಲ್ಲವೇ ನುಣುಚಿಕೊಳ್ಳುವ ಜಾಣತನವಾಗಬಹುದು, ಅಷ್ಟೆ. ನಮ್ಮ ರಾಷ್ಟ್ರದ ಐಕ್ಯತೆಯು ವಿರಸಗಳ ನಡುವಿನಲ್ಲೂ ಗಟ್ಟಿಗೊಳ್ಳಬೇಕಾದ ಪ್ರಮೇಯವಿದೆ. ಬೇರೆಬೇರೆ ರಾಜ್ಯಗಳ ಆಕಾಂಕ್ಷೆಗಳೆಲ್ಲಾ ರಾಷ್ಟ್ರದ ಒಡಕಿಗೆ ಕಾರಣವಾಗುತ್ತದೆಂದು ಹೊರಟರೆ ನಾವು ದಿಕ್ಕುಗಾಣದವರಾಗುತ್ತೇವೆ.

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☏ : ೨೨೫೧೬೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☏ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☏ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☏ : ೪೨೪೩೦೨

## ಪತ್ರಗಳು

ಪಿ. ವಿ. ಲೋಕೇಶ್ ಅವರ ''ಕುದುರೆಮುಖ ಹೋರಾಟ : ಪ್ರಶ್ನೆಯಾಗಿಯೇ ಉಳಿದ ಪರ್ಯಾಯ'' ಎಂಬ ಪ್ರತಿಕ್ರಿಯೆ ಲೇಖನ ಓದಿದೆ. ಒಂದು ಕಡೆ ಸಾಮ್ರಾಜ್ಯಶಾಹಿ ವಿರೋಧಿ ಎಂದು ಹೇಳುತ್ತಲೇ ಇನ್ನೊಂದು ಕಡೆ ಸಾಮ್ರಾಜ್ಯಶಾಹಿ, ಜಾಗತೀಕರಣ ವಿರೋಧಿಸುವುದರಲ್ಲಿ ಲೇಖಕರಿಗೆ ಗೊಂದಲವಿದೆ. ಮತ್ತೊಂದು ಕಡೆ ಕಬ್ಬಿಣಕ್ಕೆ ಪರಾವಲಂಬಿಗಳಾಗಬಾರದು ಎಂದು ಹೇಳುವ ಮೂಲಕ ಗಣಿಗಾರಿಕೆ ಪರವಾಗಿ ವಾದ ಮಾಡುತ್ತಾರೆ. ಬಹುರಾಷ್ಟ್ರೀಯ ಕಂಪೆನಿಗಳಿಗೆ ಸರ್ಕಾರ ಅನುಮತಿ ನಿಲ್ಲಿಸುವುದಿಲ್ಲ ಎಂದಾದರೆ ಹೋರಾಟ ಮಾಡುವುದೇ ಸರಿಯಲ್ಲವೇ ? ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟ ಬರೀ ಆದಿವಾಸಿಗಳಿಗೆ ಅರಣ್ಯದಲ್ಲಿ ಭೂಮಿಗೋಸ್ಕರ ಹೋರಾಟ ಎಂದು ಅರ್ಥ ಮಾಡಿಕೊಂಡಂತಿದೆ. ಆದರೆ ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟ ನೇರ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ ಹಾಗೂ ಕನ್ನಡ ನಾಡಿನ ನೆಲ, ಜಲ ಸಂಪನ್ಮೂಲಗಳನ್ನು ಉಳಿಸುವ ಹೋರಾಟ.

*ಬೆಂಗಳೂರು* — ***ಶೃಂಗೇರಿ ಕೇಶವ ಮೂರ್ತಿ***

ನಿಮ್ಮ ಪತ್ರಿಕೆ ಪ್ರಗತಿಪರವಾದ ವಿಚಾರಗಳನ್ನು ಲೇಖನಗಳ ಮೂಲಕ ಓದಿಸಿ, ನಮ್ಮ ಗಮನ ಸೆಳೆಯುತ್ತಿದೆ. ಒಟ್ಟಾರೆ ಪತ್ರಿಕೆ ಎಲ್ಲ ಮುಖಗಳಿಂದ ಸುಂದರವಾಗಿ ಗೋಚರಿಸುತ್ತ ಮನ್ನುಗ್ಗುತ್ತಿದೆ. ಈ ಸಂತೋಷ ನಿರಂತರವಾಗಿ ಹರಿಸಲಿ.

*ಮೂಡಲಗಿ* — ***ಡಾ|| ಗುಂಡಣ್ಣ ಕಲಬುರ್ಗಿ***

'ಹೊಂಟಿರೇನ ಹೊಂಟಬಿಟ್ಟೇನ ! (ಬಿ. ಆರ್. ಪೊಲೀಸ್ ಪಾಟೀಲ) ಅನೌಪಚಾರಿಕ ಸಂದರ್ಶನ ಸತ್ಯಕಾಮರ ಕುರಿತ ವ್ಯಕ್ತಿತ್ವವೊಂದನ್ನು ಪರಿಚಯಿಸಿದೆ. ನೇರ ಪ್ರಶ್ನೆಗೆ ಮೊನಚಾದ ಉತ್ತರ, ಸತ್ಯಕಾಮರ ಸಾಹಿತ್ಯದ ಮೂಲ ಸೆಲೆ ಬಗ್ಗೆ ಅವರಿಗಿದ್ದ ಅಭಿಪ್ರಾಯ ತಿಳಿಸಿದಂತಾಗಿದೆ. ಇಂಥಾ ಬರಹಗಳಿಂದ 'ಹೊಸತು' ವಿಗೊಂದು ಹೊಸ ಮೌಲ್ಯ ಬಂದಂತೆ !

*ಕಣವೆಬಿಳಚಿ* — ***ಸಂತೇಬೆನ್ನೂರು ಫೈಜ್ನಟ್ರಾಜ್***

ಮಾನಸಿಕ ಶಕ್ತಿಯನ್ನು ವೃದ್ಧಿಸಬೇಕಾದ ಶಿಕ್ಷಣವನ್ನು ಸ್ಪರ್ಧೆಯ ಹೆಸರಲ್ಲಿ ಬಹುಮಟ್ಟಿಗೆ ಪೋಷಕರು ಮಕ್ಕಳ ಮೇಲೆ ಮಾನಸಿಕ ಒತ್ತಡ ಏರುತ್ತಿರುವುದು ಸರ್ವೇ ಸಾಮಾನ್ಯವಾಗಿದೆ. ಈ ಪರಿಸ್ಥಿತಿಯಲ್ಲಿ 'ಹೊರೆಯಾದ ವಿದ್ಯಾಭ್ಯಾಸ' ಲೇಖನ ಪ್ರಸ್ತುತವಾಗಿದೆ.

*ಕ್ಯಾತಘಟ್ಟ* — ***ಕೆ. ರವಿಕುಮಾರ***

'ಹೊಸತು' ಮಾಸಪತ್ರಿಕೆ ತುಂಬ ಉಪಯುಕ್ತ ವಿಷಯಗಳನ್ನು ತಿಳಿಸುವ ಪತ್ರಿಕೆಯಾಗಿದೆ. ಇಂತಹ ಪತ್ರಿಕೆ ಕನ್ನಡದಲ್ಲಿ ಇದೆಯಲ್ಲ ಎಂಬ ಹೆಮ್ಮೆ ನನಗಿದೆ. ಆದರೆ ನೀವು ಈ ಸುಂದರ ಪತ್ರಿಕೆಯಲ್ಲಿ ಒಮ್ಮೊಮ್ಮೆ 'ಹಿಂದು' ವಾಹಿನಿಗೆ ಕಲಂಕ ತರುವಂತಹ ಕಥೆಗಳನ್ನು ಪ್ರಕಟಿಸಿದ್ದೀರಿ. ಕ್ರೈಸ್ತ, ಮುಸ್ಲಿಂ, ಹೀಗೆ ಜಗತ್ತಿನ ಯಾವ ಧರ್ಮದಲ್ಲಿಯಾದರೂ ದೋಷಗಳು ಇದ್ದೇ ಇವೆ. ಹಿಂದುವಾಹಿನಿ ಒಂದು ಗಂಗಾವಾಹಿನಿ. ಅದಕ್ಕೆ ಕೆಸರು ಎಸೆದರೂ ಅದು ತನ್ನ ಗತಿಯಲ್ಲಿ ತಾನು ಸಾಗುತ್ತಿದೆ. ಹಿಂದುವಾಹಿನಿಗೆ ಅಸಹ್ಯಪಡುವಂತಹ ಲೇಖನಗಳನ್ನು ಪ್ರಕಟಿಸಬೇಡಿರಿ. ಬಡತನ, ಅನ್ಯಾಯ, ಶೋಷಣೆ, ಅಸ್ಪೃಶ್ಯತೆ, ವರ್ಣಭೇದ ಕುರಿತು ಬರೆಯಿರಿ. ನಮ್ಮ ಸಾಹಿತಿಗಳು, ದಾಸರು, ವಚನಕಾರರು ಇದನ್ನೇ ಮಾಡಿದ್ದಾರೆ.

*ಬೆಳಗಾವಿ* — ***ಅಪ್ಪಾಸಾಹೇಬ ನಾಯಕ***

### ಪರಿಸರ ಪ್ರೇಮಿ ಡಾ|| ಎಸ್. ವಿ. ನರಸಿಂಹನ್

'ಹೊಸತು' ಅಕ್ಟೋಬರ್ ೨೦೦೨ ಹೊದಿಕೆಯ ಎರಡನೆಯ ಪುಟ ಎಸ್.ವಿ.ನ. ಅವರ ಸಮಾಜ ಸೇವೆ ಮತ್ತು ಜನ ಕಳಕಳಿಯ ಒಂದು ಮುಖ ಮಾತ್ರ. ಇನ್ನೊಂದು ಮುಖ: ನಕ್ಷತ್ರದರ್ಶನ. ಮನೆಯಲ್ಲೇ ಗಣಕದಲ್ಲಿ ಬ್ರಹ್ಮಾಂಡ ಕಾಣಿಸಿ ವಿವರಿಸಿ ಅನುಕೂಲ ಸನ್ನಿವೇಶಗಳಲ್ಲಿ ಆಸಕ್ತರನ್ನು ಬೆಟ್ಟದ ಕೊಡಿಗೋ




ಬಯಲಿನ ಬಿತ್ತರಕ್ಕೋ ಕರೆದೊಯ್ದು ಆಕಾಶದಲ್ಲಿ ಆ ನಕ್ಷತ್ರಗಳನ್ನೂ ಪುಂಜಗಳನ್ನೂ ತೋರಿಸಿ ಜನರಲ್ಲಿ ಹೊಸದೃಷ್ಟಿ ಬೆಳೆಯಲು ಕಾರಣರಾಗುತ್ತಿದ್ದಾರೆ. ಇಂಥ ನಿಸ್ಪೃಹ ಮೌನ ಜ್ಞಾನ ಸೇವಕರೇ ಋಜು ಪ್ರಾಮಾಣಿಕರು, ನೆಲದ ಸಾರ.

*ಮೈಸೂರು* — ***ಜಿ. ಟಿ. ನಾರಾಯಣರಾವ್***

> **ಒಂದು ತಿದ್ದುಪಡಿ**
>
> ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ ಅವರ 'ಕನ್ನಡ ಸಾಹಿತ್ಯ-ಧರ್ಮ : ಸಾಮರಸ್ಯದ ನೆಲೆಗಳು' ಲೇಖನದ ಪ್ರಾರಂಭದಲ್ಲಿ ಉಲ್ಲೇಖಿಸಿದ ಶ್ಲೋಕವು ಕ್ರಿ. ಶ. ಸು. ೧೪ನೆಯ ಶತಮಾನಕ್ಕೆ ಸೇರಿದ್ದು. ಅವರು ಪ್ರಸ್ತಾಪಿಸುವ ಕಾಲಘಟ್ಟಕ್ಕೆ ಸೇರಿದ್ದಲ್ಲ.
>
> ***ಡಾ|| ಎಚ್. ಎಸ್. ಗೋಪಾಲ ರಾವ್***

ಡಾ|| ಎಸ್. ವಿ. ನರಸಿಂಹನ್, ವಿರಾಜಪೇಟೆ, ಇವರ ಪರಿಸರ ಪ್ರೇಮಿ ಮತ್ತು ವನ್ಯಜೀವಿ ಸಪ್ತಾಹದ ಸಂದೇಶವನ್ನು ಸಾರುವ ಅವರ ವಿಶೇಷ ಸ್ವನಿರ್ಮಿತ ಅಂದವಾದ ಕಾರ್ಡುಗಳ ಪರಿಚಯ ತುಂಬಾ ಸೊಗಸಾಗಿ ಬಂದಿದೆ. ಸೂಕ್ತ ಸಮಯದಲ್ಲಿ ಪ್ರಕಟಿಸಿರುವುದು ಸ್ತುತ್ಯಾರ್ಹ.

*ಬಿಗಂಬಿಲ* — ***ಕೆ. ರಾಜಾರಾಮ ಭಟ್ಟ***

ಅಕ್ಟೋಬರ್ ಸಂಚಿಕೆಯ ಕೆಲವು ಲೇಖನಗಳು ತುಂಬಾ ಆಲೋಚನೆಗೆ ಗ್ರಾಸವನ್ನು ಒದಗಿಸುತ್ತವೆ. ಓದುಗರಿಗೆ ವೈಚಾರಿಕ, ವೈಜ್ಞಾನಿಕ ಮನೋಭಾವ ಬೆಳೆಸುವಲ್ಲಿ ಪತ್ರಿಕೆಯ ಪಾತ್ರ ದೊಡ್ಡ ಸಾಧನೆಯಾಗಿದೆ. ಪ್ರೊ. ಶಿವರಾಮಯ್ಯನವರ ಲೇಖನ ತುಂಬಾ ಮಾರ್ಮಿಕವಾಗಿದೆ. ದಲಿತರಲ್ಲಿರುವ ಸಂಘಟನೆಯ ಕೊರತೆ, ರಾಜಕೀಯ ಲಾಭ ಸಿಗುತ್ತದೆಂಬ ಹುಸಿನಂಬಿಕೆಯೇ ಮುಖ್ಯಕಾರಣ. ಆದರೆ ಭಾರತದಲ್ಲಿ ಡಾ|| ಅಂಬೇಡ್ಕರ್ ಅಂಥ ಮಹಾಮಾನವತಾವಾದಿ ಹುಟ್ಟದಿದ್ದರೆ ದಲಿತರ ಬದುಕನ್ನು ಕಲ್ಪಿಸಲೂ ಅಸಾಧ್ಯವಾಗುತ್ತಿತ್ತು. ಆದ್ದರಿಂದ ನಮ್ಮ ಆಲೋಚನೆಗಳು ಯಾವಾಗಲೂ ಸೀಮಿತವಾಗಿರದೇ ವಿಶಾಲದೃಷ್ಟಿ ಹೊಂದಿರಬೇಕಾದುದು ಅಗತ್ಯ. ನಮ್ಮಲ್ಲೇ ಒಡಕು-ಅಸಮಾಧಾನ ಇದ್ದಾಗ ಇತರರನ್ನು ದೂರಲು ಸಾಧ್ಯವೇ? ಈ ಮನೋಭಾವ ತೊಲಗದೇ ಹೋದರೆ ಮತ್ತೆ ಸಂಘಟಿತರಾಗಲು ಅಸಾಧ್ಯ. ಇದೊಂದು ಎಚ್ಚರಿಕೆಯ ಗಂಟೆಯೂ ಹೌದು.

*ಶಂಕರಘಟ್ಟ* — ***ಟಿ. ರಾಜೇಂದ್ರ, ತಗಡ್ಲಿ***

'ಸಾಹಿತ್ಯದ ಆಶಯ' ಹೊಸತು ಅಕ್ಟೋಬರ್ ೨೦೦೨ ಸಂಪಾದಕರ ಲೇಖನಿಯಿಂದ ಮೂಡಿಬಂದಿರುವ ಬರಹ ವಾಸ್ತವತೆಯ ಪ್ರತೀಕ ಮತ್ತು ಸಾರ್ವಕಾಲಿಕ. ಸೊಗಸಾದ ನಿರೂಪಣೆ, ಚಮತ್ಕಾರದಿಂದ ಕೂಡಿದ ಅಭಿವ್ಯಕ್ತಿ, ದಟ್ಟವಾದ ಅನುಭವ ಮತ್ತು ಮಾನವೀಯ ಮೌಲ್ಯಗಳು ಏಕತ್ರ ಕೂಡಿದಾಗ ಸಾಹಿತ್ಯ ಶ್ರೇಷ್ಠ ಎನ್ನುವ ಸಂಪಾದಕರ ನುಡಿ ಅಕ್ಷರಶಃ ನಿಜ. ನಾವು ಅರಿಯಬೇಕಾದ್ದು ಸಿದ್ಧಾಂತಿ ಯಾರೆಂದು ಅಲ್ಲ, ಸಿದ್ಧಾಂತವೇನೆಂಬುದನ್ನು. ಸಾಹಿತ್ಯದಲ್ಲಿನ ಒಳಿತನ್ನು ಸವಿದು ಆನಂದಿಸಬೇಕು. ಶ್ರೇಷ್ಠತೆಯ ಮಾಪನ ಯಾರೊಬ್ಬರ ಹಕ್ಕಲ್ಲ ಎನ್ನುವ ಧೋರಣೆಯೂ ಪ್ರಶಂಸನೀಯ. ಸಾಹಿತ್ಯದಲ್ಲಿ ಶ್ರೇಷ್ಠ ಕನಿಷ್ಠವೆಂಬ ಧೋರಣೆಯ ವ್ಯಾಖ್ಯಾನ ಸಲ್ಲ.

*ಬೆಂಗಳೂರು* — ***ಎನ್. ಎಲ್. ರಾಮಮೂರ್ತಿ***

ಅಕ್ಟೋಬರ್ ೨೦೦೨ರ 'ಹೊಸತು' ಕೈ ಸೇರಿತು. ದಿ. ಬಿ. ವಿ. ಕಾರಂತರ ಬಗ್ಗೆ ಮಂಗಳಾ ಎನ್.ರವರ ಲೇಖನ ಓದುತ್ತಿದ್ದಂತೆ ನನಗರಿವಿಲ್ಲದೆ ಕಣ್ಣಂಚಿನಲ್ಲಿ ನೀರ ಹನಿ ಬಂದಿತು. 'ರಂಗಭೂಮಿ'ಗಾಗಿ ಈ ಮಹಾನ್ ವ್ಯಕ್ತಿ ಮಾಡಿದ ತ್ಯಾಗದ ಬಗ್ಗೆ ಗೌರವ ಭಾವನೆ ಮೂಡಿತು. ದಿ. ಕಾರಂತರು ಅವರ ಶಿಷ್ಯವೃಂದದೊಂದಿಗೆ ಈಗಲೂ ಇನ್ನು ಮುಂದಕ್ಕೂ ಇದ್ದು ಸದಾ ಅಮರರಾಗಿರುತ್ತಾರೆ.

ಡಾ|| ಸುಮಿತ್ರಾ, ಎಲ್.ಸಿ. ಅವರ 'ಗಣ ಬಿಟ್ಟಿದ್ದು' ಒಂದು ಸಣ್ಣ ವಿಷಯವನ್ನ ಕೈಗೆತ್ತಿಕೊಂಡು ತನ್ನ ಲೇಖನ ಸಾಮರ್ಥ್ಯದಿಂದ ಪ್ರತಿಯೊಂದು ವಾಕ್ಯಕ್ಕೂ ಹಳ್ಳಿಯ ಮಣ್ಣಿನ ಸೊಗಡನ್ನ ಸೇರಿಸಿ ಓದಿಸಿಕೊಂಡು ಹೋಗುವಂತೆ ಮಾಡಿದ್ದಾರೆ. ಇವರೀರ್ವರಿಗೂ ಅಭಿನಂದನೆಗಳು.

*ಶಿವಮೊಗ್ಗ* — ***ಎನ್. ಶೇಷಗಿರಿ ರಾವ್***

ಇದು ಅಕ್ಟೋಬರ್ 'ಹೊಸತು'ವಿನಲ್ಲಿನ ''ಹೊರೆಯಾದ ವಿದ್ಯಾಭ್ಯಾಸ''ದ ಬಗ್ಗೆ.

ಮೌಲ್ಯಗಳ ಸಂವರ್ಧನೆ ಕುರಿತು ಸಾಮಾನ್ಯವಾಗಿ ನಾವು ನಿರ್ಲಕ್ಷಿಸುವುದು ಗ್ರಾಮೀಣ ಪ್ರದೇಶದ ಮಕ್ಕಳ ಬಗ್ಗೆ. ನಗರಗಳ ಪೋಷಕರು ಬಹುಮಟ್ಟಿಗೆ ವಿದ್ಯಾವಂತ ರಿರುತ್ತಾರೆ. ತಮ್ಮ ಮಕ್ಕಳ ಅಭ್ಯಾಸದ ಬಗ್ಗೆ ಕಾಳಜಿ, ನೆರವು ನೀಡಬಲ್ಲರು. ಆದರೆ ನಿರಕ್ಷರರೇ ಅಧಿಕವಿರುವ ಗ್ರಾಮೀಣ ಭಾಗದಲ್ಲಿ ಪೋಷಕರು ತಮ್ಮ ಮಕ್ಕಳಿಗೆ ಕಲಿಕೆಗೆ ಏನು ನೆರವು ಕೊಟ್ಟಾರು? ಅವರ ಮೇಲೆ ಹೊಣೆ ಹೊರೆಸುವುದು ಎಲ್ಲಿ? ಅಲ್ಲಿ ನಿರ್ವಾಹವಿಲ್ಲದೆ ಶಿಕ್ಷಕರೇ ಆ ಹೊಣೆ ಹೊರಬೇಕಾಗುತ್ತದೆ. ''ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು'' ಅಲ್ಲಿ ಸಲ್ಲುವುದಿಲ್ಲ.

ಇನ್ನು ಶಿಕ್ಷಕರು. ಕೇವಲ ವಿಷಯ, ಕಲಿಸುವ ಕ್ರಮ ಎರಡೇ ಮುಖ್ಯ. ಮಕ್ಕಳಿಗೆ ಮಾದರಿಯಾಗಬಲ್ಲ ಶಿಕ್ಷಕರು ತಯಾರಾಗುತ್ತಿರುವರೇ? ಸಾರಾಸಗಟು ೧೫,೦೦೦-೨೦,೦೦೦ ಶಿಕ್ಷಕರನ್ನು ನೇಮಕ ಮಾಡುವವರು ಏನೆಲ್ಲ ಗಮನಿಸಿರುತ್ತಾರೆ? ಆ ಶಿಕ್ಷಕರ ಜ್ಞಾನಾರ್ಜನೆ? ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಈಗ ನೇಮಕವಾಗುತ್ತಿರುವಂಥ ಶಿಕ್ಷಕರಿಂದ ಬಹುಶಃ ಈ ಎಲ್ಲ ನಿರೀಕ್ಷಿಸಲು ದುಸ್ಸಾಧ್ಯ? ಆ ಹಂತದಲ್ಲಿ ಎಲ್ಲ ಸರಿಪಡಿಸುವ ಪ್ರಯತ್ನವಿಲ್ಲದೆ ತರುವಾಯದ ಶಿಕ್ಷಣ 'ಗಿಳಿಪಾಠ'ವಷ್ಟೇ ಆದೀತು. ವಿಷಯಗಳ ಸ್ಪಷ್ಟ ಕಲಿಕೆಯಾಗಲೀ, ಮೌಲ್ಯ ಸಂವರ್ಧನೆಯಾಗಲೀ ಮನಗೂಡುವುದು ಆದೀತೇ ಯೋಚಿಸಬೇಕು. ಕಲಿಸಲು ಸೋತ ಶಿಕ್ಷಕ ಬೆತ್ತಕ್ಕೆ ಶರಣು ಹೋಗುವವ.

*ಸಾಗರ* — ***ಬ. ನಾ. ರಘುರಾಮ***

ಶ್ರೀ ಪಿ. ವಿ. ಲೋಕೇಶ್ ಅವರ ವಾದದಲ್ಲಿ ಸ್ವಾವಲಂಬನೆಯ ಮಾತು ಬಂದಿರುವುದು ಸೂಕ್ತವಾಗಿದೆ. ಉಕ್ಕು ಬೇಕಾದರೆ ನಮ್ಮ ಕಬ್ಬಿಣದ ಅದಿರನ್ನು ಬಳಸಬೇಕು; ಅಂದರೆ, ಗಣಿಗಾರಿಕೆ ಬೇಕು. ಕಚ್ಚಾ ಸಾಮಗ್ರಿಯನ್ನು ಹೊರದೇಶಕ್ಕೆ ಕಳಿಸುವುದಕ್ಕಾಗಿ ಗಣಿಗಾರಿಕೆ ಬೇಡ. ಅದಿರನ್ನು ತೆಗೆಯುವುದು ಬೇಡವೆಂದಾದರೆ ಉಕ್ಕನ್ನು ಉಪಯೋಗಿಸುವುದು ಬೇಡವೆಂದೂ ಹೇಳಬೇಕು. ಅದನ್ನು ಆಮದು ಮಾಡಿಕೊಳ್ಳುವುದು ಅನರ್ಥಕ್ಕೆ ಹಾದಿ. ಕುದುರೆಮುಖದಲ್ಲಿ ಗಣಿಗಾರಿಕೆ ಬೇಡವೆಂದರೆ ಅದಿರನ್ನು ಇನ್ನೆಲ್ಲಿಂದ ತರಬೇಕು? ಪರಿಸರ ಹಾಳುಮಾಡದೆ ಅಭಿವೃದ್ಧಿ ಸಾಧಿಸುವ ಜಾಣತನ ಕಲಿಯಬೇಕು.

*ಬೆಂಗಳೂರು* — ***ಜಿ. ನಿತಿತಾ ಮೌಳಿ***



ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಆಗಿರುವ ವ್ಯಾಪಕ ಬದಲಾವಣೆಗಳು ಹಾಗೂ ಸಾಧಿಸಿರುವ ಪ್ರಗತಿಯ ಕುರಿತ ಮೌಲ್ಯಮಾಪನವನ್ನು ಸಮಗ್ರ ದೃಷ್ಟಿಕೋನದ ಆಧಾರದ ಮೇಲೆ ಮಾಡುವುದು ಸೂಕ್ತ.

ಇಂದಿನ ಯುವಜನರಲ್ಲಿ ಪುಟಿಯುತ್ತಿರುವ ಉಲ್ಲಾಸ, ಚಿಮ್ಮುತ್ತಿರುವ ಚೈತನ್ಯವನ್ನು ನೋಡಿ ಅಚ್ಚರಿಗೊಂಡಿದ್ದೇನೆ, ಖುಷಿಪಟ್ಟಿದ್ದೇನೆ. ರಾಷ್ಟ್ರದ ಭವಿಷ್ಯದ ಬಗ್ಗೆ ಭರವಸೆ ಮೂಡಿಸುವ ಬೆಳವಣಿಗೆ ಇದು. ಕೆಲವು ಮೌಲ್ಯಗಳು ಕ್ಷಯಿಸುತ್ತಿವೆ. ಸಮಾಜದಲ್ಲಿರಬೇಕಾದ ಶಿಸ್ತು, ಬಿಗಿ ಸಡಿಲವಾಗುತ್ತಿರುವುದೂ ನಿಜ. ವೃತ್ತಿಪರ ಮನೋಭಾವವೂ ಹೆಚ್ಚುತ್ತಿದೆ. ವಿಕಾಸಗೊಳ್ಳುತ್ತಿರುವ, ಪ್ರಗತಿಯತ್ತ ಸಾಗುತ್ತಿರುವ ಸಮಾಜದ ಸಂಕೀರ್ಣ ಹಾದಿಯಲ್ಲಿ ಈ ಲಕ್ಷಣಗಳು ಅನಿವಾರ್ಯ ಎನಿಸುತ್ತದೆ. ಆದರೆ, ಇದಕ್ಕೆ ತಿದ್ದುಪಾಟೂ ಇದೆಯಲ್ಲವೆ? ಇದೇ ಸಮಯದಲ್ಲಿ ನಮ್ಮ ಜನಜೀವನದ ಎಲ್ಲ ಸ್ತರಗಳಲ್ಲಿಯೂ ಹೊಸಹೊಸ ಅವಕಾಶಗಳು ಹುಟ್ಟಿಕೊಳ್ಳುತ್ತಿವೆ. ಇದೊಂದು ಧನಾತ್ಮಕ ಬೆಳವಣಿಗೆ. ನಿರಾಶಾವಾದಕ್ಕೆ ಇಲ್ಲಿ ಎಡೆಯಿರಬಾರದೆಂದೇ ನನ್ನ ಅಭಿಪ್ರಾಯ.

ಒಂದು ಪೀಳಿಗೆಯ ಹಾಗೂ ಮತ್ತೊಂದು ಪೀಳಿಗೆಯ ಜನರ ಮಧ್ಯೆ ವಯಸ್ಕರ ಮತ್ತು ಯುವಜನರ ಮಧ್ಯೆ ಅಂತರ ಹೆಚ್ಚಾಗುತ್ತಿದೆ ಎಂಬ ನಂಬಿಕೆಯುಳ್ಳವರೂ ಇದ್ದಾರೆ. ಇದು ಸರಿಯಲ್ಲವೆಂದು ನನ್ನ ಅನಿಸಿಕೆ. ಬದಲಾಗಿ, ವ್ಯಕ್ತಿವ್ಯಕ್ತಿಗಳ ಪರಸ್ಪರ ಸಂಬಂಧಗಳು ಹೆಚ್ಚಾಗುತ್ತಿವೆ. ಇದು ನಿಜಕ್ಕೂ ಆಶಾದಾಯಕವಾದ್ದು.

ಇಂದು ಗಾಂಧಿ ಜಯಂತಿ. ಗಾಂಧೀಜಿ ರಾಷ್ಟ್ರದ ಮುಂದಿಟ್ಟ ತತ್ತ್ವ, ಆದರ್ಶ ಮತ್ತು ಮೌಲ್ಯಗಳು ಎಷ್ಟರಮಟ್ಟಿಗೆ ಅಳವಡಿಸಿಕೊಳ್ಳಲು ಸಾಧ್ಯವಾಗಿದೆ ಎಂಬುದರ ಬಗೆಗಿನ ವ್ಯಾಪಕ ಚರ್ಚೆಗೆ ಇದು ಒಂದು ಸಂದರ್ಭವೂ ಕೂಡ.

ಜನಾಭಿಪ್ರಾಯವನ್ನು ರೂಪಿಸುವ ನಿಟ್ಟಿನಲ್ಲಿ ಮಾಧ್ಯಮ ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುತ್ತಿಲ್ಲ ಎಂದೆನಿಸುವ ಇಂದಿನ ದಿನಗಳಲ್ಲಿ 'ಹೊಸತು' ತನ್ನ ಸ್ವಂತಿಕೆಯಿಂದ ಕನ್ನಡದ ಜನರನ್ನು ತಲುಪುತ್ತಿರುವುದು ಸಂತೋಷದ ವಿಷಯ.

'ಹೊಸತು' ಓದುಗರಿಗೆ ಶುಭಾಶಯಗಳು.

2.10.2002

## ಡಾ|| ಸಲೀಂ ಅಲಿ – ಒಂದು ಸ್ಮರಣೆ



''ಭಾರತದ ಹಕ್ಕಿ ಮನುಷ್ಯ'' ಸಲೀಂ ಅಲಿ ಅವರ ನೂರ ಆರನೇ ಹುಟ್ಟುಹಬ್ಬವನ್ನು ಇದೇ ನವೆಂಬರ್ ಹನ್ನೆರಡರಂದು ಆಚರಿಸಲಾಗುತ್ತದೆ. ಪರಿಸರ ಸಂರಕ್ಷಣೆಗೆ ಸಂಬಂಧಿಸಿದಂತೆ ಅನೇಕ ಕಾರ್ಯಕ್ರಮಗಳು, ಹಕ್ಕಿಗಳ ಕುರಿತ ಪುಸ್ತಕಗಳ ಬಿಡುಗಡೆ ಸಮಾರಂಭಗಳೂ ನಡೆಯಲಿವೆ. ಭಾರತ ಉಪಖಂಡದ ಉದ್ದಗಲಕ್ಕೂ ಸಂಚರಿಸಿ ಇವರು ನಡೆಸಿದ ವೀಕ್ಷಣೆ, ಸಂಶೋಧನೆಗಳು ವಿಶ್ವ ಪಕ್ಷಿಶಾಸ್ತ್ರನಕಾಶೆಯಲ್ಲಿ ಭಾರತಕ್ಕೊಂದು ಶಾಶ್ವತ ಸ್ಥಾನ ಕಲ್ಪಿಸಿವೆ.

ನವೆಂಬರ್ ೧೨, ೧೮೯೬ರಂದು ಹುಟ್ಟಿದ ಸಲೀಂ ಅಲಿ ಪಕ್ಷಿಲೋಕಕ್ಕೆ ಬಂದದ್ದು ಒಂದು ಆಕಸ್ಮಿಕ, ಅದೂ ಹಕ್ಕಿಯೊಂದನ್ನು ಕೊಂದು! ಒಮ್ಮೆ ಅವರು ಹಳದಿ ಕೊರಳಿನ ಗುಬ್ಬಿಯನ್ನು ಹೊಡೆದುರುಳಿಸಿದರು. ಅದರ ಹೆಸರು ಅವರಿಗೂ ಆಗ ಗೊತ್ತಿರಲಿಲ್ಲ. ಶಿಕಾರಿದಾರರಾಗಿದ್ದ ಅವರ ಚಿಕ್ಕಪ್ಪ ಅಲಿಯವರನ್ನು ಬಾಂಬೆ ನ್ಯಾಚುರಲ್ ಹಿಸ್ಟರಿ ಸೊಸೈಟಿಗೆ ಪರಿಚಯಿಸಿದರು. ನಂತರ ಸೊಸೈಟಿಯ ಕಾರ್ಯದರ್ಶಿ ವಿಲ್ಲರ್ಡ್ ಅವರಿಂದ ಬಾಲಕ ಸಲೀಂ ಅಲಿಗೆ ವಿಸ್ಮಯಕಾರಿ ಪಕ್ಷಿಲೋಕಕ್ಕೆ ಪ್ರವೇಶ. ಅಲಿ ಮತ್ತೆಂದೂ ಹಿಂದಿರುಗಿ ನೋಡಲಿಲ್ಲ. ಪಕ್ಷಿಲೋಕಕ್ಕೆ ತಮ್ಮನ್ನೇ ಸಮರ್ಪಿಸಿಕೊಂಡರು.

ಅವರ ''ದಿ ಬುಕ್ ಆಫ್ ಇಂಡಿಯನ್ ಬರ್ಡ್ಸ್'' ಎಂಬ ಕೃತಿ ಭಾರತದಾದ್ಯಂತ ಒಂದು ಆಂದೋಲನವನ್ನೇ ಸೃಷ್ಟಿಸಿತು. ಸಲೀಂ ಅಲಿ ಅವರಂತೆ ಹಕ್ಕಿಗಳನ್ನು ವರ್ಣಿಸುವವರು ವಿರಳ!

ಅವರ ಸಂಶೋಧನೆಗಳು ಅವರಿಗೆ ವಿಶ್ವಮಾನ್ಯತೆಯನ್ನು ನೀಡಿತು. ಪರಿಣಾಮ, ಪ್ರತಿಷ್ಠಿತ ಪಾಲ್ ಗೆಟ್ಟಿ ಅಂತರ ರಾಷ್ಟ್ರೀಯ ಪ್ರಶಸ್ತಿಯ ಗೌರವ. ಇದರೊಂದಿಗೆ ಬಂದ ಹಣವನ್ನು ಈ 'ಹಕ್ಕಿ ಮನುಷ್ಯ' ಸೊಸೈಟಿಗೆ ದೇಣಿಗೆ ನೀಡಿದರು. ಭಾರತ ಸರ್ಕಾರ ಪದ್ಮಭೂಷಣ, ಪದ್ಮವಿಭೂಷಣ ಪ್ರಶಸ್ತಿ ನೀಡಿ ಅವರನ್ನು ಗೌರವಿಸಿತು. ಅಲಿ ಅನೇಕ ವಿಶ್ವ ವಿದ್ಯಾಲಯಗಳ ಗೌರವ ಡಾಕ್ಟರೇಟ್ ಪದವಿಗೆ ಪಾತ್ರರಾದರು. ರಾಜ್ಯಸಭೆಯ ನಾಮಕರಣ ಸದಸ್ಯರಾಗಿದ್ದರೂ ಕೂಡ.

೧೯೮೭ರಲ್ಲಿ ಅಲಿ ನಿಧನರಾದಾಗ, ಇಡೀ ಪಕ್ಷಿಪ್ರಿಯ ಲೋಕ ಶೋಕದಲ್ಲಿ ಮುಳುಗಿತು.

''ಗುಬ್ಬಿಯ ಪತನ'' (ಫಾಲ್ ಆಫ್ ಎ ಸ್ಪಾರೋ) ಅವರ ಆತ್ಮಕತೆ. ಗುಬ್ಬಿಗಳು ಕಣ್ಮರೆಯಾಗುತ್ತಿರುವ ಇಂದಿನ ದಿನಗಳಲ್ಲಿ ನಾವು ಮಾಡುವ ಯಾವುದೇ ಆವಾಸಸ್ಥಾನ ಸಂರಕ್ಷಣೆ (ಹ್ಯಾಬಿಟಾಟ್ ಪ್ರೊಟೆಕ್ಷನ್) ಸಲೀಂ ಅಲಿ ಅವರಿಗೆ ಸಲ್ಲುವ ಶ್ರದ್ಧಾಂಜಲಿ.

***ಕೆ. ಎಸ್. ನವೀನ್***

*ನಂ. ೨/೩, ಓಬಳಪ್ಪ ಅಡ್ಡರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು-೪*

# ಸೊರಗಿದ ಕನ್ನಡ ತಾಯಿಯ ಅಳಲು

ನಾನು ''ತಾಯಿ ಭುವನೇಶ್ವರಿ.'' ಈ ಕರ್ನಾಟಕ ರಾಜ್ಯದ ಮಾತೆ. ನನ್ನನ್ನು, ನನ್ನ ಕನ್ನಡ ನೆಲವನ್ನು, ನನ್ನ ಕನ್ನಡ ನುಡಿಯನ್ನು ಜೀವನಾಡಿಗಳಾದ ನದಿಸಂಪತ್ತುಗಳನ್ನು ಜನರು ಬಹುವಾಗಿ ಕಲುಷಿತಗೊಳಿಸುತ್ತಿದ್ದಾರೆ. ನನ್ನ ನರನಾಡಿಯಾದ ''ಕನ್ನಡ ನುಡಿ''ಯು ಬಹಳವಾಗಿ ಕಲಬೆರಕೆಗೊಂಡು, ''ನಾನು ಯಾರು ? ನನ್ನ ಮೂಲ ಯಾವುದು ? ನನ್ನ ನುಡಿ ಯಾವುದು ?'' ಎಂಬುದನ್ನು ನಾನೇ ಮರೆತಿದ್ದೇನೆ. ಆಂಗ್ಲಭಾಷೆ, ತಮಿಳು, ತೆಲುಗು, ಮಲಯಾಳಂ ಹೀಗೆ ಇತರ ಹಲವಾರು ಭಾಷೆಗಳ ಸಮ್ಮಿಶ್ರಣವಾಗಿ, ಕೊಳೆತ ರಾಡಿ ನೀರಾಗಿ ನಾನು ತುಂಬಿ ಹರಿಯುತ್ತಿದ್ದೇನೆ. ಒಂದು ಜನಾಂಗದ ಮೇಲೆ, ಒಂದು ಪ್ರದೇಶದ ಮೇಲೆ ಅಥವಾ ಅಲ್ಲಿಯ ಭಾಷೆಯ ಮೇಲೆ ಆಚಾರ-ವಿಚಾರಗಳ ಮೇಲೆ, ಇತರ ಹಲವಾರು ಪ್ರಾಂತ್ಯಗಳ ಪ್ರಭಾವವು ಇರುವುದು ಸಹಜ ಸಾಮಾನ್ಯ. ಆದರೆ ಆ ಪ್ರಭಾವವು ಮಿತಿ ಮೀರಿದಾಗ, ವಿಷದ ಪ್ರಭಾವ ಶಿವನ ಮೇಲೆ ಏರಿದಂತೆ ಈಗ ನನಗಾಗಿದೆ. ಕಲಬೆರಕೆಗೊಂಡು ನನ್ನ ಕನ್ನಡ ನುಡಿಯು ಹಾಳುಬಿದ್ದು ಹೋಗುವಷ್ಟು ಪರಿಸ್ಥಿತಿಯು ಕೈಮೀರಿ ಹೋಗಿದೆ. ಪ್ರಸ್ತುತ ಪರಿಸ್ಥಿತಿಯಲ್ಲಿ ''ಕನ್ನಡ ತಾಯಿ ಯಾರು ! ಅವಳೆಲ್ಲಿದ್ದಾಳೆ ?'' ಎಂಬುದನ್ನು ಭೂತಗನ್ನಡಿ ಹಿಡಿದುಕೊಂಡು ನಾನೇ ನನ್ನನ್ನು ಹುಡುಕಿಕೊಳ್ಳಬೇಕಾಗಿದೆ. ಇದರ ಜೊತೆಗೆ ಬೆಂಗಳೂರು ಕನ್ನಡ, ಬಳ್ಳಾರಿ ಕನ್ನಡ, ಮಲೆನಾಡಿನ ಕನ್ನಡ, ಧಾರವಾಡ ಕನ್ನಡ, ಗ್ರಾಮ್ಯ ಕನ್ನಡ ಎಂದು ವಿಂಗಡಣೆಗಳಾಗಿ ಮಂಗಳೂರು ಕನ್ನಡವು ಪುಸ್ತಕದ ಕನ್ನಡ ಎಂದು ಸಹಾ ಕರೆಯಲ್ಪಟ್ಟು ವಿಭಜನೆಯಾಗಿ ದ್ದೇನೆ. ಇನ್ನೂ ಮುಂದೆ ಓದಿ ''ಯಾವ ರೀತಿಯಿಂದ ನಾನು ಹಿಂಸೆಗೊಳಗಾಗುತ್ತೇನೆ'' ಎಂಬುದನ್ನು ಈ ಕನ್ನಡ ತಾಯಿಯ ಹೆಮ್ಮೆಯ ಪುತ್ರರೇ, ''ನನ್ನ ಮೊರೆ ಕೇಳಿ, ಈಗಲಾದರೂ ನಿದ್ರೆಯ ಮಂಪರಿನಿಂದ ಎಚ್ಚೆತ್ತು ಕೊಂಡು, ನನ್ನನ್ನು ಉಳಿಸುವಿರಾ ?''

ನನಗೆ ಈ ದಿನ, ನಿಮ್ಮೆಲ್ಲರಲ್ಲಿ ನನ್ನ ಮನಸ್ಸಿನ ಇಷ್ಟು ಕಾಲ ಬಚ್ಚಿಟ್ಟ ಅಪಾರ ವೇದನೆಯ ಕಟ್ಟನ್ನು ಬಿಚ್ಚಿ ಮಾತನಾಡ ಬೇಕಾದಂಥ ಪರಿಸ್ಥಿತಿ ಬಂದೊದಗಿದೆ. ಹುಡುಕಿದರೂ ಅಚ್ಚ ಕನ್ನಡ ಶಬ್ದವು ಸಿಗದಂಥಾ ವಿಷಮತೆ ಇದೆ. ''ಯಾವುದು ಸರಿ ? ಯಾವುದು ತಪ್ಪು ?'' ಎಂದು ನಿರ್ಣಯಿಸುವವರು ನೀವೇ ಅಲ್ಲವೇ ? ಎಲ್ಲೆಲ್ಲಿ 'ಅ' ಕಾರ ಬರಬೇಕೋ ಅಲ್ಲೆಲ್ಲಾ ಹೆಚ್ಚಾಗಿ ಅಪಭ್ರಂಶವಾಗಿ 'ಹ' ಕಾರ ಬಳಕೆಯಾಗುತ್ತಿದೆ. ''ಅಂಗಡಿ'' ಹೋಗಿ ''ಹಂಗಡಿ''ಯಾಗಿ, ''ಅಂಗಳ'' ಹೋಗಿ ''ಹಂಗಳ''ವಾಗಿ, ''ಅರಿಸಿನ'' ಹೋಗಿ ''ಹರಿಸಿಣ''ವಾಗಿದೆ. ಇನ್ನು ''ಶುಭಾಶಯ''ವು, ''ಶುಭಾಷಯ'' ವಾಗಿದೆ. ಇದಕ್ಕೆ ಹುಟ್ಟುಹಬ್ಬದ ವಿಶೇಷ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಕನ್ನಡ ವಾಹಿನಿ ಟಿವಿ ಚಾನೆಲ್‌ಗಳೂ ಹೊರತಾಗಿಲ್ಲ. ನೋಡಿ ಎಂತೆಂಥ ವಿಪರ್ಯಾಸ ? ಈ ಕನ್ನಡ ಮಾತೆಯು ಮೂರ್ಖರ ಪೆಟ್ಟಿಗೆಯನ್ನು ಆಂಗ್ಲಭಾಷೆಯಂತೆ ಟಿವಿ ಎಂದೇ ಕರೆಯಬೇಕಾಗಿದೆ. ದೂರದರ್ಶನ ಎಂದು ಹೇಳಿದರೆ, ಅದು ಸರಕಾರಿ ಪ್ರಸಾರವಾಹಿನಿಯಾಗಿಬಿಡುತ್ತದೆ. ''ಆಹಹಾ ! ಕನ್ನಡಿಗರಿಗೆ ಎಂಥಾ ಪರಿಸ್ಥಿತಿ ಬಂದೊದಗಿದೆ ಯಪ್ಪಾ ? ದೇವರೇ ಕಾಪಾಡಬೇಕು ನಮ್ಮೆಲ್ಲರನ್ನೂ !'' ಸದ್ಯ ಇನ್ನು ಮುಂದೆ ''ಅನ್ನ''ವು ''ಹನ್ನ''ವಾಗಿ ಕೊನೆಗೆ ''ತಂಗಳಾಗಿ'' ನಾನೇ ಅದನ್ನು ನುಂಗಲಾರದ ತುತ್ತಾಗದಿದ್ದ ರಷ್ಟೇ ಸಾಕು. ಈ ಪಟ್ಟಿಯು ಇಲ್ಲಿಗೇ ಮುಗಿಯದೆ ಹನುಮಂತನ ಬಾಲಕ್ಕಿಂತ ದೊಡ್ಡದಾಗುತ್ತದೆ. ''ವಿದ್ಯಾಭ್ಯಾಸ''ವು ''ವಿಧ್ಯಾಬ್ಯಾಸ''ವಾಗಿ ''ಅಭ್ಯಾಸ''ಕ್ಕೆ ಬಾಲ ತುಂಡಾಗಿ ಅದು ''ವಿದ್ಯ''ಳಿಗೆ ಅಂಟಿಕೊಂಡು ಆಭಾಸವಾಗುತ್ತಿದೆ. ''ಶೃತಿ'' ''ಶ್ರುತಿ''ಯಾಗಿ, ''ಕೃತಿ''ಯು ''ಕ್ರುತಿ''ಯಾಗಿ, ''ಋತು''ವು ''ರುತು'' ವಾಗಿದೆ. ಇನ್ನು ''ಕ್ಷ, ತ್ರ, ಜ್ಞ'' ಎಂಬ ಮೂರು ಅಕ್ಷರಗಳು ಮಾಯವಾಗಿ ವರುಷಗಳೇ ಉರುಳಿವೆ. ಈಗ ''ಋ''ಕಾರಕ್ಕೆ ಕುತ್ತು ಬಂದಿದ್ದೇ, ಆದರೆ ಮನುಷ್ಯನು ''ತಾಯಿ ಋಣ'' ಮರೆತು, ''ಕೃತಜ್ಞ''ನಾಗಿರುವು ದರ ಬದಲಾಗಿ ''ಕೃತಘ್ನ'' ನಾಗುತ್ತಾನೆಂಬುದೇ ಇದರ ಅರ್ಥ. ಇನ್ನು ''ಗೃಹ, ಬೃಹತ್, ಘನ, ಘಂಟೆ, ನೈರ್ಮಲ್ಯ, ಅಲಸಂಡೆ, ಬುಧವಾರ'' ಹೀಗೆ ಹತ್ತು ಹಲವಾರು ಪದಗಳು ಉಚ್ಚಾರದಿಂದ ಹಿಡಿದು ಬರೆಯುವುದರಲ್ಲೂ ತೊಂದರೆಯಾಗಿ ''ಗ್ರುಹ, ಬ್ರುಹತ್, ಗನ, ಗಂಟೆ, ನೈರ್ರ್ಮಲ್ಯ, ಹಲಸಂಡೆ, ಬುಧುವಾರ...'' ದಂತಾಗಿ ರೂಪುಗೊಂಡಿವೆ.

ಇನ್ನು 'ಕರ್ನಾಟಕ' ಎಂಬ ಶಬ್ದವಂತೂ ''ಕರ್ಣಾಟಕ'', ''ಎಂಭ'' ''ಶಭ್ದ''ವಾಗಿ ''ಕಿವಿ''ಯಲ್ಲಿ ಮೊಳಗುತ್ತಿದೆ. ಅಂದರೆ ನಮ್ಮ ರಾಜ್ಯದ ಹೆಸರಿನಲ್ಲೊಂದು ಬಹಳ ಜನರ ಬಾಯಿಯಿಂದಾಗಿ ಒಂದು ''ದೊಡ್ಡದಾದ ಕಿವಿ'' ಮೂಡಿದೆ. ಬಹುಶಃ ಅನೇಕ ಜನರಿಗೆ ಕರ್ಣ ಎಂದರೆ ಕಿವಿ ಎಂದು ತಿಳಿದಿರಲಾರದು. ಪ್ರಾಯಶಃ ಅದನ್ನು ಬರೀ ಒಂದು ರಾಜನ ಹೆಸರು ಎಂದು ಅರ್ಥೈಸಿಕೊಂಡು, ನಮ್ಮ ರಾಜ್ಯವನ್ನು ''ಕರ್ಣಾಟಕ'' ಎಂದು ಹೆಸರಿಸಿರಬೇಕು. ಆದರೆ ಅದು ''ಕನ್ನಡಿಗರ ನಾಡು, ನಮ್ಮ ಕನ್ನಡ ನಾಡು, ಈ ಬಡತಾಯಿಯ ಹೆತ್ತೊಡಲು'' ಎಂಬುದನ್ನು ಪ್ರತಿಶತ ೯೯ ಜನರಂತೂ ಮರೆತಿರುತ್ತಾರೆ. ಇದೊಂದು ಜೀರ್ಣಿಸಿಕೊಳ್ಳಲಾಗದ ಅಕ್ಷರಶಃ ಕಟುಸತ್ಯವಲ್ಲವೆ ? ಇನ್ನು ಕೆಲವು ಕಡೆ ''ಸುಬ್ರಹ್ಮಣ್ಯ''ನು, ''ಸುಭ್ರಮಣ್ಯ ಅಥವಾ ಸುಬ್ರಮಣ್ಯ''ನ ರೂಪ ತಳೆದು, ''ಮೀನಾಕ್ಷಿ ಅಥವಾ ವೀನಾಕ್ಷಿ''ಯು ''ಮೀನಾಕ್ಷೀ'' ಎಂಬ ನಳಿನಾಕ್ಷಿಯಾಗುತ್ತಾಳೆ. ಇದಕ್ಕೆ ನಗರಸಭೆಯವರೂ

> *ಬನಶಂಕರಿಯಲ್ಲಿ ಸೊಪ್ಪು ಮಾರುವ ಮುದುಕಿ ಹಿಂದಿಯಲ್ಲಿ ಮಾತನಾಡುವ ಪೇಚಿಗೆ ಸಿಕ್ಕಿದ್ದಾಳೆ; ಏಕೆಂದರೆ ಅವಳ ಹಿಂದಿ ಗಿರಾಕಿ ಇಪ್ಪತ್ತು ವರ್ಷ ಇಲ್ಲಿದ್ದರೂ ಕನ್ನಡ ಕಲಿಯಲು ಬೇಕಾಗುವಷ್ಟಾದರೂ ಅಹಂಕಾರವನ್ನು ಕಳೆದುಕೊಂಡಿಲ್ಲ. ಇನ್ನು ಕನ್ನಡಮ್ಮನ ಕಂದಗಳು ತಾಯಿ ಭುವನೇಶ್ವರಿಗೆ ಒಡ್ಡಿರುವ ಸವಾಲುಗಳೂ ಕಡಿಮೆಯಿಲ್ಲ !*




**ಶರ್ಮಿಲಾ ಸುಬ್ರಹ್ಮಣ್ಯ ರಾವ್**

ಹೊರತಾಗಿಲ್ಲ. ಅವರ ಪ್ರಕಾರ ಬೆಂಗಳೂರಿನಲ್ಲಿರುವ ಸುಬ್ರಹ್ಮಣ್ಯ ಎಂಬ ನಗರವನ್ನು ''ಸುಭ್ರಮಣ್ಯ''ನಗರ ಎಂದು ಹೆಸರಿಸಲಾಗಿದೆ. ಬೇಕಾದರೆ ನೀವೇ ರಾಜಕುಮಾರ್ ರಸ್ತೆಯ ಅಂಚಿನಲ್ಲಿರುವ ಸುಬ್ರಹ್ಮಣ್ಯ ನಗರಕ್ಕೆ ಹೋಗುವ ದಾರಿಫಲಕವನ್ನು ಓದಿ. ಆಗ ನಿಮಗೇ ಅಳು ಬರುವಂತಾಗುತ್ತದೆ.

ಹಾಗೆಯೇ ಬಹಳ ಕಡೆ ''ಹೋಟೇಲ್'' ಎಂಬ ಆಂಗ್ಲಭಾಷೆಯ ಪದವು ಯಥೋಚಿತವಾಗಿ ಕನ್ನಡದಲ್ಲಿ ಬಳಕೆಯಾಗಿ ''ಓಟೆಲ್ ಅಥವಾ ಓಟ್ಲು'' ಆಗಿದೆ. ಅಲ್ಲಿಗೆ ಬರುವ ''ಹುಡುಗ-ಹುಡುಗಿ''ಯರು, ''ಉಡುಗ-ಉಡುಗಿ''ಯರಾಗಿ ''ಗಂಡಸು-ಹೆಂಗಸರು'', ''ಯಪ್ಪ- ಯಮ್ಮ''ನಾಗುತ್ತಾರೆ. ಆಗ ಆ ''ಓಟ್ಲು'' ಯಜಮಾನ ಅವರ ಹತ್ತಿರ ಕಾಸು ಯಾ ದುಡ್ಡು ''ಈಸ್ಕೊಂಡು'', ''ಸ್ತ್ರೀಮಂತ ಅಥವಾ ಸ್ರೀಮಂತ''ನಾಗಿ ''ಸೀಮಂತ'' ಮಾಡಿಸುತ್ತಾನೆ, ''ಶ್ರೀಮಂತ''ನಂತೂ ಆಗುವುದಿಲ್ಲವಲ್ಲಾ ? ಇದಕ್ಕೆ ಕನ್ನಡ ಸಿನಿಮಾರಂಗವೂ ಹೊರತಾಗಿಲ್ಲ. ನಮ್ಮ ಕನ್ನಡ ಭಾಷೆಯನ್ನು ಒಂದು ಹೊಸ ರೂಪದಲ್ಲಿ ಹೊರತರುವುದಕ್ಕೆ ಅದು ಬಹಳಷ್ಟು ರೀತಿಯಲ್ಲಿ ಸಹಾಯ ಮಾಡುತ್ತಿದೆ. ನಾನು ಎಲ್ಲ ಕನ್ನಡ ಚಲನಚಿತ್ರಗಳ ಕಡೆ ಬೆರಳು ತೋರಿಸುತ್ತಿಲ್ಲ, ಅಂತೂ ಕೆಲವೊಂದು ಕನ್ನಡ ಚಲನಚಿತ್ರಗಳು, ನನ್ನ ಕನ್ನಡನುಡಿಯನ್ನು ಬಹಳಷ್ಟು ಹಾಳುಗೆಡಹುತ್ತಿವೆ. ಅವಿದ್ಯಾವಂತರಿಗೆ ಶುದ್ಧವಾದ ನುಡಿಯನ್ನು ಹೇಳಿಕೊಡುವ ಜವಾಬ್ದಾರಿ ಬರೀ ಸರಕಾರದ್ದು ಮಾತ್ರ ಇಲ್ಲ. ಇಲ್ಲಿ ನೆಲೆನಿಂತಿರುವ ಪ್ರತಿಯೊಬ್ಬ ವಿದ್ಯಾವಂತ ಕನ್ನಡಿಗನ ಆದ್ಯ ಕರ್ತವ್ಯವೂ ಹೌದು. ನಾನು ಇಲ್ಲಿ ಪಡುವ ಪಾಡುಗಳನ್ನು ಹೇಳುತ್ತಾ ಹೋದರೆ, ಅವುಗಳಿಗೆ ಪುಟಗಳೇ ಸಾಲದು. ಬರೀ ನವೆಂಬರ್ ತಿಂಗಳೊಂದರಲ್ಲಿ ನನ್ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯೋತ್ಸವ ಮಾಡಿ, ಮೆರೆಸಿ, ಉಳಿದ ದಿನಗಳಲ್ಲಿ ಮೂಲೆಗೆಸೆಯುತ್ತಾರೆ. ಅಯ್ಯೋ, ದೇವರೆ ನಿಮ್ಮೆಲ್ಲರ ಹೆತ್ತಮ್ಮನಾಗಿ, ಸಾವಿರಾರು ಕನ್ನಡಿಗರ ಸಲಹುವ ತಾಯಿಯಾಗಿ, ನನಗೆ ಈ ಪಾಡೇ ! ನಿಮ್ಮೆಲ್ಲರ ಮುಂದೆ ಅತ್ತು ಮನಸ್ಸು ಹಗುರ ಮಾಡಿಕೊಂಡು, ನನ್ನ ಬಗ್ಗೆ ನಾನೇ ನಿಕರಪಡಲೇ ?

ನಾನು ನಿಮ್ಮೆಲ್ಲರಲ್ಲಿ ಮಾಡುವ ಒಂದೇ ಒಂದು ನಿವೇದನೆ ಎಂದರೆ, ''ನನ್ನನ್ನು ಶುದ್ಧವಾಗಿರಿಸಿ. ಹಾಗೆ-ಹೀಗೆ ಎಂಬುದನ್ನು ಹಂಗೆ-ಹಿಂಗೆ-ಇಂಗೆ ಮಾಡಿ, ನನ್ನನ್ನು ಇಂಗು ತಿಂದ ಮಂಗನಾಗಿಸಬೇಡಿ. ಈ ತಾಯಿಯ ಹೃದಯ ಬೇನೆಯನ್ನು ಓಲೈಸಿ, ನೆಲ-ಜಲ-ವನ್ಯಸಂಪತ್ತು ಎಲ್ಲವನ್ನೂ ಶುದ್ಧೀಕರಿಸಿ, ನನ್ನನ್ನು ಪಾವನಗೊಳಿಸಿ.''

ಜೈ ಭಾರತಮಾತೆ – ಇದು ನಿಮ್ಮೆಲ್ಲರ ಪ್ರೀತಿಯ ಕನ್ನಡ ತಾಯಿಯ ದಯನೀಯ ಕೋರಿಕೆ.

ಶರ್ಮಿಲಾ ಸುಬ್ರಹ್ಮಣ್ಯ ರಾವ್
ನಂ. ೮೬, 'ದೈವ ಕೃಪ', ೭ನೆಯ ಅಡ್ಡರಸ್ತೆ
ಆರ್. ಕೆ. ಲೇ ಔಟ್, ಮೊದಲನೆಯ ಹಂತ
ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ಹೋಮಿಯೋಪತಿಯಲ್ಲಿ ಇಂಗು

ಇಂಗು (ASAFOETIDA) ಅಡಿಗೆ ಮನೆಯ ಔಷಧಿಗಳಲ್ಲೊಂದು. ಅಜೀರ್ಣ, ಹೊಟ್ಟೆ ಉಬ್ಬರ ಇತ್ಯಾದಿ ಜಠರ ಉಪದ್ರವಗಳ ನಿವಾರಣೆಯಲ್ಲಿ ಇಂಗು ಹೇಳಿ ಮಾಡಿಸಿದ ಮದ್ದು – ಅಲ್ಲಿಯೇ ''ಇಂಗಿ ಹೋಗುವಂತೆ'' ಮಾಡಿಬಿಡುವುದು !

ಇಂಗಿನ ತೌರು ಮನೆ ಮೆಡಿಟರೇನಿಯನ್ ಪ್ರದೇಶವೆನ್ನಲಾಗಿದೆ. ಪೆರೂಲಾ ಜಾತಿಗೆ ಸೇರಿದ ಇಂಗು ಬಹುವಾರ್ಷಿಕ ಬೆಳೆ ಎನಿಸಿದೆ. ನಾಲ್ಕು ಇಲ್ಲವೇ ಐದು ವರ್ಷಗಳ ಅವಧಿಯಲ್ಲಿ ಈ ಗಿಡದ ಬೇರುಗಳು ಬಲಿತು ದಪ್ಪವಾಗಿ ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಹೂಗಳು ಅರಳುತ್ತವೆ. ಹೂವು ಅರಳುವ ಮುನ್ನ ಭೂಮಿಯಿಂದ ಮೇಲ್ಭಾಗದ ಗಿಡದ ಭಾಗವನ್ನು ''ಕಚ್ಚು'' ಮಾಡಿ ಮೇಲೆ ರೆಂಬೆಗಳನ್ನು ಹರಡಿ ನೆರಳೀಯುತ್ತಾರೆ. ಕೆಲ ದಿನಗಳ ಬಳಿಕ ಕತ್ತರಿಸಿ ಕಚ್ಚು ಮಾಡಿದ ಆ ಭಾಗದಿಂದ ಹಾಲಿನಂತಹ ದ್ರವ ಒಸರುತ್ತದೆ – ಅದೇ ಇಂಗು.

ಇಂಗಿನಲ್ಲಿ ಮೂರು ವಿಧಗಳನ್ನು ಗುರುತಿಸಿದ್ದಾರೆ : ಸುತ್ತು ಬಗೆಯದು, ಮುದ್ದೆ ರೀತಿಯದು ಹಾಗೂ ದ್ರವರೂಪದ್ದು. ಇವುಗಳಲ್ಲಿ ವಾಣಿಜ್ಯ ಇಂಗು ಮುದ್ದೆ ರೂಪದ್ದು. ಉತ್ತಮ ದರ್ಜೆಯದೆಂದರೆ – ಸುತ್ತು ಇಂಗು. ಇದರ ಬಣ್ಣ ಹಳದಿ. ಇದರ ಅಂಟು ದುಂಡಗೆ ಇಲ್ಲವೆ ಚಪ್ಪಟೆ ಆಕಾರದ್ದು. ಮುದ್ದೆ ಮತ್ತು ದ್ರವ ರೂಪದ ಇಂಗು ಕಪ್ಪು, ಕೆಂಪು ಇಲ್ಲವೇ ಕಂದು ಬಣ್ಣದವು.

ಇಂಗಿನ ಕಹಿ ಮತ್ತು ಖಾರದ ರುಚಿಗೆ ಅದರಲ್ಲಿ ಅಡಕವಾಗಿರುವ ರೆಸಿನ್, ಇಮರುವ ತೈಲ ಹಾಗೂ ಬೂದಿಯೇ ಕಾರಣ. ಗಿಡದ ರೆಂಬೆಯಿಂದ ತೆಗೆದ ಇಂಗನ್ನು ''ಸಿಹಿ ಇಂಗು'' ಎಂದೂ ಬೇರಿನಿಂದ ಬೇರ್ಪಡಿಸಿದ ಇಂಗನ್ನು ''ಕಹಿ ಇಂಗು'' ಎಂದೂ ಕರೆಯಲಾಗಿದೆ. ಇದಿಷ್ಟು ಇಂಗಿನ ಇತಿಹಾಸ.

**ಇಂಗು**

ಅಡಿಗೆಯಲ್ಲಿ ಸಾಸಿವೆಯ ಒಗ್ಗರಣೆ ಹಾಕುವಾಗ ಮರೆಯದೆ ಕೂಡಿಸಬೇಕಾದ ಪದಾರ್ಥ – ಇಂಗು. ಇದು ರುಚಿಯನ್ನೂ ಪರಿಮಳವನ್ನೂ ಒದಗಿಸುವುದು. ಇಂಗು ಸಂಸ್ಕೃತದಲ್ಲಿ 'ಸಹಸ್ರವೇಧಿ', ಹಿಂದಿಯಲ್ಲಿ 'ಹಿಂಗ್', ತೆಲುಗಿನಲ್ಲಿ 'ಇಂಗುವ', ತಮಿಳಿನಲ್ಲಿ 'ಪೆರಂಗಾಯಂ' ಮತ್ತು ಆಂಗ್ಲದಲ್ಲಿ 'ಅಸಫೋಟಿಡ' ಎಂದು ಜನಪ್ರಿಯವಾಗಿದೆ. ಆದರೆ ಇದರ ವೈಜ್ಞಾನಿಕ ಹೆಸರು - ಫೆರುಲ ಫೋಟಿಡ (Ferula Foetida) ಎಂದಿದೆ. ಇದು 'ಏಪಿಯೇಸಿ' (apiaceae) ಎಂಬ ಸಸ್ಯ ಕುಟುಂಬಕ್ಕೆ ಸೇರಿದ್ದಾಗಿದೆ. ಇದರ ಔಷಧೀಯ ಉಪಯೋಗವೆಂದರೆ.......

**ಅಜೀರ್ಣ** : ಹುಳಿ ತೇಗು ಎದೆ ಉರಿ ಇದ್ದಾಗ ಬಟ್ಟಲು ಮಜ್ಜಿಗೆಗೆ ಚಿಟಿಕೆ ಇಂಗು ಬೆರೆಸಿ ಸೇವಿಸಿದರೆ ಉಪಶಮನ ದೊರೆಯುವುದು. ವಾಯು ಉಬ್ಬರಿಸಿಕೊಂಡು ಹೊಟ್ಟೆನೋವಿದ್ದಾಗಲೂ ಇದು ಗುಣಕಾರಿ.

**ಕೆಮ್ಮು** : ಒಣ ಕೆಮ್ಮಿನಲ್ಲಿ ಸ್ವಲ್ಪ ಬಿಸಿ ನೀರಿನಲ್ಲಿ ಇಂಗು ಬೆರೆಸಿ ಕುಡಿದರೆ ಕೂಡಲೇ ಕೆಮ್ಮು ಕಡಿಮೆಯಾಗುವುದು.

ಅಲ್ಲದೆ ಇಂಗು – ತಲೆ ತಿರುಗುವಿಕೆ, ಉಬ್ಬಸ ಹಾಗೂ ನಾಯಿಕೆಮ್ಮುಗಳಲ್ಲಿ ಕೂಡಾ ಉತ್ತಮ ಔಷಧಿಯಾಗಿ ಉಪಯೋಗಕ್ಕೆ ಬರುತ್ತದೆ. ಕರುಳು ತೊಂದರೆಯಲ್ಲಿ ಇಂಗು ಬೆರಸಿದ ನೀರಿನ ಎನಿಮಾ ಪ್ರಯೋಜನವೆನಿಸುವುದು.

**ಹೋಮಿಯೋಪತಿ** : ಹೋಮಿಯೋಪತಿ ವೈದ್ಯಪದ್ಧತಿಯಲ್ಲಿ ಇಂಗನ್ನು ಬಳಸಿ ಅಸಫೋಟಿಡ (ASAFOETIDA) ಎಂಬ ಹೆಸರಿನಿಂದಲೇ ಸತ್ವ (POTENCY)ಗೊಳಿಸಿದ್ದಾರೆ. ಇದರಲ್ಲಿ ಅಡಗಿರುವ ಮುಖ್ಯ ಚಿಹ್ನೆಗಳೆಂದರೆ......

ಕಣ್ಣುಗಳ ಒಳಗೆ ಹಾಗೂ ಸುತ್ತಲೂ ವೇದನಾಯುಕ್ತ (BORING PAINS IN AND AROUND THE EYES) ನೋವು ಕಾಣಿಸಿಕೊಳ್ಳುವುದು ರಾತ್ರಿಯಲ್ಲೇ ಹೆಚ್ಚು.

ಕಿವಿ ಸೋರುವಿಕೆ (OTORRHOEA) ಇರುವುದು. ಹೊರಬರುವ ದ್ರವವು ದುರ್ವಾಸನೆಯಿಂದ ಕೂಡಿರುವುದು.

ಗಂಟಲಲ್ಲಿ ಮುದ್ದೆ (GLOBUS HYSTERICUS) ಯ ಬಾಧೆಯನ್ನು ಈ ಔಷಧಿ ನಿವಾರಿಸುವುದು.

ಗರ್ಭಿಣಿಯಲ್ಲದ ಸ್ತ್ರೀಯ ಸ್ತನಗಳುಬ್ಬಿ ಹಾಲು ತುಂಬಿಕೊಂಡ ಅಸಹಜ ಸ್ಥಿತಿಯನ್ನು (MAMMAE TURGID WITH MILK IN THE UNIMPREGNATED) ಈ ಔಷಧಿ ಸರಿಪಡಿಸುತ್ತದೆ.

ಈ ''ಅಸಫೋಟಿಡ'' ಔಷಧಿಯನ್ನು ಮೇಲಿನ ಚಿಹ್ನೆಗಳು ಯಾವ ಹೆಸರಿನ ವ್ಯಾಧಿಯಲ್ಲಿದ್ದರೂ ಸೇವಿಸಲು ಕೊಡಬಹುದು. ಆದರೂ ಚಿಕಿತ್ಸೆಗೆ ಮುನ್ನ ತಜ್ಞವೈದ್ಯರ ಸಲಹೆ ಕ್ಷೇಮಕರ.

ಡಾ|| ಎ. ಎನ್. ಮೂರ್ತಿ
ಸಾಯಿರಾಂ ಹೋಮಿಯೋ ಕ್ಲಿನಿಕ್, ೧೨೮೭, ೬ನೇ ಮುಖ್ಯರಸ್ತೆ, ಎ-ಬ್ಲಾಕ್, ೨ನೇ ಹಂತ, ರಾಜಾಜಿನಗರ, ಬೆಂಗಳೂರು-೫೬೦ ೦೧೦



# ನಮ್ಮ ರಾಜ್ಯದಲ್ಲಿ ಜಲಸಂಪನ್ಮೂಲ ಬಳಕೆ ಎಷ್ಟು?

**ರಾ. ನಂ. ಚಂದ್ರಶೇಖರ**

ಕರ್ನಾಟಕದಲ್ಲಿ ಅನೇಕ ನದಿಗಳು ಹರಿಯುತ್ತವೆ. ಜಲ ಸಂಪನ್ಮೂಲ ವಾರ್ಷಿಕ ಸರಾಸರಿ ೩೪೪೦ ಟಿ.ಎಂ.ಸಿ. ಎಂದು ಅಂದಾಜು ಮಾಡಲಾಗಿದೆ. (ಒಂದು ಟಿ.ಎಂ.ಸಿ. = ಒಂದು ಸಾವಿರ ದಶಲಕ್ಷ ಘನ ಅಡಿ). ಪಶ್ಚಿಮದ ನದಿಗಳ ಕೊಳ್ಳದ ವಿಸ್ತಾರ ರಾಜ್ಯದ ಶೇ. ೧೪ ಭಾಗವಾದರೆ ನೀರಿನ ಪ್ರಮಾಣ ೨೦೦೦ ಟಿ.ಎಂ.ಸಿ. (ರಾಜ್ಯದ ಶೇ. ೫೮ ಭಾಗ). ಪೂರ್ವ ನದಿಗಳ ನೀರಿನ ಪ್ರಮಾಣ ೧೪೪೦ ಟಿ.ಎಂ.ಸಿ. ಇದರಲ್ಲಿ ಕೃಷ್ಣ ೯೭೦ ಟಿ.ಎಂ.ಸಿ., ಕಾವೇರಿ ೩೮೮ ಟಿ.ಎಂ.ಸಿ. ಉಳಿದ ನದಿಗಳದ್ದು ೮೨ ಟಿ.ಎಂ.ಸಿ. ಪೂರ್ವಕ್ಕೆ ಹರಿಯುವ ನದಿಗಳ ಕೊಳ್ಳ ಪ್ರದೇಶಗಳ ವಿಸ್ತಾರ ರಾಜ್ಯದ ಶೇ. ೮೬, ಜಲ ಸಂಪನ್ಮೂಲ ಶೇ. ೪೨. ಪಶ್ಚಿಮವಾಹಿನಿ ನದಿಗಳ ನೀರಿನಲ್ಲಿ ಅಲ್ಪ ಪ್ರಮಾಣ ವಿದ್ಯುತ್ ಉತ್ಪಾದನೆಗೆ ಬಳಕೆ ಆಗುತ್ತಿದೆ. ಉಳಿದಂತೆ ಸಮುದ್ರ ಸೇರುತ್ತಿದೆ. ಇದನ್ನು ಬಳಸಿಕೊಳ್ಳುವ, ಪೂರ್ವ ನದಿಗಳಿಗೆ ಸೇರಿಸುವ ಪ್ರಯತ್ನ ಯಶಸ್ವಿ ಆಗಿಲ್ಲ. ಕೃಷ್ಣಾ ನದಿಯ ನೀರಿನ ಹಂಚಿಕೆಯಲ್ಲಿ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದು ಹೇಳಲು ಸಾಕಷ್ಟು ಪುರಾವೆಗಳಿವೆ. ಬಂದಿರುವ ಪಾಲನ್ನು ನಾವು ಬಳಸಿಕೊಳ್ಳಲು ಆಗಿಲ್ಲ. ಕಾವೇರಿ ವಿಚಾರಕ್ಕೆ ಬಂದರೂ ಪರಿಸ್ಥಿತಿ ಭಿನ್ನವಾಗಿಲ್ಲ. ಜಲಸಂಪನ್ಮೂಲದ ಬಳಕೆ ಎಂದರೆ ನೀರಾವರಿ ಮಾಡುವುದು ಎನ್ನುವ ವಾತಾವರಣವಿದೆ. ನಾವು ಜಲಸಂಪತ್ತನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗಿಲ್ಲದಿರುವುದರಿಂದ ನೆರೆ-ಬರ ಎರಡನ್ನೂ ಅನುಭವಿಸುತ್ತಿದ್ದೇವೆ.

ನಾವು ಅಣೆಕಟ್ಟುಗಳನ್ನು ಕಟ್ಟಿದ್ದೇವೆ. ಅವುಗಳ ಸುರಕ್ಷತೆ ಬಗೆಗೆ ಚಿಂತಿಸಿಲ್ಲ. ಮಳೆಗಾಲದಲ್ಲಿ ಭೂಕೊರೆತದಿಂದ ಲಕ್ಷಾಂತರ ಟನ್ ಹೂಳು ಅಣೆಕಟ್ಟು ಸೇರುತ್ತದೆ. ಇದರಿಂದ ನೀರು ಸಂಗ್ರಹಣಾ ಸಾಮರ್ಥ್ಯ ಕುಸಿಯುತ್ತಿದೆ. ತುಂಗಭದ್ರಾ ಡ್ಯಾಂನಲ್ಲಿ ೧/೩ ಭಾಗ ಹೂಳು ತುಂಬಿಕೊಂಡಿದೆ. ಇನ್ನು ೨೫ ವರ್ಷಗಳಲ್ಲಿ ಈ ಅಣೆಕಟ್ಟು ನಿರುಪಯುಕ್ತ ಆಗುತ್ತದೆ ಎಂದು ತಜ್ಞರು ಹೇಳುತ್ತಾರೆ. ಕನ್ನಂಬಾಡಿಯ ಕಥೆ ಇದಕ್ಕೆ ಭಿನ್ನವಾಗಿಲ್ಲ. ಹೂಳು ಎತ್ತುವುದು ವ್ಯವಹಾರಿಕವಾಗಿ ಕಾರ್ಯಸಾಧುವಲ್ಲ. ಅಣೆಕಟ್ಟುಗಳ ಸಮೀಪ ಒಡ್ಡು ನಿರ್ಮಿಸುವ, ನದಿ ಪಾತ್ರದಲ್ಲಿ ದಟ್ಟ ಹುಲ್ಲು-ಮರಗಳನ್ನು ಬೆಳೆಸುವ ಕೆಲಸ ಆಗಬೇಕು. ನದಿಗಳಿರಲಿ, ಕೆರೆಗಳಲ್ಲಿ ಹೂಳು ತುಂಬಿಕೊಂಡಿರುವುದರ ಪರಿಣಾಮ ನೀರಿನ ಶೇಖರಣಾ ಸಾಮರ್ಥ್ಯ ಕುಸಿದಿದೆ. ಅಂತರ ಜಲ ಮಟ್ಟ ಕಾಪಾಡಿಕೊಳ್ಳಲು ಸಾಧ್ಯವಾಗಿಲ್ಲ.

ಒಂದು ಪ್ರದೇಶದ ಆರ್ಥಿಕ ಪ್ರಗತಿ ಅದರ ಪ್ರಾಕೃತಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಸ್ವಚ್ಛವಾದ ನೀರು ಅತ್ಯಪೂರ್ವ ಸಂಪತ್ತು. ನಾಗರಿಕತೆ ಬೆಳೆದಿದ್ದೇ ನೀರಿನ ಹರಿವಿನೊಂದಿಗೆ. ನೀರನ್ನು ವ್ಯವಸಾಯ, ಕೈಗಾರಿಕೆ, ವಿದ್ಯುತ್ ಉತ್ಪಾದನೆಗೆ ಬಳಸಬಹುದು. ಇದರ ಜೊತೆಗೆ ಸಾಗಾಣಿಕೆ, ಮೀನುಗಳಂತಹ ಆಹಾರೋತ್ಪತ್ತಿಗೂ ಬಳಸಬಹುದಾದ ನೀರಿನ ಸಂರಕ್ಷಣೆಗೆ ನಾವು ಆದ್ಯತೆ ನೀಡದಿರುವುದು ದೊಡ್ಡ ವಿಪರ್ಯಾಸ. ನೀರಿನ ನಿರ್ವಹಣೆ ಬಗ್ಗೆ ನಾವು ಇದೇ ಅಸಡ್ಡೆ ಮುಂದುವರಿಸಿದರೆ ಎದುರಿಸಬೇಕಾದ ಅಪಾಯ ಊಹೆಗೆ ನಿಲುಕದ್ದಾಗಿದೆ.

**ಅಡ್ಡಿ-ಅಡಚಣೆಗಳಿಂದ ಸೊರಗಿದ ನೀರಾವರಿ**

ರಾಜ್ಯದಲ್ಲಿ ಕೃಷಿಗೆ ಯೋಗ್ಯವಾದ ೧೦೭ ಲಕ್ಷ ಹೆಕ್ಟೇರ್ ಜಮೀನಿದೆ. ಅದರಲ್ಲಿ ೫೫ ಲಕ್ಷ ಹೆಕ್ಟೇರ್‌ಗಳಿಗೆ ನೀರಾವರಿ ಒದಗಿಸುವಷ್ಟು ಜಲಸಂಪತ್ತಿದೆ. ಅದರಲ್ಲಿ ೪೫ ಲಕ್ಷ ಹೆಕ್ಟೇರ್‌ಗಳು ನದಿ-ಕೆರೆಗಳಿಂದ, ೧೦ ಲಕ್ಷ ಹೆಕ್ಟೇರ್‌ಗಳು ಅಂತರ್ಜಲದಿಂದ ಸಿಗುತ್ತದೆ. ಈವರೆಗೆ ೧೮.೮೩ ಲಕ್ಷ ಹೆಕ್ಟೇರ್ ನದಿ ಕೆರೆಗಳಿಂದ, ೬.೦೮ ಲಕ್ಷ ಹೆಕ್ಟೇರ್‌ಗಳು ಅಂತರ್ಜಲ ಮುಂತಾದ ಮೂಲದಿಂದ ಒಟ್ಟಾಗಿ ೨೪.೯೧ ಲಕ್ಷ ಹೆಕ್ಟೇರ್‌ಗಳಿಗೆ ಮಾತ್ರ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ರಾಜಾಸ್ಥಾನ ಬಿಟ್ಟರೆ ಹೆಚ್ಚು ಬಂಜರು ಭೂಮಿಯಿರುವುದು ಕರ್ನಾಟಕದಲ್ಲಿಯೇ. ದೇಶದಲ್ಲಿ ಒಟ್ಟು ೪೯೬ ಲಕ್ಷ ಹೆಕ್ಟೇರ್ ಬಂಜರು ಭೂಮಿಯಿದ್ದು, ಕರ್ನಾಟಕದಲ್ಲಿಯೇ ೧೦೩ ಲಕ್ಷ ಹೆಕ್ಟೇರ್ ಬಂಜರು ಭೂಮಿ ಇದೆ. ಅಂದರೆ ದೇಶದ ಒಟ್ಟು ಬರ ಪೀಡಿತ ಪ್ರದೇಶದಲ್ಲಿ ಶೇ. ೨೩ರಷ್ಟು ಕರ್ನಾಟಕದಲ್ಲಿದೆ. ಈ ಪ್ರದೇಶದಲ್ಲಿ ಸುಮಾರು ೧.೯೦ ಕೋಟಿ ಜನ ವಾಸಿಸುತ್ತಿದ್ದಾರೆ.

ಕರ್ನಾಟಕದಲ್ಲಿರುವ ಜಲಸಂಪತ್ತಿನಲ್ಲಿ ಅರ್ಧದಷ್ಟನ್ನೂ ಬಳಸಲು ಏಕೆ ಆಗಿಲ್ಲ, ಎಂದು ಕಾರಣ ಹುಡುಕಲು ಹೊರಟರೆ ಯೋಜನೆಗಳ ಅನುಷ್ಠಾನದಲ್ಲಿ ಹಿಂದೆ ಆದ, ಈಗಲೂ ಆಗುತ್ತಿರುವ ವಿಳಂಬ ಎದ್ದು ಕಾಣುತ್ತದೆ. ನಾರಾಯಣಪುರ ಡ್ಯಾಂ ಕಟ್ಟಲು ೧೯ ವರ್ಷಗಳೇ ಬೇಕಾಯಿತು. ೧೯೬೩ರಲ್ಲಿ ಪ್ರಾರಂಭಿಸಿದ ಆಲಮಟ್ಟಿ ಅಣೆಕಟ್ಟನ್ನು ಇನ್ನೂ ಕಟ್ಟಿ ಮುಗಿಸುವುದರಲ್ಲೇ ಇದ್ದೇವೆ. ಘಟಪ್ರಭಾದ ಹಿಡಕಲ್ ಅಣೆಕಟ್ಟು ನಿರ್ಮಾಣಕ್ಕೆ ೧೩ ವರ್ಷಗಳಾಯಿತು. ಹೇಮಾವತಿ, ಕಬಿನಿ ಅಣೆಕಟ್ಟುಗಳನ್ನು ಮುಗಿಸಲು ೧೬ ವರ್ಷಗಳು ಕಾಯಬೇಕಾಯಿತು. ಇವು ಅಣೆಕಟ್ಟುಗಳ ನಿರ್ಮಾಣಕ್ಕೆ ಸಂಬಂಧಿಸಿದ ಕತೆಯಾದರೆ ನಾಲೆಗಳ ನಿರ್ಮಾಣದ ವಿಷಯ ಕಾದಂಬರಿ ಆಗುತ್ತದೆ.

ಅಣೆಕಟ್ಟುಗಳ ನಿಜವಾದ ಉಪಯೋಗವಾಗುವುದು ನಾಲೆಗಳ ನಿರ್ಮಾಣ ಪೂರ್ಣವಾದಾಗ ಮಾತ್ರ. ೧೯೫೩ರಲ್ಲಿ ಪ್ರಾರಂಭವಾದ ತುಂಗಭದ್ರಾ ಯೋಜನೆಯ ಎಡದಂಡೆ ಕಾಲುವೆ, ಬಲದಂಡೆಯ ಮೇಲ್ಮಟ್ಟದ ಕಾಲುವೆ ಇಂದಿಗೂ ಪೂರ್ಣಗೊಂಡಿಲ್ಲ. ಹೇಮಾವತಿ ಅಣೆಕಟ್ಟಿನ ಕಾಲುವೆಗಳು ತುಮಕೂರು, ನಾಗಮಂಗಲ ತಲುಪುವ ದಿನ ಬರಬೇಕಿದೆ. ಈಗಿನ ಸ್ಥಿತಿ ನೋಡಿದರೆ ನೀರಾವರಿ ಲಾಭ ಪಡೆಯಲು ಸಮರೋಪಾದಿಯಲ್ಲಿ ಕೆಲಸ ಮಾಡಿದರೂ ಕನಿಷ್ಠ ೧೫-೨೦ ವರ್ಷಗಳು ಬೇಕಾಗುತ್ತವೆ. ಇಲ್ಲವಾದರೆ ೩೦-೪೦ ವರ್ಷ ಬೇಕಾಗಬಹುದು. ಅಣೆಕಟ್ಟುಗಳ ನಿರ್ಮಾಣಕ್ಕೆ ನೀಡಿದ ಪ್ರಾಮುಖ್ಯತೆಯನ್ನು ನೀರೊದಗಿಸುವ ಕಾಲುವೆಗಳ ನಿರ್ಮಾಣಕ್ಕೆ ನೀಡದೆ ಹೋದದ್ದು ಬಹು ದೊಡ್ಡ ಕೊರತೆಯಾಗಿ ಪರಿಣಮಿಸಿದೆ.

ಯೋಜನೆ ಅನುಷ್ಠಾನದ ವಿಳಂಬ ಗತಿಗೆ ಮುಖ್ಯ ಕಾರಣಗಳೆಂದರೆ ೧) ಸಂಪನ್ಮೂಲದ ಕೊರತೆ, ೨) ಭೂಸ್ವಾಧೀನಕ್ಕೆ ಬರುತ್ತಿರುವ ತಡೆಗಳು, ೩) ಭ್ರಷ್ಟಾಚಾರ ಮತ್ತು ರಾಜಕೀಯ ಹಸ್ತಕ್ಷೇಪ, ೪) ಪುನರ್ವಸತಿ ಮತ್ತು ಗುತ್ತಿಗೆ ನಿರ್ವಹಣೆಯಲ್ಲಿನ ವೈಫಲ್ಯ, ೫) ಏತ ನೀರಾವರಿಗೆ ಬೇಕಾದ ವಿದ್ಯುತ್ ಅಭಾವ ಮತ್ತು ಪರಿಹಾರ ಕಾಣದ ಅಂತಾರಾಜ್ಯ ಜಲ ವಿವಾದ.

ಜಲ ವಿವಾದಕ್ಕೆ ಸಂಬಂಧಿಸಿದಂತೆ ಕರ್ನಾಟಕ ನದಿ ಪಾತ್ರದ ಮೇಲು ರಾಜ್ಯವಾಗಿಯೂ ಕೆಳರಾಜ್ಯವಾಗಿಯೂ ಅನ್ಯಾಯಕ್ಕೊಳಗಾಗಿದೆ. 'ನದಿ ನೀರಿಗೆ ದೊಣೆ ನಾಯಕನ ಅಪ್ಪಣೆಯೇ' ಅನ್ನುವ ಮಾತಿಗೆ ಅರ್ಥವಿಲ್ಲದಾಗಿದೆ. ನದಿ ನೀರು ಬಳಸಲು ಈಗ ದೊಣ್ಣೆ ನಾಯಕನ ಅಪ್ಪಣೆ ಪಡೆಯಲೇಬೇಕು. ಅಷ್ಟೇಕೆ ಕಾವೇರಿ ಕಣಿವೆಯ ಕೆರೆಗಳ ಹೂಳೆತ್ತುವುದಕ್ಕೂ ತಮಿಳುನಾಡು ತಕರಾರು ಮಾಡುತ್ತಿದೆ. ಕೃಷ್ಣ ಜಲ ವಿವಾದಕ್ಕೆ ಸಂಬಂಧಿಸಿದಂತೆ ೧೯೬೭ರಲ್ಲಿ ಬಚಾವತ್ ನೇತೃತ್ವದ ನ್ಯಾಯ ಮಂಡಲಿ ತೀರ್ಪು ನೀಡಿ ಕರ್ನಾಟಕಕ್ಕೆ ೨೦೦೦ದ ಇಸವಿಗೆ ೭೩೪ ಟಿ.ಎಂ.ಸಿ. ಬಳಸಿಕೊಳ್ಳುವಂತೆ ಹೇಳಿತು. ನ್ಯಾಯವಾಗಿ ನಮಗೆ ೯೦೦ ಟಿ.ಎಂ.ಸಿ. ಬರಬೇಕಿತ್ತೆಂದು ಅಂದು ತಜ್ಞರು ಅಭಿಪ್ರಾಯಪಟ್ಟಿದ್ದರು. ದುರಂತವೆಂದರೆ ನಮ್ಮ ಪಾಲಿಗೆ ಬಂದ ನೀರಿನಲ್ಲಿಯೂ ೫ ಟಿ.ಎಂ.ಸಿ.ಯನ್ನು ಚೆನ್ನೈ ನೀರು ಸರಬರಾಜಿಗೆ ದಾನವಾಗಿ ಕೊಡಬೇಕಾಯಿತು. ಉಳಿದ ೭೨೯ ಟಿ.ಎಂ.ಸಿ.ಯನ್ನೂ ನ್ಯಾಯಮಂಡಲಿ ಕೊಟ್ಟ ಗಡುವು ತೀರಿ ೨ ವರ್ಷಗಳು ಕಳೆದ ನಂತರವೂ ಬಳಸಿಕೊಳ್ಳಲು ಆಗಿಲ್ಲ. ಇದುವರೆಗೆ ಉಪಯೋಗಿಸಿದ ನೀರು, ಪ್ರಗತಿಯಲ್ಲಿರುವ, ರೂಪಿತವಾಗಿರುವ ಯೋಜನೆಗಳು ಪೂರ್ಣಗೊಂಡರೂ ೫೩೬ ಟಿ.ಎಂ.ಸಿ. ಮಾತ್ರ ಬಳಕೆ ಆಗುತ್ತದೆ. ಆಲಮಟ್ಟಿ ಅಣೆಕಟ್ಟನ್ನು ಎತ್ತರಿಸಲು ಆಂಧ್ರ ಅಡ್ಡಿಬರುತ್ತಿದೆ. ಜೊತೆಗೆ ಅಣೆಕಟ್ಟಿನಲ್ಲಿ ಮುಳುಗುವ ಬಾಗಲಕೋಟೆಗೆ ಪುನರ್ವಸತಿ ನಿರ್ಮಿಸುವ ಕೆಲಸವೂ ಆಗಿಲ್ಲ. ಆಂಧ್ರದವರು ಅವರ ಪಾಲಿನ ೧.೫ ಪಟ್ಟು ಹೆಚ್ಚು ನೀರು ಬಳಸುತ್ತಿದ್ದಾರೆ. ಹೆಚ್ಚು ಚರ್ಚೆಗೆ ಒಳಪಡದ ಭೀಮಾ ನದಿಯ ನೀರನ್ನು ಮಹಾರಾಷ್ಟ್ರ ಬಚಾವತ್ ವರದಿಯ ತೀರ್ಪಿಗೆ ವಿರುದ್ಧವಾಗಿ ಹೆಚ್ಚು ಬಳಸುತ್ತಿದೆ. ಹೀಗಾಗಿ ಕೃಷ್ಣಾ ನದಿಯ ಹೆಚ್ಚುವರಿ ನೀರನ್ನು ಹಂಚಲು ಕೇಳುವ ಸ್ಥಿತಿಯಲ್ಲಿ ಕರ್ನಾಟಕ ಇಲ್ಲ. ಮಹಾರಾಷ್ಟ್ರ ರಾಷ್ಟ್ರೀಯ ಜಲನೀತಿಯ ದುರ್ಬಲ ಅಂಶಗಳನ್ನು ಹೇಗೆ ತನ್ನ

ಲಾಭಕ್ಕೆ ಬಳಸಿಕೊಂಡಿದೆ ಎನ್ನುವುದಕ್ಕೆ ಭೀಮಾ ನೀರಿನ ಬಳಕೆ ಸಾಕ್ಷಿ ಆಗಿದೆ.

**ಬತ್ತಿದ ಭೀಮಾ ನದಿ-ಕುಪಿತರಾದ ರೈತ ಸಮೂಹ**

ಕಾವೇರಿ-ಕೃಷ್ಣ ಜಲ ವಿವಾದಗಳ ನಡುವೆ ಅಷ್ಟೊಂದು ಜನರ ಗಮನ ಸೆಳೆಯದ ಗೋವಾದೊಂದಿಗಿನ ಮಹಾದಾಯಿ ನದಿ ವಿವಾದ, ಮಹಾರಾಷ್ಟ್ರದೊಡನೆ ಕರ್ನಾಟಕ ರೈತರು ನೇರ ಸಂಘರ್ಷಕ್ಕಿಳಿಯುವಂತೆ ಮಾಡಿ, ಇಂದು ಸುಪ್ರಿಂ ಕೋರ್ಟ್‌ನಲ್ಲಿರುವ ಭೀಮಾ ನದಿ ನೀರಿನ ವಿವಾದಗಳು ಬಹುದೊಡ್ಡ ಆತಂಕವನ್ನೊಡ್ಡಿವೆ.

ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳ ವಿವರ ನೀಡುವಾಗ ೧ ಟಿ.ಎಂ.ಸಿ.ಗಿಂತ ಹೆಚ್ಚು ನೀರು ಬಳಸಿದಾಗ ಮಾತ್ರ ಲೆಕ್ಕ ಕೊಡಬೇಕೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಮಹಾರಾಷ್ಟ್ರವು ಭೀಮಾ ನದಿಯ ನೀರಿನಲ್ಲಿ ೧ ಟಿ.ಎಂ.ಸಿ.ಗಿಂತ ಕಡಿಮೆ ಬಳಕೆ ಆಗುವ ಹಲವು ಯೋಜನೆಗಳನ್ನು ಹಮ್ಮಿಕೊಂಡು ಸುಮಾರು ೩೧.೩೭ ಟಿ.ಎಂ.ಸಿ. ಹೆಚ್ಚು ಬಳಸುತ್ತಿದೆ.

ಭೀಮಾನದಿಗೆ ಸಂಬಂಧಿಸಿದಂತೆ ವಿವರ ಹೀಗಿದೆ (ಕೋಷ್ಟಕ-೧)

| ರಾಜ್ಯ | ಉದ್ದ ಕಿ.ಮೀ. | ಜಲಾನಯನ ಪ್ರದೇಶ ಎಕರೆಗಳಲ್ಲಿ | ಬಚಾವತ್ ತೀರ್ಪಿನನ್ವಯ ಬರುವ ನೀರು |
|---|---|---|---|
| ಮಹಾರಾಷ್ಟ್ರ | ೪೮೭ | ೧,೨೦,೮೩,೨೦೦ | ೩೦೦.೬ |
| ಕರ್ನಾಟಕ | ೨೦೬ | ೪೭,೪೩,೬೮೦ | ೪೫.೩ |
| ಆಂಧ್ರ | ೯೩ | ೬,೨೨,೦೮೦ | ೫.೧ |
| ಒಟ್ಟು | ೭೮೬ | ೧,೭೪,೪೮,೯೬೦ | ೩೫೧.೦ |

ಭೀಮಾ ನದಿಯ ನೀರಿನಲ್ಲಿ ಮಹಾರಾಷ್ಟ್ರ ೯೫, ಕರ್ನಾಟಕ ೧೫ ಟಿ.ಎಂ.ಸಿ.ಗಿಂತ ಹೆಚ್ಚು ನೀರು ಬಳಸಬಾರದು ಎಂದು ಬಚಾವತ್ ಹೇಳಿದ್ದಾರೆ. ಕರ್ನಾಟಕ ಯಾವುದೇ ಯೋಜನೆಯನ್ನು ಪೂರೈಸಿಲ್ಲವಾದ್ದರಿಂದ ಹೆಚ್ಚಿನ ನೀರು ಬಳಸುವುದಿರಲಿ, ತನ್ನ ಪಾಲನ್ನೇ ಬಳಸುವ ಸ್ಥಿತಿಯಲ್ಲಿಲ್ಲ. ಮಹಾರಾಷ್ಟ್ರ ೯೫ ಟಿ.ಎಂ.ಸಿ. ಬಳಸಲು ಪ್ರಾರಂಭಿಸಿ ದಶಕಗಳೇ ಆಗಿದೆ. ಇಂದು ೧೫೫ ಟಿ.ಎಂ.ಸಿ. ನೀರನ್ನು ಬಳಸಲು ಅನುಕೂಲವಾಗುವಂತೆ ಕಾಲುವೆಗಳನ್ನು ಸಿದ್ಧಪಡಿಸಿದೆ. ಇದರ ಪರಿಣಾಮ ಕರ್ನಾಟಕದಲ್ಲಿ ಭೀಮಾ ನದಿ ಬತ್ತಿದೆ. ನದಿಯ ಪಾತ್ರದ ೨೦೦ ಹಳ್ಳಿಗಳ ಜನರ ಜೀವನ ಅತಂತ್ರವಾಗಿದೆ. 'ಬತ್ತಿದ ಭೀಮಾನದಿ-ಕಂಗಾಲಾದ ರೈತರು' ಬಗ್ಗೆ ಪತ್ರಿಕೆಗಳು ಸಾಕಷ್ಟು ಬರೆದಿವೆ. ರೈತರ ಶಿಸ್ತುಬದ್ಧ ಹೋರಾಟ ಫಲ ನೀಡದ ಪರಿಣಾಮ, ಮಹಾರಾಷ್ಟ್ರದ ಬ್ಯಾರೇಜ್ ಒಂದರ ಬಾಗಿಲುಗಳನ್ನು ಒಡೆದು ಅಲ್ಲಿಯ ಪೊಲೀಸ್ ಠಾಣೆಯಲ್ಲಿ ಹೆಸರನ್ನು ನೀಡಿದರು. ಇದರಿಂದ ಸಮಸ್ಯೆಯ ತೀವ್ರತೆ ಸಾರ್ವಜನಿಕರ ಗಮನಕ್ಕೆ ಬಂದಿತೇ ಹೊರತು ಸಮಸ್ಯೆ ಪರಿಹಾರ ಕಾಣಲಿಲ್ಲ.

ಬಚಾವತ್ ಆಯೋಗ, ಸುಪ್ರಿಂ ಕೋರ್ಟ್‌ಗಳ ನಿರ್ದೇಶನಗಳನ್ನು ಗಾಳಿಗೆ ತೂರಿ ೧೫೫ ಟಿ.ಎಂ.ಸಿ. ಬಳಕೆಗೆ ಸಿದ್ಧತೆ ಮಾಡಿರುವುದಲ್ಲದೆ, ಮಹಾರಾಷ್ಟ್ರವು ಮೂಲ ಯೋಜನೆಗಳಲ್ಲಿಲ್ಲದ ಕೃಷ್ಣಾ ಮರಾಠವಾಡ ಸ್ಕೀಂ, ಭೀಮಾ-ಸೀನಾ ನದಿ ಜೋಡಣೆಗಳೂ ಸೇರಿದಂತೆ ೭ ಯೋಜನೆ ೫ ಬ್ಯಾರೇಜುಗಳನ್ನು ಕಟ್ಟಿ ೪೮.೫ ಟಿ.ಎಂ.ಸಿ. ನೀರು ಅನಧಿಕೃತವಾಗಿ ಬಳಸುತ್ತಿದೆ. ಇದರ ಪರಿಣಾಮ ಇಂದು ಭೀಮಾನದಿ ಕರ್ನಾಟಕದಲ್ಲಿ ಹರಿಯುತ್ತಲೇ ಇಲ್ಲ.

ಬಿಜಾಪುರದ ಗಡಿಯಲ್ಲಿರುವ 'ಟಾಕಳಿ'ಯಲ್ಲಿ ಮಾಪನ ಕೇಂದ್ರವಿದ್ದು ಅಲ್ಲಿ ನೀರಿನ ಹರಿವು ಅಳೆಯಲಾಗುತ್ತದೆ. ಅಲ್ಲಿ ದಾಖಲಾಗಿರುವಂತೆ,

೧೯೬೫-೧೯೮೫ರವರೆಗೆ ನವೆಂಬರ್‌ನಿಂದ ಮೇ ವರೆಗೆ ಸರಾಸರಿ ೯.೩೦ ಟಿ.ಎಂ.ಸಿ. ನೀರು ಹರಿದಿದೆ.

೧೯೮೬-೯೮ರವರೆಗೆ ನವೆಂಬರ್‌ನಿಂದ ಮೇವರೆಗೆ ಸರಾಸರಿ ೧.೭೦ ಟಿ.ಎಂ.ಸಿ. ನೀರು ಹರಿದಿದೆ. ೯೮ರಿಂದೀಚೆಗೆ ಭೀಮಾನದಿಯಲ್ಲಿ ನೀರೇ ಹರಿಯುತ್ತಿಲ್ಲ.

ಈ ಸಮಸ್ಯೆ ಬಗ್ಗೆ ಸರ್ಕಾರ ಗಮನ ಹರಿಸದೆ, ಗೆಲ್ಲಬೇಕಾದರೆ ಇನ್ನೂ ಹೆಚ್ಚು ವ್ಯವಸ್ಥಿತ ಪ್ರಯತ್ನ ಆಗಬೇಕು.

ಕಾವೇರಿ ಜಲ ವಿವಾದ ಶತಮಾನಗಳಿಂದ ಉಳಿದು ಕೊಂಡು ಬಂದಿದೆ. ಪ್ರತಿವರ್ಷ ತಮಿಳುನಾಡು ಗದ್ದಲ ಮಾಡಿ ನೀರನ್ನು ಪಡೆಯುತ್ತಿದೆ. ಕಾವೇರಿ ಕಣಿವೆಯ ಕೆರೆಗಳ ಹೂಳೆತ್ತಲೂ ತಕರಾರು ತೆಗೆಯುತ್ತಿದೆ. ಕಾವೇರಿ ನ್ಯಾಯ ಮಂಡಳಿ ಮಧ್ಯಂತರ ಆದೇಶವನ್ನು ಜಾರಿಗೆ ಮಾಡುವುದರಿಂದ ಕರ್ನಾಟಕದಲ್ಲಿ ಇನ್ನೂ ಹೆಚ್ಚು ಬರಪೀಡಿತ ಪ್ರದೇಶ ಹೆಚ್ಚುತ್ತಿದೆ. ಕರ್ನಾಟಕ 'ನೀರು ಗಂಟಿ' ಕೆಲಸವನ್ನು ಮಾಡಬೇಕಾದ ಸ್ಥಿತಿ ಬರುತ್ತದೆ. ಇದರಾಚೆಗೆ ಮೈಸೂರು-ಮಂಡ್ಯ ವರುಣಾ ನಾಲೆ ವಿವಾದ, ಹಾಸನ - ತುಮಕೂರುಗಳ ನಡುವೆ, ಬಾಗೂರು-ನವಿಲೆ ನಾಲೆ ವಿವಾದಗಳಂತಹ ಅಂತರ ಜಿಲ್ಲಾ ವಿವಾದಗಳು ನಮ್ಮ ರಾಜ್ಯದ ನೀರಾವರಿ ಪ್ರಗತಿಗೆ ತೊಡಕಾಗಿವೆ.

**ನಾಶದಂಚಿನಲ್ಲಿ ಕೆರೆ ನೀರಾವರಿ**

ಕೆರೆ ನೀರಾವರಿ ಅತ್ಯಂತ ಪ್ರಾಚೀನವಾದ ಮತ್ತು ಅತ್ಯಂತ ಕಡಿಮೆ ಖರ್ಚಿನಲ್ಲಿ ಹೆಚ್ಚು ಜಮೀನಿಗೆ ನೀರೊದಗಿಸುವ, ಪರಿಸರ ಸಂರಕ್ಷಣೆಗೆ ಸಹಕಾರಿಯಾದ ವ್ಯವಸ್ಥೆ. ಪಂಚವಾರ್ಷಿಕ ಯೋಜನೆಗಳು ಪ್ರಾರಂಭವಾಗುವುದಕ್ಕೆ ಮುನ್ನ ಕರ್ನಾಟಕದಲ್ಲಿ ನೀರಾವರಿ ಕೆರೆಗಳದ್ದೇ ಆಗಿತ್ತು. ಇತ್ತೀಚಿನವರೆಗೂ ರಾಜ್ಯದ ಬಿತ್ತನೆ ಪ್ರದೇಶದ ಶೇ. ೭೫ ಭಾಗವು ಕೆರೆ ನೀರಾವರಿಯಿಂದಲೇ ಕೂಡಿತ್ತು. ಅಂತರ್ಜಲ ಸಂರಕ್ಷಣೆಯಲ್ಲಿ, ಹವಾಮಾನದ ಸಮತೋಲನ ಕಾಪಾಡುವಲ್ಲಿ ಕೆರೆಗಳ ಪಾತ್ರ ಅತ್ಯಂತ ಮಹತ್ವದ್ದು. ಒಂದು ಕಾಲದಲ್ಲಿ ಕೆರೆಗಳು ಹಳ್ಳಿಗರ ಜೀವಸೆಲೆಯಾಗಿ ಜನ-ದನ-ಪಕ್ಷಿಗಳ ಬದುಕಿಗೆ ಆಸರೆಯಾಗಿದ್ದವು. ತುಮಕೂರು-ಕೋಲಾರ-ಬೆಂಗಳೂರು ಜಿಲ್ಲೆಗಳು 'ಕೆರೆಗಳ ಮಂಡಲ'ವಾಗಿತ್ತು. ಒಂದು ಕೆರೆ ತುಂಬಿ ಕೋಡಿಬಿದ್ದರೆ ಇನ್ನೊಂದು ಕೆರೆಗೆ ನೀರು ಹೋಗುತ್ತಿತ್ತು. ಕೆರೆ-ಕೆರೆಗಳ ನಡುವೆ ಸಂಪರ್ಕ ಕಲ್ಪಿಸಲಾಗಿತ್ತು. ಕೆರೆಗಳು ನದಿಗಳಿಲ್ಲದ ಊರಿಗೆ ವರದಾನವಾಗಿದ್ದವು. ಕೆರೆಗಳನ್ನು ಅಲ್ಪವೆಚ್ಚದಲ್ಲೇ ನಿರ್ವಹಣೆ ಮಾಡಬಹುದು. ಕೆರೆಗಳಿಂದ ಮುಳುಗಡೆ ಆಗುವ ಜಮೀನು, ನಾಶವಾಗುವ ಕಾಡು ಅತೀ ಕಡಿಮೆ. ಕೆರೆಗಳ ಹೂಳೆತ್ತುವುದೂ ಸುಲಭವಾಗಿತ್ತು. ಪ್ರತಿ ಬೇಸಿಗೆಯಲ್ಲಿ ಹಳ್ಳಿಗರು ಕೆರೆಯ ಹೂಳೆತ್ತಿ ಗದ್ದೆಗೆ ಸಾಗಿಸುತ್ತಿದ್ದರು. ಈ ಹೂಳು ಗೊಬ್ಬರವಾಗುತ್ತಿತ್ತು. ಸ್ವಾತಂತ್ರ್ಯಪೂರ್ವದಲ್ಲಿ ಕೆರೆಗಳ ನಿರ್ವಹಣೆ ಹಳ್ಳಿಗರದೇ ಆಗಿತ್ತು. ಹಾಗಾಗಿ ಕೆರೆಗಳು ಸುಸ್ಥಿತಿಯಲ್ಲಿದ್ದವು. ಸ್ವಾತಂತ್ರ್ಯಾನಂತರ ಕೆರೆಗಳ ನಿರ್ವಹಣೆ ಸರ್ಕಾರದ ಜವಾಬ್ದಾರಿಯಾಯಿತು. ಬೃಹತ್ ನೀರಾವರಿ ಬೆಳೆದಂತೆ ಕೆರೆಗಳು ನಗಣ್ಯವಾದವು. ಜನರ ನಿರ್ಲಕ್ಷ್ಯ-ಆಸೆಬುರುಕತನದಿಂದಾಗಿ ೧೯೪೨ರಲ್ಲಿ ೮೦ ಸಾವಿರದಷ್ಟಿದ್ದ ಕೆರೆಗಳು ೧೯೭೬ರ ಹೊತ್ತಿಗೆ ೩೮,೩೯೮ಕ್ಕಿಳಿಯಿತು. ೧೯೮೯ರ ಹೊತ್ತಿಗೆ ೨೨,೭೬೫ ಕೆರೆಗಳು ಮಾತ್ರ ಉಳಿದಿದ್ದವು. ಇಂದು ಈ ಸಂಖ್ಯೆಯು ಇನ್ನೂ ಇಳಿದಿರುತ್ತದೆ.

(ಕೋಷ್ಟಕ-೨)

| ಕ್ರ. ಸಂ.. | ವರ್ಷ | ನೀರಾವರಿ (ಎಕರೆಗಳಲ್ಲಿ) | |
|---|---|---|---|
| | | ಕಾಲುವೆಗಳಿಂದ | ಕೆರೆಗಳಿಂದ |
| ೧ | ೧೯೫೫-೫೬ | ೩,೮೧,೬೫೬ | ೭,೮೨,೩೦೦ |
| ೨ | ೧೯೬೦-೬೧ | ೫,೮೨,೧೪೯ | ೮,೪೮,೬೩೦ |
| ೩ | ೧೯೬೫-೬೬ | ೮,೯೦,೧೮೮ | ೮,೦೦,೯೩೪ |
| ೪ | ೧೯೭೦-೭೧ | ೧೧,೦೮,೨೭೭ | ೯,೦೧,೬೦೧ |
| ೫ | ೧೯೭೫-೭೬. | ೧೨,೧೯,೦೪೦ | ೧೦,೨೫.೭೭೮ |
| ೬ | ೧೯೮೦-೮೧ | ೧೩,೬೬,೪೬೦ | ೯,೦೯,೧೫೦ |
| ೭ | ೧೯೮೫-೮೬ | ೧೮,೩೬,೮೯೦ | ೬,೦೪,೯೧೦ |
| ೮ | ೧೯೮೭-೮೮ | ೧೯,೧೩,೭೨೫ | ೫,೯೫;೦೮೭ |

ಕೆರೆಗಳ ಅವನತಿಯನ್ನು ಕೋಷ್ಟಕ-೨ ಸೂಚಿಸುತ್ತದೆ. ಇಲ್ಲಿರುವ ಸಂಖ್ಯೆಗಿಂತಲೂ ಕಮ್ಮಿ ನೀರಾವರಿ ಕೆರೆಗಳಿಂದ ಆಗುತ್ತಿದೆ ಎಂದು ತಜ್ಞರು ಭಾವಿಸುತ್ತಾರೆ. ಉಳಿದಿರುವ ಕೆರೆಗಳನ್ನೂ ದುರಸ್ಥಿ ಮಾಡುತ್ತಿಲ್ಲ. ನಗರಗಳಲ್ಲಂತೂ ಕೆರೆ ಒತ್ತುವರಿ ಲಾಭದಾಯಕ ದಂಧೆ ಆಗಿದೆ. ಈ ದುಃಸ್ಥಿತಿಯಲ್ಲೂ ಒಂದು ಆಶಾದಾಯಕ ಸಂಗತಿ ಎಂದರೆ ಸರ್ಕಾರವು ಕೆರೆಗಳ ಹೂಳೆತ್ತುವ ಪ್ರಯತ್ನ ಮಾಡುತ್ತಿರುವುದು.

ಕೆರೆಗಳ ಅವನತಿಯಿಂದ ಅಂತರ್ಜಲ ಮಟ್ಟ ಕುಸಿದಿದೆ. ಕೋಲಾರ, ತುಮಕೂರು, ಬೆಂಗಳೂರು ಸೇರಿದಂತೆ ೧೯ ಜಿಲ್ಲೆಗಳ ಅಂತರ್ಜಲ ಮಟ್ಟ ಅಪಾಯಕಾರಿ ಮಟ್ಟ ಮುಟ್ಟಿದೆ. ಒಳನಾಡು ಮೀನುಗಾರಿಕೆ, ಪರಿಸರ ಸಮತೋಲನಕ್ಕೆ ಹಾನಿ ಆಗಿದೆ. ಹಲವೆಡೆ ಹಸಿರು ಕಣ್ಮರೆ ಆಗಿದೆ. ಕೆಲವು ದಶಕಗಳ ಹಿಂದೆ ಬೆಂಗಳೂರಿನಲ್ಲಿ ೮೬ ಕೆರೆಗಳಿದ್ದವು. ಇಂದು ಅದು ೯ಕ್ಕೆ ಇಳಿದಿದೆ. ಇದರ ಪರಿಣಾಮವಾಗಿ ಬೆಂಗಳೂರು ಹವಾನಿಯಂತ್ರಿತ ನಗರ ಎನ್ನುವ ಖ್ಯಾತಿ ಕಳೆದುಕೊಂಡಿದೆ. ಬೆಂಗಳೂರು ಇಂದು ಅಸ್ತಮಾ ರೋಗದ ತವರಾಗಿದೆ.

ಪ್ರಚಲಿತ ನೀರಾವರಿ ವ್ಯವಸ್ಥೆ ಸಮರ್ಪಕವಾಗಿಲ್ಲ ಅನ್ನುವುದು ಎಲ್ಲರಿಗೂ ತಿಳಿದ ವಿಷಯ. ಕಾಲುವೆಯ ಕಾಮಗಾರಿ, ನಿರ್ವಹಣೆ ಸಮರ್ಪಕವಾಗಿಲ್ಲ. ರೈತರು, ತಜ್ಞರು, ಆಳುವವರೂ ಸೇರಿ ನೀರಾವರಿ ಕ್ಷೇತ್ರಕ್ಕೆ ಕಾಯಕಲ್ಪ ನೀಡಬೇಕು. ನೀರಾವರಿಯಲ್ಲಿ ಪ್ರಗತಿ ಎಂದರೆ ಹೆಚ್ಚು ಹೆಚ್ಚು ಹೊಲಗದ್ದೆಗಳಿಗೆ ನೀರು ಒದಗಿಸುವುದೊಂದೇ ಅಲ್ಲ. ಕಡಿಮೆ ನೀರು ಬಳಸಿ ಹೆಚ್ಚು ಉತ್ಪನ್ನ ಮತ್ತು ಲಾಭ ಹೆಚ್ಚಾಗುವಂತೆ ಮಾಡಿದರೆ ಆ ನೀರಾವರಿ ಪ್ರಗತಿಪರ ಮತ್ತು ವೈಜ್ಞಾನಿಕ ಅನ್ನಿಸಿಕೊಳ್ಳುತ್ತದೆ. ಇಸ್ರೇಲ್ ದೇಶದವರು ಕಡಿಮೆ ನೀರನ್ನು ಬಳಸಿ ಮರಳುಗಾಡನ್ನು ನಂದನ ವನವನ್ನಾಗಿ ಮಾಡಿದ್ದಾರೆ. ನಾವು ಅವರ ಪದ್ಧತಿಯನ್ನು ಅಧ್ಯಯನ ನಡೆಸಿ ಅನುಷ್ಠಾನಕ್ಕೆ ತರಬೇಕು. ನೀರು ನಿಸರ್ಗ ದತ್ತ ಅನನ್ಯವಾದ ಸಂಪತ್ತು. ಅದು ಸರ್ವಜನರ ಉಪಯೋಗಕ್ಕೆ ಬಳಕೆ ಆಗಬೇಕು. ಪ್ರಬಲರ-ಪಟ್ಟಭದ್ರರ ಹಿಡಿತಕ್ಕೆ ಸಿಕ್ಕಬಾರದು.

ರಾ. ನಂ. ಚಂದ್ರಶೇಖರ
ಶ್ರೀ ಲಕ್ಷ್ಮಿ ಕೆಮಿಕಲ್, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್
೨ನೇ ಅಡ್ಡರಸ್ತೆ, ಸಿ.ಕೆ. ಜಿ. ಗಾರ್ಡನ್, ಬೆಂಗಳೂರು-೨೦

# ಹಿಂದುತ್ವದ ಹಿಂಡಿ...

''ಶಾಲೆಯಲ್ಲಿ ಜಲಜನಕದ ಎರಡು ಅಣುಗಳು ಮತ್ತು ಆಮ್ಲಜನಕದ ಒಂದು ಅಣು ಸೇರಿ ನೀರಾಗುತ್ತದೆ ಎನ್ನುವ ಅಧ್ಯಾಪಕರಾಗಲಿ ಮಕ್ಕಳಾಗಲಿ ಮನೆಯಲ್ಲಿ $H_2O$ ಕೊಡಿ ಎನ್ನುವುದಿಲ್ಲ. ಗಂಗಾಜಲ ಕೊಡಿ ಎನ್ನುತ್ತಾರೆ'' ಎಂಬ ಮಾತು ಹಾಸ್ಯಮಯವಾಗಿ ಕಾಣುತ್ತದೆಯೋ ಹಾಸ್ಯಾಸ್ಪದ ವಾಗಿ ಕಾಣುತ್ತದೆಯೋ ?

ಏನೇ ಇರಲಿ ಇಂಥ ವಾದಗಳ ಜನಕರು, ಪ್ರವರ್ತಕರು ಇದ್ದಾರೆ. ಅಂಥವರ ಇನ್ನೂ ಕೆಲವು ವಾದಗಳು ಹೀಗಿವೆ :

''ಚೀನಾದಲ್ಲಿ ಯಾಂಗ್‌ಟ್ಸೀಕಿಯಾಂಗ್ ಮತ್ತು ಹೊಯಾಂಗ್ ಹೊ ಎರಡೇ ನದಿಗಳು ಹರಿಯುವುದು. ಅಮೆರಿಕಾ ಖಂಡದಲ್ಲಿ ಮಿಸ್ಸೋರಿ ಮತ್ತು ಮಿಸ್ಸಿಸಿಪಿ ಎರಡೇ ನದಿಗಳು. ರಷ್ಯಾದಲ್ಲಿ ಓಲ್ಗಾ, ಈಜಿಪ್ಟಿನಲ್ಲಿ ನೈಲ್ ಹೀಗೆ ಒಂದೊಂದೇ ನದಿಗಳು. ಆದರೆ ನಮ್ಮಲ್ಲಾದರೋ ಗಂಗಾ, ತುಂಗಾ, ಕಾವೇರಿ, ಬ್ರಹ್ಮಪುತ್ರ, ಕೃಷ್ಣಾ, ಗೋದಾವರಿ, ನರ್ಮದಾ, ಸಿಂಧೂ.... ಆದ್ದರಿಂದ ನಾವೇ ಶ್ರೇಷ್ಠರು !''

''ಮುಸಲ್ಮಾನರಿಗೆ, ಕ್ರೈಸ್ತರಿಗೆ ಒಂದೊಂದೇ ದೇವರು, ಆದರೆ ನಮಗಾದರೋ ಲೆಕ್ಕವಿಲ್ಲದಷ್ಟು. ಆದ್ದರಿಂದ ನಾವೇ ಶ್ರೇಷ್ಠರು !'' ''ಬೇರೆಯವರೆಲ್ಲ ಭೂಮಿಯನ್ನು ತುಳಿಯುತ್ತಾರೆ. ನಾವಾದರೆ ಹಾಗಲ್ಲ, ಪೂಜಿಸುತ್ತೇವೆ. ಆದ್ದರಿಂದ ನಾವೇ ಶ್ರೇಷ್ಠರು !'' ''ಬೇರೆಯವರೆಲ್ಲ ಸತ್ತರೆ ಸತ್ತರೇ; ಆದರೆ ನಮ್ಮ ಹಿರಿಯರಿಗೆ ಸತ್ತವರನ್ನು ಬದುಕಿಸುವ ಸಂಜೀವಿನಿ ತಿಳಿದಿತ್ತು. ಆದ್ದರಿಂದ ನಾವೇ ಶ್ರೇಷ್ಠರು !''

ಇವಕ್ಕೆ ಕೊನೆ ಮೊದಲೇ ಇಲ್ಲ. ಈ ವಾದಗಳು ಎಷ್ಟು ಅರ್ಥಹೀನ ಮತ್ತು ಅವುಗಳ ಹಿಂದೆ ಇರುವ ಮೂಲ ಉದ್ದೇಶವೇನು ಎನ್ನುವುದು ಮುಖ್ಯ ವಿಚಾರ.

ಮೊದಲನೆಯದಾಗಿ, ನಮ್ಮ ಸಂವಹನ ವೈಜ್ಞಾನಿಕ ಭಾಷೆಯಲ್ಲಿ ನಡೆಯುತ್ತಿಲ್ಲ ಎಂದು ಗಮನಿಸಬೇಕು. ಇಂಗ್ಲಿಷ್‌ನಲ್ಲಿ ನೀರಿಗೆ 'ವಾಟರ್' ಎನ್ನುತ್ತಾರೆಯೇ ಹೊರತು $H_2O$ ಎನ್ನುವುದಿಲ್ಲ. ವ್ಯಕ್ತಿಗೆ 'ಪರ್ಸನ್' ಅಥವಾ 'ಹ್ಯೂಮನ್ ಬೀಯಿಂಗ್' ಎನ್ನುತ್ತಾರೆಯೇ ಹೊರತು 'ಹೋಮೋ ಸೆಪಿಯನ್ಸ್' ಎನ್ನುವುದಿಲ್ಲ. ಹಾಗೆಯೇ ಇತರ ಭಾಷೆಗಳಲ್ಲಿಯೂ ಸಹ ವಸ್ತುವನ್ನು ಭಾಷಿಕ ನೆಲೆಯಲ್ಲಿ ಕರೆಯುತ್ತಾರೆಯೇ ವಿನಃ ವೈಜ್ಞಾನಿಕ ಭಾಷೆಯಲ್ಲಿ ಅಲ್ಲ. ಕನ್ನಡದಲ್ಲಾದರೂ ನೀರನ್ನು ಸಹಜವಾಗಿ 'ನೀರು' ಎಂದೇ ಕರೆಯುವರಲ್ಲದೆ ಗಂಗಾಜಲವೆನ್ನುವ ಪರಿಪಾಠ ಬಳಕೆಯಲ್ಲಿಲ್ಲ. ಹಾಗೊಂದು ವೇಳೆ ಇದ್ದರೆ ಅದು ಉದ್ದೇಶ ಪೂರ್ವಕವಾಗಿ ಇರಬೇಕೇ ಹೊರತು ಸಹಜವಾಗಿ ಅಲ್ಲ. ಅಥವಾ ಒಂದು ವರ್ಗ ತನ್ನ ಸಂಸ್ಕೃತಜನ್ಯ ಸಾಂಸ್ಕೃತಿಕ ಜೀವನ ವಿಧಾನವನ್ನು ಅಳವಡಿಸಿಕೊಂಡಿದ್ದಾಗ ಅಂಥ ಮಾತುಗಳು ಬರಬಹುದು.

ಜಗತ್ತಿನ ನದಿಗಳ ವಿಚಾರದಲ್ಲಿ ಹೇಳಲಾಗುವ ವಾದ ಭೂಗೋಳಶಾಸ್ತ್ರದ ಅಧ್ಯಯನದ ಕೊರತೆಯನ್ನು ಸಾಬೀತುಪಡಿಸುತ್ತದೆ. ಅಮೆರಿಕಾ ಖಂಡದಲ್ಲಿ ಬ್ರಜೋಸ್, ಅಲಬಾಮ ನದಿ, ಅಲ್ತಮಹ, ರೆಡ್, ಪೀಸ್, ಗಿಲ, ಓಹಿಯೊ – ಮುಂತಾಗಿ ಹಲವು ನದಿಗಳು ಹರಿಯುತ್ತವೆ. ರಷ್ಯಾದಲ್ಲಿ ಯುರಾಲ್, ಕುರಾ, ಡಾನ್, ಓಬ್, ಒಲೆನೆಕ್ ಮುಂತಾದ ನದಿಗಳು, ಚೀನಾದಲ್ಲಿ ಕಿನ್‌ಶಾ, ರಿಯಾಹೋ ಮೊದಲಾದವುಗಳಿವೆ. ಇರಾಕ್‌ನ ಸಹಜ ಭೌಗೋಳಿಕ ಭಿನ್ನತೆಗನುಗುಣವಾಗಿ ಅಲ್ಲಿ ನದಿಗಳ ಪ್ರಮಾಣ ಕಡಿಮೆ ಇರಬಹುದು. ಆದರೆ ನಮ್ಮಲ್ಲಿ ನಿಮಗಿಂತ ಹೆಚ್ಚು ಪೆಟ್ರೋಲ್ ಸಿಗುತ್ತದೆ, ಆದ್ದರಿಂದ ನಾವೇ ಶ್ರೇಷ್ಠರು ಎಂದರೆ ಅದಕ್ಕೇನು ಉತ್ತರ ಕೊಡಬಲ್ಲೆವು ?

ಇನ್ನು ದೇವರುಗಳ ಸಂಖ್ಯೆಯ ವಿಷಯ: ದೇವರು ಅವ್ಯಕ್ತ ಕಲ್ಪನೆ. ಅದು ಎಷ್ಟರಮಟ್ಟಿಗೆ ಒಳಿತನ್ನುಂಟುಮಾಡಿದೆ ಎಂಬ ವಿಷಯ ಮುಖ್ಯವೇ ಹೊರತು ಎಷ್ಟು ಸಂಖ್ಯೆಯಲ್ಲಿದೆ ಎಂಬುದಲ್ಲ. ದೇವರುಗಳ ಸಂಖ್ಯೆ ಹೆಚ್ಚಿದಷ್ಟೂ ಅನುಯಾಯಿಗಳ ಸಂಖ್ಯೆ ಹೆಚ್ಚಿ ತಮ್ಮ ತಮ್ಮದೇ ಪಂಥಗಳನ್ನು ಸೃಷ್ಟಿಸಿಕೊಂಡು ಬಡಿದಾಡಿಕೊಂಡದ್ದೇ ಹೆಚ್ಚು.

**ಅರವಿಂದ ಚೊಕ್ಕಾಡಿ**

ಭೂಮಿ ಪೂಜೆಯ ವಿಷಯದಲ್ಲಿ ನಾವು ಹೆಚ್ಚು ಸಂಸ್ಕಾರವಂತರು ಎನ್ನಲಾಗುತ್ತದೆ. ಆದರೆ ಈ ಸಂಸ್ಕಾರವಂತರು ಭೂಮಿಯನ್ನು ಕ್ಷಣಮಾತ್ರದಲ್ಲಿ ಇಲ್ಲವಾಗಿಸಬಲ್ಲ ಅಣ್ವಸ್ತ್ರಗಳನ್ನು ಪೇರಿಸಿಟ್ಟುಕೊಂಡಿದ್ದಾರೆ ಎನ್ನುವುದನ್ನು ಮರೆಯಬಾರದು. ಭೂಮಿಯ ಮೇಲೆಲ್ಲ ರಾಶಿ ರಾಶಿ ಕಸದ ಚೂರುಗಳನ್ನೆಸೆದು ವಾತಾವರಣ ಕಲುಷಿತವಾಗುತ್ತಿರುವುದನ್ನು, ಗಂಗಾ ನದಿಯ ನೀರಿನಲ್ಲಿ ಫ್ಯಾಕ್ಟರಿಗಳ ಕಲುಷಿತ ನೀರಿನೊಂದಿಗೆ ಹೆಣಗಳೂ ಬೆರೆತುಕೊಂಡು ಅದು ಹಾಳಾಗುತ್ತಿರುವುದನ್ನು ಮರೆಯಲಾಗದು. ಅಷ್ಟಾಗಿಯೂ ಭೂಮಿ ಪೂಜೆ ಒಂದು ಸಂಸ್ಕಾರ ಎಂದರೆ 'ಭೂಮಿಯನ್ನು ಉಳುಮೆ ಮಾಡಿ ಅಧಿಕ ಬೆಳೆ ತೆಗೆಯುವುದೇ ನಮ್ಮ ಸಂಸ್ಕಾರ' ಎಂದು ಪ್ರತಿವಾದ ಹೂಡಿದರೆ ಅದನ್ನು ಸಂಸ್ಕಾರವಲ್ಲ ಎನ್ನುವಂತಿದೆಯೇ ?




ಸತ್ತವರನ್ನು ಬದುಕಿಸುವ ಸಂಜೀವಿನಿ ನಮ್ಮ ಹಿರಿಯರಿಗೆ ತಿಳಿದಿತ್ತು ಎಂಬುದು ನಿಜವಾದರೆ ನಮ್ಮಲ್ಲಿ ಅಷ್ಟೊಂದು ಜನ ನೂರಾರು ವರ್ಷ ಉಳಿಯದೆ ಏಕೆ ಹೋದರು ಎಂಬ ಪ್ರಶ್ನೆ ಬರುತ್ತದೆ. ನಮ್ಮಲ್ಲಿ ವಿಮಾನ ಸಹ ಇದ್ದಿತೆಂಬ ಮಾತಿದೆ. ನಾಗರಿಕತೆಯ ಪ್ರಾರಂಭಿಕ ಹಂತದಲ್ಲಿ ಅಷ್ಟೊಂದು ಪ್ರೌಢರಾಗಿರುವುದಕ್ಕೆ ಸಾಧ್ಯವಿತ್ತೇ ಎಂಬ ಪ್ರಶ್ನೆ ಒಂದಾದರೆ ಇನ್ನೊಂದು ಅಂಥ ವಿಜ್ಞಾನ-ತಂತ್ರಜ್ಞಾನಗಳ ಬಳಕೆ ಇದ್ದಿದ್ದರೆ ರಥ-ಕುದುರೆಗಳೆಲ್ಲ ಏಕೆ ಸಂಚಾರ ಸಾಧನಗಳಾಗಿ ಉಪಯೋಗಿಸಲ್ಪಟ್ಟಿದ್ದವು ? ಅಥವಾ ಸಂಜೀವಿನಿಯನ್ನು ತಯಾರಿಸುವ ವಿಧಾನಗಳೋ, ಆ ಸಸ್ಯವನ್ನು ಗುರುತಿಸುವ ಲಕ್ಷಣಗಳೋ ನಮ್ಮ ಗ್ರಂಥಗಳಲ್ಲಿ ಉಲ್ಲೇಖವಾಗಿರ ಬೇಕಿತ್ತು. ಅದಕ್ಕೂ ನಮ್ಮಲ್ಲಿ ಸಮರ್ಥನೆ ಇದೆ. ಇದೆಲ್ಲ ಮುಂದಿನ ಜನಾಂಗಕ್ಕೆ ಅಪಾಯಕಾರಿ ಎಂದು ಗ್ರಹಿಸಿದ ನಮ್ಮ ಹಿರಿಯರು ಅದರ ಉಲ್ಲೇಖವಷ್ಟೇ ಮಾಡಿ ಅದನ್ನು ಸಿದ್ಧಪಡಿಸುವ ವಿಧಾನಗಳನ್ನು ತಿಳಿಸಲಿಲ್ಲ ಎನ್ನುತ್ತಾರೆ. ಸಾಮಾನ್ಯವಾಗಿ ಹಿರಿಯರ ಆಸ್ತಿ ಮಕ್ಕಳಿಗೆ ಬರುವುದು ರೂಢಿ. ಹಾಗಿರುವಾಗ ತಾವು ಉಪಯೋಗಿಸಿದ್ದನ್ನು ಮಕ್ಕಳಿಗೆ ಕೊಡಬಾರದು ಎಂಬ ಹಿರಿಯರಿದ್ದರೆ ಅವರೆಂಥ ಸ್ವಾರ್ಥಿಗಳಿರಬಹುದು ? ಇಂಥಲ್ಲಿ ಸಂಜೀವಿನಿ ಇತ್ತು ಎನ್ನುವವರು ಸ್ವತಃ ಸಂಶೋಧನೆಗಿಳಿದುಬಿಡಬೇಕು. ಈ ರೀತಿಯ ಅನ್ವೇಷಣೆಗಿಳಿಯದೆ ಬರಿದೇ ವಾದ ಹೂಡುವವರು ಒಂದಂಶವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಒಂದೋ ತಾವು ಹೂಡುವ ವಾದಗಳು ತರ್ಕಕ್ಕೆ ನಿಲುಕುವಂಥವಿರಬೇಕು ಅಥವಾ ವೈಜ್ಞಾನಿಕವಾಗಿ ಸಾಬೀತುಪಡಿಸಿ ಪ್ರಮಾಣೀಕರಣದ ಸೂತ್ರಕ್ಕೆ ಒಳಪಡಿಸುವಂಥವಿರಬೇಕು.

ತರ್ಕಕ್ಕೆ ನಿಲುಕದವುಗಳು ಇಲ್ಲವೇ ಇಲ್ಲವೆನ್ನಲಾಗದು. ಆದರೆ ಅಂಥ ಸಂದರ್ಭದಲ್ಲಿ ತರ್ಕಾತೀತ ನೆಲೆಯ ಹುಡುಕಾಟ ಸಮಾಜಕ್ಕೆ ಪೂರಕವಾದ ಪ್ರಾಮಾಣಿಕ ಹುಡುಕಾಟವಾಗಿರಬೇಕು. ದುರದೃಷ್ಟವೇನೆಂದರೆ, ಅಂಥ ಹುಡುಕಾಟ ನಡೆಸಿದ್ದ ಸ್ವಾಮಿ ವಿವೇಕಾನಂದರಂಥವರ ತತ್ತ್ವಗಳು ಬೇಕಾಗುವುದಿಲ್ಲ. ಅವರು 'ಹಿಂದೂ' ಎನ್ನುವುದಷ್ಟೇ ಬೇಕು !

ಭೂಮಿ ಪೂಜೆ ನಮ್ಮ ಸಂಸ್ಕೃತಿ ಎನ್ನುವಾಗಲೇ ನಾವು ನಿರ್ಮಿಸ ಹೊರಟಿರುವ ರಾಷ್ಟ್ರ ಹಿಂದೂ ರಾಷ್ಟ್ರವಲ್ಲ, ವೈದಿಕ ರಾಷ್ಟ್ರವೆಂದು ತಿಳಿಯುತ್ತದೆ. ಶೂದ್ರರಿಗೆ ಆಸ್ತಿಯ ಒಡೆತನದ ಹಕ್ಕು ನಿರಾಕರಿಸಿರುವ ಧರ್ಮವನ್ನು ಎತ್ತಿಹಿಡಿಯುತ್ತಿರುವಲ್ಲಿ ಭೂಮಿ ಪೂಜೆಯ ಸಂಸ್ಕೃತಿ ಯಾರದೆಂದು ತಿಳಿಯುತ್ತದೆ. ಗಂಗಾಜಲವೆಂದು ಯಾವುದನ್ನು ಕೆಲವರು ಕರೆಯುತ್ತಿದ್ದಾರೋ ಅದಕ್ಕೆ ಕನ್ನಡಿಗರು 'ನೀರು' ಎನ್ನುತ್ತಾರೆ. ತಮಿಳರು 'ತಣ್ಣಿ' ಎನ್ನುತ್ತಾರೆ. ಮಲೆಯಾಳಿಗಳು 'ವೆಳ್ಳಂ' ಎನ್ನುತ್ತಾರೆ. ಅಷ್ಟಿದ್ದ ಮೇಲೆ 'ಗಂಗಾಜಲ'ವೇ ಪ್ರತಿಯೊಬ್ಬರ ಭಾಷೆ ಎಂಬಂತೆ ಬಿಂಬಿಸುವುದೇಕೆ ? ಭಾರತದಲ್ಲಿ ಸುಮಾರು ಒಂದು ಸಾವಿರಕ್ಕೂ ಹೆಚ್ಚಿನ ಭಾಷೆಗಳಿವೆ, ಉಪಭಾಷೆಗಳಿವೆ. ಅವನ್ನು ಮೇಲೆತ್ತುವ ಪ್ರಯತ್ನ ಮಾಡಬೇಕು. ಕೋತ, ತೋದ, ಕೊರಗ, ಕೊಡವ, ಬಡಗ, ಇರುಳ, ಸವರ,

ಗೊಂಡಿ, ಕೋಯ, ಕೊಂಡ, ಕುಬಿ, ಪೆಂಗೋ, ಮಂಡಾ, ಕುಯಿ, ಕುವಿ, ಕೊಲಾಮಿ, ನಾಯ್ಕಿ, ಪರ್ಜಿ, ಗದಬ, ವಲ್ಲಾರಿ, ಕುರಖ್, ಮಾಲ್ತೋ, ಬ್ರಾಹೂಯಿ, ತುಳು ಮುಂತಾದ ಭಾಷೆಗಳೂ ನಮ್ಮವೇ ಎಂದು ತಿಳಿದು ಕೊಳ್ಳಬೇಕು. ತುಳು ಭಾಷೆಗೆ ಲಿಪಿಯೂ ಇದೆ. ಭಾರತೀಯ ಸಂಸ್ಕೃತಿ ಎನ್ನುವಾಗ ಈ ಭಾಷೆಗಳೂ ಸಂಸ್ಕೃತಿಯ ಪ್ರತಿನಿಧಿಗಳೆಂಬುದನ್ನು ತಳ್ಳಿಹಾಕಲಾಗದು. ಸಂಸ್ಕೃತಕ್ಕೆ ಆದ್ಯತೆ ಸಿಗಬೇಕೆನ್ನುವಾಗ ಇವಕ್ಕೂ ಆದ್ಯತೆ ಸಿಗಬೇಕಾದ್ದು ನ್ಯಾಯಬದ್ಧವಾದುದೇ. ಇವೆಲ್ಲ ಈಗ ಬಳಕೆಯಾಗುತ್ತಿರುವ ಪ್ರಮಾಣ ಕಡಿಮೆ ಎಂದರೆ ಸಂಸ್ಕೃತವನ್ನು ಬಳಸುತ್ತಿರುವವರ ಸಂಖ್ಯೆಯೂ ಕಡಿಮೆ ಎಂದು ಅರ್ಥೈಸಿಕೊಳ್ಳಬೇಕು. ಸಂಸ್ಕೃತ ಈ ದೇಶದ ಸಂಸ್ಕೃತಿಯನ್ನು ರೂಪಿಸಿದೆ ಎನ್ನುವುದಾದರೆ ಈ ಎಲ್ಲ ಭಾಷೆಗಳೂ ಸಂಸ್ಕೃತಿಯನ್ನು ರೂಪಿಸಿದಂಥವುಗಳೇ ಎನ್ನುವುದನ್ನು ನೆನಪಿಟ್ಟುಕೊಳ್ಳ ಬೇಕು. ಪಾಲಿ, ಪ್ರಾಕೃತ, ಅರ್ಧಮಾಗದಿಯಂಥ ಭಾಷೆಗಳೂ ಕೂಡ ಸಂಸ್ಕೃತಿಯನ್ನು ರೂಪಿಸಿವೆ ಎಂದಾಗ ಅವಕ್ಕೂ ಪ್ರಾಮುಖ್ಯತೆ ದೊರೆಯಬೇಕಲ್ಲವೇ ?

'ರಾಮ'ನ ಕಾರಣಕ್ಕೆ ಇಡೀ ದೇಶವೇ ತಲೆಕೆಡಿಸಿ ಕೊಂಡಿದೆಯೇನೋ ಎಂದು ಪ್ರತಿಬಿಂಬಿಸುತ್ತಿರುವವರು, ರಾಮನ ಪೂಜೆ ಅಯೋಧ್ಯೆಯಲ್ಲಿಯೇ ಆಗಬೇಕೆಂಬುದು ಹಿಂದೂಗಳ ನಂಬಿಕೆ ಎನ್ನುವವರು, ಭರತನಾಟ್ಯ ಈ ಮಣ್ಣಿನ ಸಂಸ್ಕೃತಿ ಎನ್ನುವವರು, ಭೂತಾರಾಧನೆಯತ್ತಲೂ ಗಮನ ಹರಿಸಬೇಕು. ರಾಮನಿಗೆ ಮಾತ್ರವಲ್ಲ ಮಾರಮ್ಮ, ಮಹಂಕಾಳಮ್ಮ, ಕೊರಗ-ತನಿಯ, ಕಲ್ಲುರ್ಟಿ, ಧೂಮಾವತಿ ಮುಂತಾದ ದೈವಗಳ ಪೂಜೆ ಮಾಡುತ್ತಿರುವವರು, ಆ ದೈವ ಗಳಿಗೆಲ್ಲ ಆಲಯ ನಿರ್ಮಿಸಬೇಕೆಂದುಕೊಳ್ಳುವವರು ಹಿಂದೂಗಳೇ ಆಗಿದ್ದಾರೆ ಎಂದು ತಿಳಿಯಬೇಕು. ಕೋಲಾಟ, ಚೆನ್ನೆಮಣೆ ಆಟ, ಆಟಿ ಕಳಂಜ ನೃತ್ಯ, ದೊಂಬರ ಕುಣಿತಗಳೂ ಈ ಮಣ್ಣಿನ ಸಂಸ್ಕೃತಿಯೇ ಎಂಬ ಸತ್ಯ ಅರಿಯಬೇಕು.

ಕಾಲಚಕ್ರದ ತಿರುಗುವಿಕೆಯಲ್ಲಿ ಚರಿತ್ರೆ ಪುನರಾವರ್ತನೆ ಯಾಗುವುದು ಸಹಜ ಎಂಬ ವಾದವೂ ಇದೆ. ತಿರುಗುವ ಕಾಲಚಕ್ರ ಒಂದು ಉರುಳು ಉರುಳುವಾಗ ಒಂದಷ್ಟು ಮುಂದಕ್ಕೂ ಹೋಗಿರುತ್ತದೆ, ಆ ಒಂದು ಸುತ್ತುವಿಕೆಯಲ್ಲಿ ಹಲವು ಹೊಸ ಅಂಶಗಳನ್ನು ರೂಢಿಸಿಕೊಂಡಿರುತ್ತದೆ. ಹೀಗಿರುವಾಗ ನಮ್ಮ ಕಾಲಚಕ್ರ ಈಗ ಒಂದು ಉರುಳು ಉರುಳಿದೆ ಎಂದುಕೊಂಡರೆ ಅದು ಕ್ರಮಿಸಿದ ಹಾದಿಯಲ್ಲಿ ಬೌದ್ಧ, ಪಾರಸಿ, ಮುಸ್ಲಿಂ, ಕ್ರೈಸ್ತ ಮುಂತಾದ ಸಂಸ್ಕೃತಿಗಳನ್ನು ರೂಢಿಸಿಕೊಂಡಿರುವುದೇ ಅಲ್ಲದೆ ಹಿಂದೂ ಸಮಾಜದಲ್ಲಿ ಶೋಷಣೆಗೊಳಗಾಗಿದ್ದ ಜನರಿಗೆ ಒಂದಷ್ಟು ಬೌದ್ಧಿಕ ಅರಿವು ಸಿಕ್ಕಿದೆ ಎನ್ನುವುದು ಗಮನಕ್ಕೆ ಬರುತ್ತದೆ. ಶೋಷಣಾ ಮುಕ್ತತೆಯ ಹಾದಿಯಲ್ಲಿ ನಾವು ಸ್ವಲ್ಪ ಮುಂದಕ್ಕೂ ಬಂದಿರುವುದು ತಿಳಿಯುತ್ತದೆ. ಈ ಹಂತದಲ್ಲಿ ಮತ್ತೆ ನಾವು ಹಿಂದಿನಂತೆ ಶೋಷಣೆಗೆ ಹಾದಿಮಾಡಿಕೊಡಬೇಕೆನ್ನುವವರು ಎರಡು ಬಹು ಮುಖ್ಯ ಅಂಶಗಳನ್ನು ಗಮನಿಸಬೇಕು :

ಮೊದಲನೆಯದು ಬೌದ್ಧಿಕ ಅರಿವು. ಅರಿವು ಕೊಟ್ಟ ಶಕ್ತಿ ಶೋಷಿತ ವರ್ಗವನ್ನು ಮತ್ತೆ ಅದೇ ಸ್ಥಿತಿಗೆ ಇಳಿಯಲು ಬಿಡಲಾರದು (ಬಿಡಲೂಬಾರದು). ಅಂಥಲ್ಲಿ ನಡೆಯ ಬಹುದಾದದ್ದು ಸಂಘರ್ಷವೇ ಹೊರತು ಸಾಮರಸ್ಯವಲ್ಲ. ಈಗ ಧರ್ಮ ಆಧಾರಿತ ಸಂಘರ್ಷ, ಮುಂದೆ ಜಾತಿ ಆಧಾರಿತ ಸಂಘರ್ಷ, ಅಷ್ಟೇ ವ್ಯತ್ಯಾಸ. ಅದರ ಮೊದಲ ಹಂತ ಈಗಾಗಲೇ ಪ್ರಾರಂಭವಾಗಿದೆ.

ಎರಡನೆಯ ಅಂಶವೆಂದರೆ ಮಾನವೀಯತೆಯ ಬಗೆಗಿನ ಪ್ರಜ್ಞೆ ನಮ್ಮಲ್ಲಿ ಈಗ ಯಾವ ರೂಪದಲ್ಲಿ ಪ್ರಚಲಿತದಲ್ಲಿದೆ ಎಂಬುದು. ಅದು ಶೋಷಣಾ ಮುಕ್ತತೆಯ ಹಾದಿಯಲ್ಲಿ ನಮ್ಮನ್ನು ಮುಂದೆ ನಡೆಸುತ್ತಿದೆಯೇ ಹೊರತು ಹಿಂದಕ್ಕಲ್ಲ. ಆದುದರಿಂದ ಶೋಷಣೆಯನ್ನು ಹಿಂದಕ್ಕೊಯ್ಯಲು ಯತ್ನಿಸುತ್ತಿರುವುದು ಸಮರ್ಥನೀಯ ವೇನಲ್ಲ. ನಮ್ಮ ಕಾಲಚಕ್ರದ ಹಾದಿಯಲ್ಲಿ ಒಂದು ಕುರಿ ಮರಿಗಾಗಿ ಜೀವ ಕೊಡಲು ಸಿದ್ಧನಾದ ಗೌತಮ ಬುದ್ಧನೆಂಬ ವ್ಯಕ್ತಿ ಇದ್ದ. ಸತಿ ಪದ್ಧತಿಯನ್ನು ವಿರೋಧಿಸಿ ನಿಂತ ರಾಜಾ ರಾಮ್‌ಮೋಹನ್‌ರಾಯ್, ಅಸ್ಪೃಶ್ಯತೆಗೆ ಎದುರೇಟು ಕೊಟ್ಟ ಗಾಂಧಿ, ಅಸ್ಪೃಶ್ಯತೆಯನ್ನು ಮೆಟ್ಟಿನಿಂತ ಅಂಬೇಡ್ಕರ್, ಮಹಾತ್ಮಾ ಫುಲೆ ಮುಂತಾದವರೂ ಇದ್ದರು. ಅವರೆಲ್ಲರ ಶಕ್ತಿಯನ್ನು ಗೌಣವಾಗಿಸಲಾಗದು ಎಂಬುದಕ್ಕೆ ಎರಡು ಉದಾಹರಣೆಗಳನ್ನು ಕೊಡಬಹುದು. ಮೊದಲನೆಯ ದಾಗಿ ಗಾಂಧಿ. ಭಾವನಾತ್ಮಕವಾಗಿ ಇಂದು ಗಾಂಧಿ ವಿರೋಧಿಯಾಗಿರುವವರಿಗೂ ಸಾರ್ವಜನಿಕವಾಗಿ ತಾವು ಗಾಂಧಿ ಸಮರ್ಥಕರಂತೆ ನಟಿಸಬೇಕಾಗಿದೆ ! ಗಾಂಧಿ ಶಕ್ತಿಗೆ ವಿರೋಧ ವ್ಯಕ್ತಪಡಿಸುವಾಗಲೂ ಅಷ್ಟೇ ಯೋಗ್ಯವಾದ ಭಾಷೆಯ ಪ್ರಯೋಗ ಮಾಡಬೇಕಾಗುತ್ತದೆ. ಅದು ಅವರ ಶಕ್ತಿಯನ್ನು ತೋರ್ಪಡಿಸುತ್ತದೆ. ಎರಡನೆಯ ಶಕ್ತಿ ಗೌತಮ ಬುದ್ಧನದು. ಬೌದ್ಧ ಧರ್ಮವನ್ನು ಭಾಗಶಃ ಭಾರತದಿಂದ ಕಾಲ್ತೆಗೆಸಿದರೂ ಬುದ್ಧನ ಶಕ್ತಿಯನ್ನು ಎದುರಿಸಲಾಗದ ಹಿಂದೂ ಧರ್ಮ ಅವನನ್ನು ತನ್ನ ಒಂಬತ್ತನೆಯ ಅವತಾರವೆಂದು ಸಾರಬೇಕಾಗಿ ಬಂತು !

ಚರಿತ್ರೆಯಲ್ಲಿ ಕೂಡ ಹಿಂದೂ ಧರ್ಮ ನಮ್ಮ ನಿಲು ವನ್ನು ಅನುಸರಿಸಿಕೊಂಡು ಬಂದಿದೆ. ಆ ನಿಲುವು ಬೇಡರ ಜಾತಿಯ ಪರಾಶರ ಮತ್ತು ಬೆಸ್ತರ ಮಗಳಾದ ಮತ್ಸ್ಯ ಗಂಧಿಯರಿಗೆ ಜನಿಸಿದ ವ್ಯಾಸನನ್ನು ವೇದವ್ಯಾಸನೆಂದು ಗೌರವಿಸುವಂತೆ ಮಾಡಿತು. ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಲಾಗಿರುವಂತೆ, ತನ್ನ ತಂದೆ ಯಾರೆಂದು ತಿಳಿಯದ ದಾಸೀಪುತ್ರ ಜಾಬಾಲಿ ಬ್ರಹ್ಮಜ್ಞಾನಿ ಎನಿಸಿದ. ಜಾತಿ ಪದ್ಧತಿಯನ್ನು ಹುಟ್ಟುಹಾಕಿ ನಾನಾ ವಿಧವಾಗಿ ಶೋಷಣೆ ಗೊಳಪಡಿಸಿ ಕೆಳ ಜಾತಿಗಳಿಗೆ ಹಕ್ಕುಗಳನ್ನು ನಿರಾಕರಿಸ ಲಾಯಿತಾದರೂ ಮೇಲು ವರ್ಗದ ಪುರುಷ ಕೆಳವರ್ಗದ ಸ್ತ್ರೀಯನ್ನು ವಿವಾಹವಾಗುವುದಕ್ಕೆ ಸಮ್ಮತಿಸುವಲ್ಲಿ ಧರ್ಮ ಜಾತಿಯ ಕಟ್ಟುನಿಟ್ಟಿನ ಆಚರಣೆಗೆ ಒಂದಷ್ಟು ಸಡಿಲಿಕೆ ತೋರಿಸಿತು. ಅದಕ್ಕೆ ಕೆಳವರ್ಗದ ಮಹಿಳೆ ಮೇಲು ವರ್ಗದ ಪುರುಷನನ್ನು ವಿವಾಹವಾಗುವ ಮೂಲಕ ಪುರುಷನ ಜಾತಿಗೆ ಸೇರಿಹೋಗುತ್ತಾಳೆ ಎಂಬ ಸಮರ್ಥನೆ ಕೊಡಲಾಯಿತು. ಆದರೆ ಕೆಳವರ್ಗದ ಪುರುಷನಾದ ಯಯಾತಿ ಮೇಲು ವರ್ಗದ ಮಹಿಳೆಯಾದ ದೇವಯಾನಿಯನ್ನು ವಿವಾಹ ವಾಗುವ ಚಿತ್ರಣ ತರುವಲ್ಲಿ ಸಂದಿಗ್ಧವೇರ್ಪಟ್ಟು ದೇವಯಾನಿಗೆ ಕಚನ ಶಾಪವಿದ್ದುದರಿಂದ ಆಕೆ ತನ್ನ ವರ್ಗದ ಪುರುಷನನ್ನು ವಿವಾಹವಾಗುವುದು ಸಾಧ್ಯವಿರಲಿಲ್ಲ ಎಂಬ ಕಲ್ಪನೆಯನ್ನು ನಿರೂಪಿಸಿರಬೇಕು.

ಬುದ್ಧನನ್ನು ತನ್ನೊಳಗೆ ಸೇರಿಸಿಕೊಂಡ ಹಿಂದೂ ಧರ್ಮ ಜೈನರ ತತ್ವಗಳನ್ನೂ ಬಿಡಲಿಲ್ಲ. ಒಂದು ಕಾಲದಲ್ಲಿ ಮಾಂಸಾಹಾರವನ್ನು, ಅದರಲ್ಲೂ ಮುಖ್ಯವಾಗಿ ಗೋಮಾಂಸವನ್ನು ಸ್ವೀಕರಿಸುತ್ತಿದ್ದ ವೈದಿಕರು (ಗೌತಮ

## ಬೆಳಕು ನುಂಗಿದ ಇರುಳು



ಮಲ್ಲಿಗೆಯ ಮಕರಂದ ಅಂದಚಂದಕೆ ಹಿಗ್ಗಿ
ದುಂಬಿ ದಂಡೀಗ ಹಿಂಬಾಲಿಸದಿಲ್ಲಿ
ಸುರಳಿ ಕನಸು ತುಂಬಿ ಪ್ರತೀಕ್ಷೆಯಲಿ ಅರಳಿದ
ಗಳಿಗೆ ಬರಿ ಶೂನ್ಯ ಹೂವಿನ ಬಾಳಿಗೆ.

ತನ್ನ ಕೆಚ್ಚಲಲ್ಲಿ ನೊರೆನೊರೆ ಹಾಲು ತುಂಬಿ ಹಸು
ತವಕದಿ ಕಾದಿದೆ ಕಂದ ಬರುವುದೆಂದು
ತಾಯಿ ನೆನಪಿರದ ಕರುವಿಗೋ ಬೇರೆ ಬೇಡಿಕೆ
ಹಾಲು ಸವಿಯ ಮರೆತು ದೂರ ಓಡಿದೆ.

ಒಂದೇ ನಾಭಿ ಚೀಲದಿಂದುರುಳಿದ ಮಕ್ಕಳಿವು
ಹೊಕ್ಕುಳ, ರಕುತ ವಾಹಿನಿ ರೂಪೊಂದೆ
ಮನಸು ನಾಗರ, ವಿಷ ಸಾಗರ, ನೆತ್ತಿ ಬರಬರ
ಭಿನ್ನ, ಭಿನ್ನ ಬಣವಂಥ ಹೈಕಳಿವು ?

ನೆಲದಾಳಕಿಳಿದಂತೆ ಜೀವ ಕಾರುಣ್ಯ ರಸ
ರಸ ಹೀರದೇ ಮರಕೇಕೆ ಬೇಸರ
ಹಸಿರುಸಿರಿನ ಜೀವ, ಧನ್ಯ ಭಾವ ಮರೆತು ಮರ
ಕೊರಡು ಕೊನರಿಸದೆ ಬಕ ಬಕ ಬಾಡಿದೆ.

ಸೂರ್ಯಚಂದ್ರರೆ ಕಾಣೆಯಾಗುವ ಹೊತ್ತು
ನೆಲಮುಗಿಲಾಗಪತ್ತು ; ಎತ್ತ ಪಯಣ
ಬೆಳಕು ನುಂಗಿದ ಇರುಳಿನದೆ ದೌಲತ್ತು , ಕಣ್ಣೀರ
ಕರೆಗೆ ಯಾರಿಲ್ಲ ; ಎಲ್ಲ ಬಣ ಬಣ !

ಲಕ್ಷ್ಮಣ ಗಂಟಿ
ಕವಿತಾ ಪ್ರಕಾಶನ, ನಟರಾಜ ಬಡಾವಣೆ
ಹರಪನಹಳ್ಳಿ - ೫೮೩ ೧೩೧ ಜಿಲ್ಲೆ : ದಾವಣಗೆರೆ

ಧರ್ಮ ಸೂತ್ರ ಆಧಾರದಿಂದ) ಕಾಲಾನಂತರ ಸಸ್ಯಾಹಾರಿಗಳಾಗಿ ಪರಿವರ್ತನೆ ಹೊಂದಿರುವಲ್ಲಿ ಜೈನಧರ್ಮದ ಪ್ರಭಾವ ಕಾಣಸುತ್ತದೆ. ಹಿಂದೂ ದೇವರಾದ ಶಿವನಿಗೆ ದಿಗಂಬರತೆಯನ್ನು ಆರೋಪಿಸಿರುವಲ್ಲಿಯೂ ಜೈನ ಧರ್ಮದ ಪ್ರಭಾವ ಕಾಣಸುತ್ತದೆ. ಆದರೆ ನಾಗರಿಕತೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ದಿಗಂಬರತೆ ಸಾರ್ವತ್ರಿಕವಾಗಲಾರದಾಗಿ ಆ ಕಲ್ಪನೆಗೆ ವಿಶೇಷ ಮಹತ್ವ ಬಂದಂತಿಲ್ಲ.

ಇಷ್ಟೆಲ್ಲ ನಮ್ಯತೆಯನ್ನು ತೋರಿಸಿದ ಹಿಂದೂ ಧರ್ಮ ದುರ್ಬಲರ ಮೇಲೆ ಕ್ರೂರ ವ್ಯಾಘ್ರದಂತೆ ಎರಗುತ್ತದೆ! ಬ್ರಾಹ್ಮಣ ರಾಜನು ಕುಳಿತುಕೊಳ್ಳುವಲ್ಲಿ ಕುಳಿತರೆ ಪೃಷ್ಠವನ್ನು ಕತ್ತರಿಸಬೇಕು, ಶೂದ್ರರು-ಅಸ್ಪೃಶ್ಯರು ಮಂತ್ರಘೋಷ ಕೇಳಿದ್ದೇ ಆದಲ್ಲಿ ಕಿವಿಗೆ ಕಾದ ಸೀಸ ಸುರಿಯಬೇಕು, ಮಂತ್ರಪಠನ ಮಾಡಿದ ಶೂದ್ರನ ಕೊರಳು ಕುಯ್ಯಬೇಕು, ಶೂದ್ರರು-ಮಹಿಳೆಯರು ಎಲ್ಲ ಪಾಪಯೋನಿಗಳು, ಅವರಿಗೆ ವೇದಾಧ್ಯಯನ ಸಲ್ಲ ಎನ್ನುತ್ತದೆ. (ಮನುಧರ್ಮ ಶಾಸ್ತ್ರ, ಗೌತಮ ಧರ್ಮ ಸೂತ್ರ, ಭಗವದ್ಗೀತೆ ಹಾಗೂ ಅಥರ್ವ ವೇದ ಆಧಾರಿತ).

ಇಲ್ಲಿರುವುದೇ ಹಿಂದೂ ಧರ್ಮದ ಸ್ಥಿತಿಸ್ಥಾಪಕ ಗುಣ. ಅದು ಅದರ ದೌರ್ಬಲ್ಯವೂ ಹೌದು, ಶಕ್ತಿಯೂ ಹೌದು. ಒಂದು ಕಡೆ ದೇವತೆಗಳನ್ನು ಆರಾಧಿಸುವ ಧರ್ಮ ಇನ್ನೊಂದು ಕಡೆ ಅವರನ್ನು ಮಾನವ ಸ್ವಭಾವಗಳ ಸಹಜ ಪ್ರತಿನಿಧಿಗಳಾಗಿಸುತ್ತದೆ. ಒಂದು ಕಡೆ ತನ್ನ ಕಟ್ಟುಪಾಡು-ನಿಷೇಧಗಳನ್ನು ಅತ್ಯಂತ ಕ್ರೂರವಾಗಿ ಹೇರುವ ಧರ್ಮ ಇನ್ನೊಂದು ಕಡೆ ತನ್ನೆಲ್ಲ ಕಟ್ಟುಪಾಡುಗಳನ್ನು ಮೀರಿ ಬೆಳೆಯಬಲ್ಲ ಶಕ್ತಿ ಸಿಕ್ಕಾಗ ತೀರಾ ನಮ್ಯವಾಗಿಬಿಡುತ್ತದೆ. ಈ ನಡವಳಿಕೆ ಧರ್ಮದ ದೌರ್ಬಲ್ಯ ಹೇಗೆಂದರೆ ಅದು ಚರಿತ್ರೆಯ ಉದ್ದಕ್ಕೂ ತನ್ನ ಮೂಲಸ್ವರೂಪವನ್ನು ಕಳಚಿಕೊಳ್ಳುತ್ತಾ ಬರಬೇಕಾಯಿತು. ಶಕ್ತಿ ಹೇಗೆಂದರೆ ಈ ರೀತಿಯ ನಮ್ಯತೆಯಿಂದಾಗಿ ಅದು ಹೊಸ ಹೊಸ ಸ್ವರೂಪಗಳೊಂದಿಗೆ ಉಳಿದುಕೊಂಡುಬಂದಿತು.

ಈಗಿನ ವಾದ ಪ್ರವರ್ತಕರಲ್ಲಿ ಕಾಣಸುತ್ತಿರುವುದೂ ಇದೇ ದ್ವಂದ್ವ ನಿಲುವು, ಸ್ಥಿತಿಸ್ಥಾಪಕ ಗುಣ. ಇಂಥವರು ಮಾತಿನಲ್ಲಿ ತಮ್ಮದು ಶ್ರೇಷ್ಠ ಸಂಸ್ಕೃತಿ ಎಂದೆನ್ನುತ್ತಿರುವಾಗಲೇ ಪಾಶ್ಚಾತ್ಯ ಪ್ರಣೀತ ಜಾಗತೀಕರಣಕ್ಕೆ ದೇಶವನ್ನು ಅಡವಿಡಲು ಹಿಂಜರಿಯುತ್ತಿಲ್ಲ! ಏಕೆಂದರೆ ಶಕ್ತಿಯೊಂದಿಗೆ ರಾಜಿ ಮಾಡಿಕೊಳ್ಳುವುದು ಹಿಂದೂ ಧರ್ಮದ ಸಹಜ ಗುಣ. ಬೇರೆ ಧರ್ಮಗಳದ್ದೂ ಹೌದು. ನಾವು ಬದಲಾಗಿರುವ ಕಾಲಮಾನದಲ್ಲಿದ್ದೇವೆ. ಅಂಥಲ್ಲಿ ಹಿಂದೂ ಧರ್ಮಕ್ಕೆ ತನ್ನ ಪಾರಂಪರಿಕ ವಿತಂಡವಾದಗಳ ಮೂಲಕ ಒಳಗೊಳ್ಳುವ ಕ್ರಿಯೆ ಸಾಧ್ಯವಾಗದು. ಅಂಥ ಪ್ರಯತ್ನಕ್ಕೆ ವೈಜ್ಞಾನಿಕ ಚಿಂತನೆ ಪ್ರತಿಸ್ಪರ್ಧಿಯಾಗಿ ನಿಲ್ಲುತ್ತದೆ. (ವೈಜ್ಞಾನಿಕ ಚಿಂತನೆಗೆ ಉತ್ತರಿಸಲಾಗದ ಅಸಹಾಯಕತೆ, ಆಕ್ರೋಶವಾಗಿ ಕಾಣಿಸಿಕೊಂಡು 'ಬುದ್ಧಿಜೀವಿಗಳನ್ನು ಓಡಿಸಿ' ಎಂಬ ಹೇಳಿಕೆಗೆ ಕಾರಣವಾಗುತ್ತದೆಂಬುದು ಬೇರೆ ಮಾತು). ಹೀಗಿರುವಾಗ ವಾದಗಳನ್ನು ಬದಿಗಿಟ್ಟು ಭಾವನಾತ್ಮಕವಾಗಿ ಎಲ್ಲರೊಂದಿಗೆ ಒಳಗೊಳ್ಳುವ ಮೂಲಕ ಹಿಂದೂ ಧರ್ಮ ತನ್ನ ಸಹಜ ಸ್ವಭಾವವನ್ನು ಭಿನ್ನ ರೀತಿಯಲ್ಲಿ ವ್ಯಕ್ತಪಡಿಸಬೇಕಾಗಿದೆ. ಅದು ಮಾನವೀಯತೆಯೂ ಹೌದು.

ಎರಡನೆಯದಾಗಿ ಶಕ್ತಿಯೊಂದಿಗೆ ರಾಜಿ ಮಾಡಿಕೊಳ್ಳುವ ತನ್ನ ಸಹಜ ಸ್ವಭಾವವನ್ನು ಪರಾಂಭರಿಸಬೇಕು. ಉದಾಹರಣೆಗೆ, ಕ್ರೈಸ್ತ ಸಮುದಾಯದ ಶಕ್ತಿ: ದೈಹಿಕವಾಗಿ ಈ ಸಮುದಾಯಗಳವರ ಶಕ್ತಿ ಬಹುಸಂಖ್ಯಾತರ ಶಕ್ತಿಗಿಂತ ಕಡಿಮೆ ಇದೆ. ಆದ್ದರಿಂದ ಅನ್ಯದೇಶೀಯರು ತಮ್ಮ ಧರ್ಮೀಯರ ರಕ್ಷಣೆಗಾಗಿ ಈ ದೇಶದೊಳಕ್ಕೆ ಪ್ರವೇಶಿಸುವ ಅಪಾಯವೂ ಇದೆ.

ಇದನ್ನೆಲ್ಲ ಅರ್ಥಮಾಡಿಕೊಳ್ಳಲಾಗದವರು ''ಅಯೋಧ್ಯೆಯ ರಾಮ ಮಂದಿರ ಸಾವಿರಾರು ವರ್ಷಗಳಿಂದ ಹಿಂದೂಗಳ ಮೇಲೆ ನಡೆದ ದಬ್ಬಾಳಿಕೆಗೆ ಉತ್ತರ ಎನ್ನುತ್ತಾರೆ.'' ಸ್ವತಃ ಮುಸಲ್ಮಾನರೇ ಮುಂದೆ ಬಂದು ''ನಿಮ್ಮ ಅಯೋಧ್ಯೆ ನಮಗೆ ಬೇಕಾಗಿಲ್ಲ. ನೀವೇ ಇಟ್ಟುಕೊಳ್ಳಿ. ಈ ಒಂದು ಕಾರಣಕ್ಕಾಗಿ ನಮ್ಮ ನಡುವೆ ವಿರಸ ಬೇಡ; ನಾವೂ ಕೂಡ ಈ ಮಣ್ಣಿನ ಮಕ್ಕಳು, ನಮಗೆಲ್ಲರಿಗೂ ಒಂದೇ ನಾಗರಿಕ ಸಂಹಿತೆ ಇರಲಿ, ನಮ್ಮ ಸಾಂಪ್ರದಾಯಿಕ ಕುಂದು ಕೊರತೆಗಳನ್ನು ಹೋಗಲಾಡಿಸಿಕೊಳ್ಳುತ್ತೇವೆ. ಅದಕ್ಕೆ ಸ್ವಲ್ಪ ನೆರವು ನೀಡಿ'' ಎನ್ನುವಂಥ ಪರಿಸ್ಥಿತಿಯನ್ನೇಕೆ ನಿರ್ಮಾಣ ಮಾಡಬಾರದು ?

ಅದಕ್ಕೆ ಕಷ್ಟವಿದೆ. ಎಲ್ಲಕ್ಕೂ ಮೊದಲು ಮನುಷ್ಯನನ್ನು ಎಲ್ಲ ಅಪರಿಪೂರ್ಣತೆಗಳೊಂದಿಗೆ ಪ್ರೀತಿಸುವ ಗುಣ ಬೆಳೆಸಿಕೊಳ್ಳಬೇಕಾಗುತ್ತದೆ. (ಅಪರಿಪೂರ್ಣತೆ ತನ್ನಲ್ಲೂ ಇರುವಂಥದ್ದೇ). ಆದರೆ ವಾದ ಪ್ರವರ್ತಕರು ತಮ್ಮನ್ನೇ ತಾವು ಪ್ರೀತಿಸಿಕೊಳ್ಳಲಾರರು. ಅಲ್ಲಿರುವುದು ಕೇವಲ ಅಹಂಕಾರ. ಅದು ಪ್ರೀತಿಯ ವಿಕೃತ ರೂಪ. ಅಲ್ಪಸಂಖ್ಯಾತರಿಗೆ ದೈಹಿಕ ಶಕ್ತಿಯ ಕೊರತೆ ಇರುವಾಗ ಹೆದರಿಕೆ, ಅಸಹಾಯಕತೆ, ಅನುಮಾನ, ಆಕ್ರೋಶಗಳು ಸಹಜವಲ್ಲವೇ ? ಅದನ್ನು ಪರಿಹರಿಸಬೇಕಾದವರು ಬಹುಸಂಖ್ಯಾತರಲ್ಲವೇ ? ರಾಜ್ಯಾಂಗದ ವಿಧಿಗಳೇನೇ ಇದ್ದರೂ ಅದರ ಕಾರ್ಯರೂಪಿ ಚಲಾವಣೆ ಹೇಗಿದೆಯೆಂಬುದು ಮುಖ್ಯವಾಗುತ್ತದೆ. (ರಾಜ್ಯಾಂಗ ತಾನೇ ಬಂದು ಏನನ್ನೂ ಮಾಡಲಾರದು). ಹೀಗಿರುವಾಗ ಅಲ್ಪಸಂಖ್ಯಾತರ ಜೀವಕ್ಕೆ, ಧಾರ್ಮಿಕ ಆಚರಣೆಗೆ, ಆಸ್ತಿಪಾಸ್ತಿಗೆ ಯಾವ ತೊಂದರೆಯೂ ಉಂಟಾಗಲಾರದೆಂಬ ಭರವಸೆ ಕೊಡಬೇಕಾದ ಜವಾಬ್ದಾರಿ ಈ ದೇಶದ ಬಹುಸಂಖ್ಯಾತರಿಗೆ ಇದೆ.

ಏಕರೂಪಿ ನಾಗರಿಕ ಸಂಹಿತೆ ಎನ್ನುವಾಗ ಅಲ್ಪಸಂಖ್ಯಾತರನ್ನು ಬಹುಸಂಖ್ಯಾತರು ಎಷ್ಟರಮಟ್ಟಿಗೆ ತಮ್ಮೊಂದಿಗೆ ಬಾಳಿಸಿದ್ದಾರೆ ಎಂಬುದು ಮುಖ್ಯವಾಗುತ್ತದೆ. ಈ ಮಾತು ಹೇಳಿದರೆ 'ಅವರೇ ಬರುತ್ತಿಲ್ಲ' ಎನ್ನಬಹುದು. ಅವರು ಇಂದಿನ ಸ್ಥಿತಿಯಲ್ಲಿ ಖಂಡಿತವಾಗಿಯೂ ಬರಲಾರರು. ವಿಶ್ವಾಸವೇ ಇಲ್ಲದಲ್ಲಿಗೆ ಬರುವುದಾದರೂ ಹೇಗೆ ? ಹಾಗೆಂದು ಅಲ್ಪಸಂಖ್ಯಾತರು ಯಾರೊಂದಿಗೂ ಸೇರಲಾರರು, ಅದವರ ಗುಣ ಎನ್ನಬೇಕಾಗಿಲ್ಲ. ಪ್ರೀತಿ-ಸ್ನೇಹ, ಸಂಗ ಜೀವನ ಎಲ್ಲರ ಬಯಕೆಯೂ ಹೌದು. ಅದರಿಂದ ಅಲ್ಪಸಂಖ್ಯಾತರು ಹೊರಗುಳಿಯಲಾರರು. ಇಂಥ ಸ್ಥಿತಿಯಲ್ಲಿ ಮುಸಲ್ಮಾನರು ಸುಧಾರಣೆಗೆ ಒಳಪಡುತ್ತಿಲ್ಲವೆನ್ನುವವರು ಆತ್ಮವಿಮರ್ಶೆ ನಡೆಸಿಕೊಂಡರೆ ಚೆನ್ನಾಗಿರುತ್ತಿತ್ತು. ಹಿಂದುತ್ವವಾದದ ಹಿಂದೆ ಏನೆಲ್ಲ ಪ್ರತಿಗಾಮಿ ನಿಲುವುಗಳಿವೆ ಎಂದು ಆಗ ಅರ್ಥವಾದೀತು.

ಇಷ್ಟೆಲ್ಲಾ ಇದ್ದರೂ ನಮ್ಮ ನಿಜವಾದ ಶ್ರೇಷ್ಠತೆ ಏನು ಎಂದರೆ ಅದಿರುವುದು, ವೈದಿಕ ಸಂಸ್ಕೃತಿಯೂ ಸೇರಿದಂತೆ ಹಲವಾರು ಭಿನ್ನತೆಗಳೊಂದಿಗೆ, ಎಷ್ಟೇ ಕಿತ್ತಾಡಿಕೊಂಡರೂ ವಿಶ್ವದ ಒಂದು ದೊಡ್ಡ ಒಂದು ಜನಾಂಗೀಯ ಪ್ರಜಾಸತ್ತಾತ್ಮಕ ರಾಷ್ಟ್ರವಾಗಿ ಬದುಕಿರುವಲ್ಲಿ. ಆ ಘನತೆ ನಮ್ಮಿಂದ ಹೊರಟು ಹೋದರೆ ಯಾವ ಶ್ರೇಷ್ಠತೆಯೂ ಉಳಿಯಲಾರದು. ಆದ ಕಾರಣ ಈಗಿನ ಕಿತ್ತಾಟಗಳನ್ನು ಕುಗ್ಗಿಸುವತ್ತ ಗಮನಹರಿಸಬೇಕೇ ಹೊರತು ಹಿಗ್ಗಿಸುವತ್ತ ಅಲ್ಲ. ನಮ್ಮ ಶ್ರೇಷ್ಠತೆಗೆ ನಿಜವಾದ ಅರ್ಥ ತುಂಬಿಕೊಳ್ಳಬೇಕಾದರೆ ಆ ಕಾರ್ಯ ನಡೆಯಬೇಕಾಗಿದೆ. ಆದರೆ ಈಗಿನ ಸ್ಥಿತಿಯನ್ನು ಗಮನಿಸಿದರೆ ಈ ದೇಶದ ಹಿಂದೂ-ಮುಸ್ಲಿಂ-ಕ್ರೈಸ್ತ ಮುಂತಾದ ಧರ್ಮೀಯರು 'ಧರ್ಮ'ದ ಮಕ್ಕಳಾಗದೆ ಈ ದೇಶದ ಮಣ್ಣಿನ ಮಕ್ಕಳಾಗಿ ಬದುಕಲಾರರೇನೋ ಎನಿಸುತ್ತದೆ.

**ಅರವಿಂದ ಚೊಕ್ಕಾಡಿ**
'ಕಮಲದೀಪ' ತೆಳ್ಳಾರು ಕ್ರಾಸ್ ರಸ್ತೆ, ಕಾರ್ಕಳ - ೫೭೪೧೦೪

ಚಿತ್ರ ಸುದ್ದಿ



ಸೆಪ್ಟಂಬರ್ ೨೧ರಂದು ಚಿಕ್ಕಮಗಳೂರಿನಲ್ಲಿ ನವಕರ್ನಾಟಕ ಸಾಹಿತ್ಯ ಸಂಪದ ಮಾಲಿಕೆಯ ಎರಡನೇ ಕಂತಿನ ಹನ್ನೆರಡು ಪುಸ್ತಕಗಳ ಬಿಡುಗಡೆ ಸಮಾರಂಭ ನಡೆಯಿತು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ|| ಗುರುಲಿಂಗ ಕಾಪಸೆ ಪುಸ್ತಕ ಬಿಡುಗಡೆ ಮಾಡಿದರು. ಪೂರ್ಣಚಂದ್ರ ತೇಜಸ್ವಿ ಅಧ್ಯಕ್ಷತೆ ವಹಿಸಿದ್ದರು. ನವಕರ್ನಾಟಕ ಪ್ರಕಾಶನ ಮತ್ತು ಚಿಕ್ಕಮಗಳೂರಿನ ಸಾಹಿತ್ಯ ಅಭಿಮಾನಿಗಳ ಒಕ್ಕೂಟ ಏರ್ಪಾಟು ಮಾಡಿದ್ದ ಸಮಾರಂಭದಲ್ಲಿ ಮಾಲಿಕೆಯ ಲೇಖಕರು, ಸಂಪಾದಕರು ಹಾಗೂ ಚಿಕ್ಕಮಗಳೂರಿನ ಸಾಹಿತ್ಯಾಸಕ್ತರು ಬಹು ಸಂಖ್ಯೆಯಲ್ಲಿ ಭಾಗವಹಿಸಿದ್ದರು.



# ಗರುಡಗಂಬದ ಸುತ್ತ

**ಬೆ**ಳಿಗ್ಗೆ ನಾನು ಬಂದಾಗ ಇದ್ದ ಹತ್ತು ಫೈಲುಗಳಲ್ಲಿ ಒಂಬತ್ತನ್ನು ನೋಡಿ ಮುಗಿಸುವಷ್ಟರಲ್ಲಿ ಮೂರು ಗಂಟೆ ಯಾಗಿ ಹೋಗಿತ್ತು. ಕೊನೆಯ ಫೈಲನ್ನು ಕೈಗೆತ್ತಿಕೊಳ್ಳು ವಷ್ಟರಲ್ಲಿ ''ನಿಮಗೆ ಟೆಲಿಗ್ರಾಂ ಬಂದೈತೆ'' ಎಂದು ರಾಮಪ್ಪ ಬಂದು ಹೇಳಿದ. ಇದು ಯಾವ ಸುಖಕ್ಕೊ. ಊರಲ್ಲಿ ಅಜ್ಜಿ ಏನಾದ್ರೂ ಗೊಟಕ್ ಅಂದಳೋ ಏನೊ ? ಆಗಲೆ ಅವಳಿಗೆ ತೊಂಬತ್ತೈದು ಆಯ್ತು. ಇನ್ನು ಅವಳು ಸತ್ತರೆ ಅಪ್ಪ, 'ಅವ್ವ ಸತ್ತಳು' ಅಂತ ಕುಡಿದು ಬೀಳ್ತಾನೆ. ಇಲ್ಲಿ ನಾನು ಅವಳ ತಿಥಿಗೆ ಅಂತ ಇನ್ನಷ್ಟು ಸಾಲ ಮಾಡ್ಬೇಕು. ಹೀಗೆ ಏನೇನೋ ಯೋಚನೆ ಮಾಡ್ತಾ ಟೆಲಿಗ್ರಾಂ ತೆಗೆದು ನೋಡಿದೆ. ಸದ್ಯ ನಾನಂದ್ಕೊಂಡಂಗೆ ಏನು ಇಲ್ಲದಿದ್ರು ಇವತ್ತೆ ಊರಿಗೆ ಹೋಗ್ಬೇಕಾಗಿತ್ತು. 'ನಾಳೆನೆ ಪಂಚಾಯ್ತಿ ಇಟ್ಕೊಂಡಿದಾರೆ. ನೀನು ಖಂಡಿತ ಬರಬೇಕು' ಅಂತ ಚಂದ್ರು ಕಳಿಸಿದ್ದ. ಇವತ್ತು ಗುರುವಾರ. ನಾಳೆ ಪಂಚಾಯ್ತಿ ಅಂದ್ರೆ ಶನಿವಾರ ಮತ್ತೆ ಡ್ಯೂಟಿಗೆ ಬರಕಾಗುತ್ತೊ ಇಲ್ವೊ ? ಎರಡು ದಿವಸ ರಜ ಹಾಕೂದೆ ಒಳ್ಳೆದು ಅಂದ್ಕೊಂಡು ಫೈಲ್ ನೋಡತೊಡಗಿದೆ.

ಗಡಿಯಾರ ನಾಲ್ಕು ಹೊಡಿಯೋದುಕ್ಕು, ನನ್ನ ಕೆಲಸ ಮುಗಿಯೊದುಕ್ಕು ಸರಿಯಾಯಿತು. ಫೈಲ್ ಎಲ್ಲವನ್ನು ಜೋಡಿಸ್ಕೊಂಡು ಮ್ಯಾನೇಜರನ ರೂಮಿಗೆ ನುಗ್ಗಿದೆ. ''ಸಾರ್ ಎಲ್ಲ ಆಯ್ತು, ಎರಡು ಸಾರಿ ಚೆಕ್ ಮಾಡಿದೀನಿ'' ಎಂದು ಒಂದು ಸುಳ್ಳನ್ನು ಸೇರಿಸಿ ಹೇಳಿ, ಆತನ ಟೇಬಲ್ ಮೇಲೆ ಇಟ್ಟೆ. ಫೈಲ್ ಇಟ್ಟು ನಾನು ಹೋಗಬಹುದು ಎಂದುಕೊಂಡಿದ್ದ ಮ್ಯಾನೇಜರ್ ನಾನು ಅಲ್ಲೆ ನಿಂತದ್ದನ್ನು ಕಂಡು 'ಏನು ?' ಅನ್ನುವಂತೆ ನೋಡಿದ. ''ಸಾರ್ ನನಗೆ ನಾಳೆ ನಾಡಿದ್ದು ಎರಡು ದಿನ ರಜ ಬೇಕಾಗಿತ್ತು'' ಅಂದೆ. ನನ್ನ ಕಡೆಗೆ ಕಣ್ಣೆತ್ತಿಯೂ ನೋಡದೆ ''ರಜ ಇದ್ರೆ ತಗೊಳ್ಳಿ, ಇಲ್ಲ ಅಂದ್ರೆ ಆಗೊಲ್ಲ'' ಎಂದ. ''ಆಯ್ತು ಸಾರ್'' ಎಂದು ಕೇಸ್ ವರ್ಕರ್ ಕ್ಯಾಬಿನ್ನಿನ ಕಡೆ ನಡೆದೆ. 'ದೇವ್ರು ಕೊಟ್ರು ಪೂಜಾರಿ ಕೊಡ' ಅನ್ನೊಂಗೆ ಈ ಗರುಡಾಚಾರಿ ಇನ್ನೇನು ಕೊಕ್ಕೆ ಹಾಕ್ತಾನೊ ಅಂದ್ಕೊಂಡೆ, ''ನಾಳೆ ನಾಡಿದ್ದು ಎರಡು ದಿವ್ಸ ರಜ ಬೇಕು ಸಾರ್, ಮ್ಯಾನೇಜರಿಗೆ ಹೇಳಿದ್ದೀನಿ'' ಅಂದೆ. ಈ ಗರುಡಾಚಾರಿಗೆ ಸ್ವಲ್ಪ ಜಾತಿ ಮದ. ತನ್ನ ಜಾತಿಯೊಂದೇ

**ಸತ್ಯನಾರಾಯಣ ಬಿ. ಆರ್.**

ಶ್ರೇಷ್ಠ ಅಂದ್ಕೊಂಡಿದ್ದಾನೆ. ಬೇರೆ ಜಾತಿಯವರನ್ನ ಕಂಡರೆ ಇವನ ಕಣ್ಣು ಯಾವಾಗ್ಲು ಕೆಂಪಗೆ. 'ಕೂತ್ಕೊ' ಅಂತಲು ಹೇಳದೆ ''ನಿಂದು ಒಂದೆ ರಜವಲ್ಲೊ ಇರೋದು'' ಅಂದ. ''ಏನಾದ್ರು ಮಾಡಿ ಸಾರ್'' ಅನ್ನುತ್ತಲೆ ಜೇಬಿನಿಂದ ಹತ್ತರ ಎರಡು ನೋಟುಗಳನ್ನು ಅವನ ಕೈಗೆ ಹಾಕಿದೆ. ''ಅಲ್ಲಯ್ಯ ಮದುವೆ ಇಲ್ಲ ಮುಂಜಿ ಇಲ್ಲ ರಜ ಯಾಕಯ್ಯ ಬೇಕು ನಿನಗೆ'' ಎಂದು ನೋಟುಗಳನ್ನು ಜೇಬಿಗಿಳಿಸಿ ''ಆಯ್ತು ಹೋಗು'' ಅಂದ.

ರೂಮಿಗೆ ಬಂದು ಒಂದು ಜೊತೆ ಬಟ್ಟೆ ಒಂದೆರಡು ಪುಸ್ತಕಗಳನ್ನು ಬ್ಯಾಗಿಗೆ ತುರುಕಿ ಬಸ್‌ಸ್ಟ್ಯಾಂಡಿಗೆ ಹೊರಟೆ. ಬಸ್ ಹತ್ತಿ ಟಿಕೆಟ್ ತಗೊಂಡು ಕುಳಿತುಕೊಂಡವನಿಗೆ ಪಂಚಾಯ್ತಿ ವಿಷಯ ತಲೆಗೆ ಬಂತು. ಅದೊಂದು ಸಮಸ್ಯೆಯೇ ಆಗಿರ್ಲಿಲ್ಲ. ಈ ನನ್ನ ಮಕ್ಕಳು, ಮೇಲ್ಜಾತಿ ಜನ ಅನ್ನಿಸ್ಕೊಂಡವ್ರು ಅದನ್ನೆ ಒಂದು ದೊಡ್ಡ ರಂಪ ಮಾಡ್ಕೊಂಡು ಒದ್ದಾಡ್ತವ್ರೆ. ಅದ್ರ ಮಧ್ಯ ಈ ಚಂದ್ರು ನಮ್ಮ ಸಂಸ್ಕೃತಿ, ನಮ್ಮ ಪರಂಪರೆ ಅಂತ ಒದ್ದಾಡ್ತವ್ನೆ. 'ದನ ತಿನ್ನೊ ಜಾತಿ ಚಂದ್ರನಿಗ್ಯಾಕೊ ದೇವರ ಹುಚ್ಚು' ಅಂತ ಅವನ ಮುಂದೆ ಅಂದ್ರು ಬೇಜಾರು ಮಾಡ್ಕೊಳ್ದೆ ಏನಾದ್ರು ಮಾಡಿ ಆ ಮಾನ್ಯುಮೆಂಟನ್ನು ಉಳುಸ್ಕೊಂಡೆ ತೀರ್ಬೇಕು ಅಂತ ಹಠ ಹಿಡ್ದಿದಾನೆ. ಬಸ್ ಹೊರಟ ಮೇಲೆ ನನಗೆ ಅನ್ನಿಸ್ತು 'ಇನ್ನು ಮೂರು ಗಂಟೆ ಈ ಪಂಚಾಯ್ತಿ ನನ್ನ ತಲೆ ತಿನ್ನುತ್ತೆ' ಅಂತ. ಬಸ್ಸು ಮುಂದುಕ್ಕೋದ ಹಾಗೆ ನನ್ನ ಮನಸ್ಸು ಪಂಚಾಯ್ತಿಯ ಮೂಲದ ಕಡೆಗೆ ಹೊರಳ್ತು.

* * *

ಮರ್ಕುಲಿಯಿಂದ ಹೊರಟು ಆರು ಕಿ.ಮೀ. ಹೆದ್ದಾರಿ ನಲವತ್ತೆಂಟಕ್ಕೆ ಸೇರಬೇಕು ಅಂದ್ರೆ ನಮ್ಮೂರು ಮಾರ್ಗವಾಗಿ ಹೋಗಬೇಕು. ಮರ್ಕುಲಿಯ ಬಳಿ ಒಂದು ಹೆಬ್ಬಂಡೆಯಿದೆ. ಒಂದು ವರ್ಷದ ಕೆಳಗೆ, ಅದಾರೊ ತಮಿಳುನಾಡಿನ ಕರುಪ್ಪಯ್ಯ ಅನ್ನುವವನು ಬಂದು, 'ತಮಿಳುನಾಡಿನ ಯಾವುದೋ ಒಂದು ಊರಿನಲ್ಲಿ ಒಂದು ಆಂಜನೇಯನ ವಿಗ್ರಹ ಮಾಡಿಸಬೇಕೆಂದು ದೈವ ಪ್ರೇರಣೆಯಾಗಿದೆ. ಅದಕ್ಕೆ ಬೇಕಾದ ಒಳ್ಳೆ ಜಾತಿಯ ಕಲ್ಲು ಉತ್ತರ ದಿಕ್ಕಿನಲ್ಲಿ ಇದೆ ಎಂದು ದೇವರೇ ಅಪ್ಪಣೆ ಕೊಡಿಸಿದೆ. ಅದನ್ನು ಹುಡುಕಿಕೊಂಡು ಬಂದಾಗ, ನಿಮ್ಮೂರಿನ ಬಳಿಯಿರುವ ಈ ಬಂಡೆ ಸಿಕ್ಕಿತು. ಹೆಬ್ಬಂಡೆಯದು ಒಳ್ಳೆ ಜಾತಿಯೆಂದು, ಅದು ವಿಗ್ರಹಕ್ಕೆ ಅನುಕೂಲವಾಗಿದೆ ಎಂದು ಶಿಲ್ಪಿಗಳು ಹೇಳಿದ್ದಾರೆ. ಎಂಬತ್ತು ಅಡಿ ಎತ್ತರವಿರುವ ಪಂಚಮುಖಿ ಆಂಜನೇಯನ ವಿಗ್ರಹಕ್ಕೆ ಇಪ್ಪತ್ತು ಅಡಿ ದಪ್ಪ, ಮೂವತ್ತು ಅಡಿ ಅಗಲ ಮತ್ತು ನೂರು ಅಡಿ ಉದ್ದದ ಕಲ್ಲು ಬೇಕಾಗಿದೆ. ಅದನ್ನು ಈ ಬಂಡೆಯಲ್ಲಿ ತಗೆಯಲು ಅನುಮತಿ ಕೊಟ್ಟರೆ ನೀವು ದೈವ ಕಾರ್ಯಕ್ಕೆ ಕೈ ಜೋಡಿಸಿದಂತಾಗುತ್ತದೆ' ಅಂದನಂತೆ. ಊರಿನವರು ಒಪ್ಪಿಕೊಂಡರು. ಒಂದು ವರ್ಷ ಕಾಲ ನೂರಾರು ಬೋವಿಗಳು ಸೇರಿ ಕಲ್ಲಿನ ಬ್ಲಾಕನ್ನು ಸಿದ್ಧಪಡಿಸಿದರು. ಬ್ಲಾಕು ಸಿದ್ಧವಾಗುವವರೆಗೆ ಅದನ್ನು ನೋಡಲು ಯಾರನ್ನೂ ಬಿಡದೆ ನಂತರ 'ಕೇವಲ ಐದು ಜನ ಪುರೋಹಿತರು ಸೇರಿಕೊಂಡು ಪೂಜೆ ಸಲ್ಲಿಸುತ್ತಾ ಈ ಕಲ್ಲನ್ನು ಸಿದ್ಧಪಡಿಸಿದ್ದಾರೆ' ಎಂದು ಸುದ್ದಿ ಹಬ್ಬಿಸಲಾಯಿತು. ಅದನ್ನು ನೋಡಲು ಸುತ್ತಮುತ್ತಲ ಹಳ್ಳಿಗಳಿಂದಲೂ, ದೂರ ದಿಂದಲೂ ಜನ ತಂಡೋಪತಂಡವಾಗಿ ಬರತೊಡಗಿದರು. ಬರುವವರು ಸುಮ್ಮನೆ ಬರದೆ ಹಣ್ಣು ಕಾಯಿ ತಂದರು. ಪೂಜೆ

ಮಾಡಿದರು. ಕಾಣಿಕೆ ಕೊಟ್ಟರು. ಕರುಪ್ಪಯ್ಯ ದುಡ್ಡು ಬಾಚ ತೊಡಗಿದ. ಇದನ್ನು ವಿರೋಧಿಸಿದ ಸುತ್ತಮುತ್ತಲಿನ ಹಳ್ಳಿಗಳ ಕೆಲವು ಯುವಕರು ಹಿರಿಯರಿಂದ 'ದೇವರ ಕೆಲಸಕ್ಕೆ ಕಲ್ಲು ಹಾಕುತ್ತವೆ' ಎಂಬ ಉಗಿಸಿಕೊಳ್ಳಬೇಕಾಯಿತು. ಈ ಸಡಗರಗಳೆಲ್ಲ ನಡೆಯುತ್ತಿರುವಂತೆಯೇ ಅದನ್ನು ತಮಿಳುನಾಡಿಗೆ ಸಾಗಿಸುವ ಸಿದ್ಧತೆಗಳು ಭರದಿಂದ ಸಾಗುತ್ತಿದ್ದವು. ಯಾವುದೋ ಕಂಪೆನಿ ಯವರು ಎಂಬತ್ತು ಅಡಿ ಉದ್ದದ ಟ್ರಕ್ಕನ್ನು ಸಿದ್ಧಮಾಡಿಸಿಕೊಟ್ಟರು. ಅದಕ್ಕೆ ಹೈಡ್ರಾಲಿಕ್ ಟ್ರಾಲಿಯನ್ನು ಜೋಡಿಸಲಾಗಿತ್ತು. ಸಮಸ್ಯೆ ಪ್ರಾರಂಭವಾಗಿದ್ದು ಇಲ್ಲಿಂದ. ಹೈವೇ ನಿಗಮ ಮತ್ತು ಲೋಕೋಪಯೋಗಿ ಇಲಾಖೆಗಳು ಅಷ್ಟೊಂದು ಗಾತ್ರದ ಭಾರೀ ತೂಕದ ಕಲ್ಲನ್ನು ಸಾಗಿಸಲು ಅನುಮತಿ ಕೊಡಲು ನಿರಾಕರಿಸಿದವು. ಸೇತುವೆಗಳೇ ಮುರಿದು ಬೀಳುತ್ತವೆ ಎಂಬ ಭಯ ಅವರಿಗೆ. ಆದರೆ ಈ ಕರುಪ್ಪಯ್ಯ ಸಾಮಾನ್ಯದವನಲ್ಲ. ಕೇಂದ್ರ ಸರ್ಕಾರದ ಮಂತ್ರಿಗಳಿಂದಲೇ ಪ್ರಭಾವ ಬೀರಿ ಅದನ್ನೆಲ್ಲ ಸರಿಪಡಿಸಿಕೊಂಡ. ನಿಜವಾದ ಸಮಸ್ಯೆ ಇದ್ದದ್ದು ಅದನ್ನು ಹೈವೇಗೆ ತರುವುದಾಗಿತ್ತು. ನಮ್ಮೂರಿನ ಮಾರ್ಗವಾಗಿ ತಂದರೆ ಕೇವಲ ಆರು ಕಿಲೋಮೀಟರ್ ಗಳು. ನಮ್ಮೂರಿನ ರಸ್ತೆಯಲ್ಲಿ ಆ ಟ್ರಕ್ ತಿರುವು ತೆಗೆದುಕೊಳ್ಳುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ರಸ್ತೆಯ ಎಡಬದಿಗೆ ಇದ್ದ ಪುಢಾರಿ ಶೇಖರಪ್ಪನ ಮನೆಯೂ ಸೇರಿದಂತೆ ಇನ್ನೂ ಐದಾರು ಮನೆಗಳನ್ನು ಒಡೆಯಬೇಕಾಗಿತ್ತು. ಆ ಮನೆಗಳನ್ನು ಉಳಿಸಲು ಹೋದರೆ ಬಲ ಭಾಗದ ಕೇಶವಭಟ್ಟರ ಮನೆಯೂ ಸೇರಿದಂತೆ ಅಕ್ಕಪಕ್ಕದ ಎರಡು ಮನೆಗಳ ಜೊತೆಗೆ ಭಟ್ಟರ ಮನೆ ಮತ್ತು ರಸ್ತೆಗೆ ಅಂಟಿಕೊಂಡಂತೆ ಇದ್ದ ಗರುಡಗಂಬವನ್ನು ಒಡೆಯಬೇಕಾಗಿತ್ತು. ಉಳಿದ ಇನ್ನೊಂದು ಮಾರ್ಗವೆಂದರೆ, ಕಲ್ಲಳ್ಳಿ ಆನೆಕೆರೆ ಮಾರ್ಗವಾಗಿ ಚನ್ನರಾಯಪಟ್ಟಣದ ಬಳಿ ಹೈವೇ ಸೇರುವುದಾಗಿತ್ತು. ಅದಕ್ಕೆ ಸುಮಾರು ಇಪ್ಪತ್ತೈದು ಕಿಮೀ.ಗಳನ್ನು ಕ್ರಮಿಸಬೇಕಾಗಿತ್ತು. ಆ ರಸ್ತೆಯೂ ಅಂಕು ಡೊಂಕಾಗಿತ್ತಲ್ಲದೆ ಅಗಲವೂ ಆಗಿರಲಿಲ್ಲ. ಅಷ್ಟೊಂದು ದೂರದ ರಸ್ತೆಯನ್ನು ನೇರ ಮಾಡಿಸುವುದಾಗಲಿ, ಅಗಲ ಮಾಡಿಸುವುದಾಗಲಿ ಕರುಪ್ಪಯ್ಯನಿಗೆ ಆಗದ ಕೆಲಸ. ಅದಕ್ಕೆ ಆತ ಕೇವಲ ಆರು ಕಿಮೀ. ದೂರದ ನಮ್ಮೂರಿನ ಮಾರ್ಗವನ್ನು ಆಯ್ದುಕೊಂಡಿದ್ದ. ಊರಿನಲ್ಲಿ ಮನೆಗಳನ್ನು ಒಡೆಯಲು ಶೇಖರಪ್ಪನಾಗಲಿ, ಭಟ್ಟರಾಗಲಿ ಒಪ್ಪಲಿಲ್ಲ. ಬಲಭಾಗದ ಮನೆಗಳನ್ನು ಒಡೆಯುವುದು ಕಡಿಮೆ, ಮತ್ತೆ ಕಡಿಮೆ ಖರ್ಚು ಕೂಡ. ಕರುಪ್ಪಯ್ಯನಿಗೂ ಇದು ಇಷ್ಟವೇ. ಅದಕ್ಕೆ ಶೇಖರಪ್ಪನ ಕೈಯನ್ನು ಬೆಚ್ಚಗೆ ಮಾಡಿ ಮಸಲತ್ತು ಮಾಡತೊಡಗಿದ. 'ಒಬ್ಬ ಬ್ರಾಹ್ಮಣರಾಗಿ ದೇವರ ಕೆಲಸಕ್ಕೆ ಅಡ್ಡಿ ಬರಬಾರದು. ಒಪ್ಪಿಕೊಳ್ಳಿ, ದುಡ್ಡು ಕೊಡುತ್ತಾರೆ. ಬೇರೆ ಕಡೆ ಮನೆ ಕಟ್ಟಿಕೊಳ್ಳಿ' ಎಂಬುದು ಶೇಖರಪ್ಪನ ವಾದ. ದೇವರ ಹೆಸರನ್ನು ಹೇಳಿ ಅದಕ್ಕೆ ಜನಬೆಂಬಲವನ್ನು ಗಳಿಸಿಕೊಂಡ ಶೇಖರಪ್ಪನಿಂದ ಭಟ್ಟರಿಗೆ ತಪ್ಪಿಸಿಕೊಳ್ಳುವುದು ಕಷ್ಟವಾಗತೊಡಗಿತು.



ಇನ್ನೊ ಐದಾರು ವರ್ಷ ನಾವ್ಗ ಘಟ್ಟಾ ಖರೀದಿಸಿ ತಿನ್ನಬೇಕಾಗಿಲ್ಲ...!

ಆಗ ಅವರ ಕಣ್ಣಿಗೆ ಬಿದ್ದದ್ದು ಆಗತಾನೆ ಎಂ.ಎ. ಮುಗಿಸಿಕೊಂಡು ಬಂದಿದ್ದ ಚಂದ್ರು. ಅವನಿಗೆ ತಮ್ಮ ಕಷ್ಟವನ್ನು ಹೇಳಿಕೊಂಡರು. ಚಂದ್ರು ಎಲ್ಲವನ್ನು ಕೇಳಿ 'ಭಟ್ಟರೆ, ನಿಮಗೆ ನಿಮ್ಮ ಮನೆ ಅಂಗಡಿ ಮುಖ್ಯವಾದವೆ ಹೊರತು ಆ ಗರುಡಗಂಬವಲ್ಲ. ಆದರೂ ನಾನು ಆ ಗರುಡಗಂಬವನ್ನು ಉಳಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತೇನೆ. ಆ ಕಂಬಕ್ಕೆ ಐತಿಹಾಸಿಕವಾದ ಹಾಗೂ ಸಾಂಸ್ಕೃತಿಕ ವಾದ ಮಹತ್ವವಿದೆ ಎಂಬ ಕಾರಣಕ್ಕಾಗಿಯಲ್ಲದೆ ಅದು ದೇವರಿಗೆ ಸಂಬಂಧಿಸಿದ್ದು ಎಂದು ಅಲ್ಲ' – ಅಂದನಂತೆ. ವಿದ್ಯಾವಂತರಾದ ಭಟ್ಟರಿಗೆ ಏನೋ ಹೊಳೆದಂತಾಗಿ, 'ಐತಿಹಾಸಿಕ ಮಹತ್ವ ಅಂದೆಯಲ್ಲ, ಅದು ಏನು ?' ಅಂದರಂತೆ. ಚಂದ್ರು ಎಲ್ಲವನ್ನು ಹೇಳಿದ. ಅದು ಹೊಯ್ಸಳರ ಕಾಲಕ್ಕೆ ಸೇರಿದ ಕಂಬ. ಸುಮಾರು ಎಂಟುನೂರು ವರ್ಷಗಳಷ್ಟು ಹಳೆಯದು. ಆ ಕಂಬದ ಪಶ್ಚಿಮಕ್ಕೆ ಒಂದು ವಿಷ್ಣು ದೇವಾಲಯವಿದ್ದಿರಬೇಕು. ಕಾಲಕ್ರಮೇಣ ಅದು ಹಾಳಾಗಿ ಈ ಕಂಬ ಮಾತ್ರ ಉಳಿದಿರಬೇಕು. ಈ ಕಂಬದಿಂದಾಗಿ ನಮ್ಮೂರಿಗೆ ಎಂಟ ನೂರು ವರ್ಷಗಳ ಇತಿಹಾಸವಿದೆ ಎಂದು ಗೊತ್ತಾಗುತ್ತೆ. ಹೀಗೆ ಅವನಿಗೆ ತಿಳಿದಷ್ಟು ಹೇಳಿದನಂತೆ. ಎಲ್ಲವನ್ನು ಕೇಳಿಸಿಕೊಂಡು ಹೋದ ಭಟ್ಟರು 'ತಾವು ತಮ್ಮ ಮನೆ ಕೆಡವಲು ಒಪ್ಪುವುದಿಲ್ಲ. ಈಗಾಗಲೇ ನಮಗೆ ಬಹಳ ಅನ್ಯಾಯವಾಗಿದೆ. ಮತ್ತೆ ಅನ್ಯಾಯವಾಗಲು ನಾನು ಬಿಡುವುದಿಲ್ಲ. ಎಂದು ಅವರಿವರ ಬಳಿ ಹೇಳಿಕೊಂಡು ತಿರುಗಿದರು. ಏನಾದರೂ ಮಾಡಿ ಈ ಹಾರುವಯ್ಯನ ಎತ್ತಂಗಡಿ ಮಾಡಿಸಬೇಕು ಎಂದು ನಿರ್ಧರಿಸಿದ್ದ ಶೇಖರಪ್ಪ ಸುತ್ತಮುತ್ತಲ ಹಳ್ಳಿಗಳ ಮುಖಂಡರನ್ನು ಸೇರಿಸಿ ಪಂಚಾಯ್ತಿ ಮಾಡಿಸಲು ನಿರ್ಧರಿಸಿದ. ತಾವು ಬಯಸಿದಂತೆಯೆ ಆಗಿದ್ದಕ್ಕೆ ಖುಷಿಪಟ್ಟ ಭಟ್ಟರು ಪಂಚಾಯ್ತಿಯ ದಿನ 'ಸ್ವಾಮಿ ಸುಮಾರು ಎಂಟನೂರು ವರ್ಷ ಗಳ ಇತಿಹಾಸವಿರುವ ಈ ಊರಿನಲ್ಲಿ, ಆಗಿನ ಕಾಲಕ್ಕೆ ರಾಜರುಗಳಿಂದ ಆಶ್ರಯ ಪಡೆದಿದ್ದ ಬ್ರಾಹ್ಮಣರ ಪಳೆಯುಳಿಕೆಯಾಗಿ ನಾನು ಉಳಿದಿದ್ದೇನೆ. ಈ ಗರುಡಗಂಬವಿದೆಯಲ್ಲ ಅದು ಎಂಟನೂರು ವರ್ಷಗಳಷ್ಟು ಹಳೆಯದು. ಗರುಡಗಂಬ ಎಲ್ಲಿ ಇರುತ್ತೆ ಹೇಳಿ ? ವಿಷ್ಣು ದೇವಸ್ಥಾನದ ಮುಂದೆ ಗರುಡಗಂಬ ಇರೋದು ನಿಮಗೆಲ್ಲ ಗೊತ್ತಿರೋದೆ. ಇದು ಗರುಡಗಂಬ ಅನ್ನೋದಿಕ್ಕೆ ಅದರ ಮೇಲಿರೊ ಆಂಜನೇಯ, ಗರುಡ, ಶಂಖ, ಚಕ್ರಗಳೆ ಸಾಕ್ಷಿ. ದೇವಸ್ಥಾನದ ಬಾಗಿಲು ಯಾವಾಗಲೂ ಪೂರ್ವಕ್ಕೆ ಇರುತ್ತೆ. ಅದರ ಮುಂದೆ ಗರುಡಗಂಬ ಇರುತ್ತೆ. ಈಗ ಹೇಳಿ ಈ ಕಂಬ ಇರೋದನ್ನು ಗಮನಿಸಿದರೆ, ದೇವಸ್ಥಾನ ಈಗ ಶೇಖರಪ್ಪನ ಮನೆ ಇರೋ ಜಾಗದಲ್ಲಿ ಇತ್ತು. ಅದು ಯಾವ್ದೊ ಕಾಲದಲ್ಲಿ ಹಾಳುಬಿದ್ದಾಗ ಈ ಶೇಖರಪ್ಪನ ಹಿರಿಯರು ಅದನ್ನು ಪೂರ್ತಿ ಮಾಡಿ ದೇವಸ್ಥಾನ ಇದ್ದ ಭೂಮಿನ ಅವರಂತೆ ಮಾಡಿಕೊಂಡವರೆ. ಈಗಲೂ ಅದನ್ನೆ ಮಾಡಿ ಇರೊ ಒಬ್ಬ ಬ್ರಾಹ್ಮಣ, ನನ್ನ ಎತ್ತಂಗಡಿ ಮಾಡೊಕೆ ಮಸಲತ್ತು ಮಾಡ್ತಾವನೆ. ಈಗ ಹೇಳಿ, ಇಲ್ಲಿ ನನಗೆ ಹೊಟ್ಟೆಪಾಡಿಗಿರೊ ಒಂದು ಚಿಲ್ಲರೆ ಅಂಗಡಿ, ಒಂದು ಸೂರನ್ನು ಅಲ್ಲೆಲ್ಲೊ ದೇವಸ್ಥಾನ ಕಟ್ತಾರೆ ಅಂತ ನಾನು ಕಳಕೋಬೇಕಾ ?' ಎಂದು ಬಂದಿದ್ದವರ ಕರುಳು ಚುರ್ ಅನ್ನುವಂತೆ ಗೊಳೋ ಅಂತ ಅಳ್ತಾ ಕರೀತಾ ಕೂಗಾಡಿದರು.

'ಗರುಡಗಂಬವನ್ನು ಸ್ಥಳಾಂತರಿಸುವುದಕ್ಕೆ ತಾವೂ ಒಪ್ಪುವುದಿಲ್ಲ' ಎಂದು ಚಂದ್ರು ಮುಂತಾದವರು ಕೂಡಾ ಹಠ ಹಿಡಿದರು. ಪಂಚಾಯ್ತಿ ಎಲ್ಲೊ ಪ್ರಾರಂಭವಾಗಿ ಎಲ್ಲೊ ಮುಗೀತು. ಏನೂ ತೀರ್ಮಾನ ಆಗ್ಲಿಲ್ಲ. ಮಾರನೆ ದಿನಾನೆ ಚಂದ್ರು ಮುಂತಾದವರು ಸೇರಿಕೊಂಡು ನನ್ನನ್ನು ಕರೆಸಿಕೊಂಡು ಒಂದು ಸಂಘ ಮಾಡಿದರು. ಯಾವುದೇ

ಕಾರಣಕ್ಕೂ ಗರುಡಗಂಬವನ್ನು ಸ್ಥಳಾಂತರಿಸಲು ಬಿಡಬಾರದು ಎಂದು ತೀರ್ಮಾನವೂ ಆಯಿತು. ನನ್ನನ್ನು ಸೇರಿಸಿಕೊಂಡು ಚಂದ್ರು ಮೊದಲಾದವರು ಊರಿನ ಇತಿಹಾಸವನ್ನು ಕೆದಕಿ ಅದರ ಮಹತ್ವವನ್ನು ಊರಿನ ಜನರ ತಲೆಗೆ ತುಂಬಲು ಪ್ರಯತ್ನಿಸುತ್ತಿದ್ದರೆ, ಶೇಖರಪ್ಪ 'ತನ್ನ ಹಿರಿಯರನ್ನೇ ಅವಮಾನಿಸಿದ ಆ ಭಟ್ಟನನ್ನು ಊರು ಬಿಡಿಸುತ್ತೇನೆ' ಎಂದು ಹೇಳಿಕೊಂಡು ಊರೂರು ಸುತ್ತತೊಡಗಿದ. ಗರುಡಗಂಬ ಅಲ್ಲದೆ ಒಂದೈದಾರು ಮನೆಗಳನ್ನಾದರೂ ಕೆಡವದೆ ಕಲ್ಲನ್ನು ತಮಿಳುನಾಡಿಗೆ ಸಾಗಿಸಲು ಸಾಧ್ಯವಿಲ್ಲ ಅಂತ ಗೊತ್ತಿದ್ದ ಕರುಪ್ಪಯ್ಯ ದೇವರ ಕೆಲಸಕ್ಕೆ 'ಅಡ್ಡ ಬರುವವರ ತಲೆ ಉರುಳುತ್ತೆ' ಅಂತ ಪ್ರಚಾರ ಮಾಡತೊಡಗಿದ.

ಬಸ್ಸು ಊರು ಮುಟ್ಟುವಲ್ಲಿ ರಾತ್ರಿ ಹತ್ತು ಗಂಟೆಯಾಗಿತ್ತು. ನಾನು ಬಂದೇ ಬರುತ್ತೇನೆ ಎಂಬ ನಂಬಿಕೆಯಿಂದ ನಮ್ಮೂರಿನ ಗೇಟಿನ ಬಳಿಗೆ ಚಂದ್ರು ಒಂದೈದಾರು ಮಂದಿಯೊಂದಿಗೆ ಬಂದು ಕಾಯುತ್ತಿದ್ದ. ಆರು ಕಿ. ಮೀ. ದೂರ ನಡೆದುಕೊಂಡು ಊರು ಸೇರುವಷ್ಟರಲ್ಲಿ ಮರುದಿನದ ಪಂಚಾಯ್ತಿಯಲ್ಲಿ ನಮ್ಮ ಪಾತ್ರವೇನು ಎಂಬುದರ ಬಗ್ಗೆ ಒಂದು ಒಮ್ಮತದ ತೀರ್ಮಾನಕ್ಕೆ ನಾವು ಬಂದಿದ್ದೆವು.

ನಾನು ಕಂಡ ಮಟ್ಟಿಗೆ ನಮ್ಮೂರಿನಲ್ಲಿ ಅಷ್ಟೊಂದು ಜನ ಒಟ್ಟಿಗೆ ಸೇರಿದ್ದನ್ನು ನಾನು ನೋಡಿರಲಿಲ್ಲ. ಸುಮಾರು ಒಂದು ಸಾವಿರ ಜನ ಸುತ್ತಮುತ್ತಲ ಊರಿನವರು ಜಮಾಯಿಸಿದ್ದರು. ಶೇಖರಪ್ಪ 'ಭಟ್ಟರು ನಮ್ಮ ಜಾತಿಯವರನ್ನು ಅವಮಾನಿಸಿದರು' ಎಂದು ಪಂಚಾಯ್ತಿಗೆ ದೂರು ಕೊಟ್ಟಿದ್ದ. ಇತ್ತ ಕೇಶವಭಟ್ಟರು 'ನನ್ನ ಪ್ರಾಣ ಹೋದರೂ ನನ್ನ ಮನೆ ಮತ್ತು ಗರುಡಗಂಬವನ್ನು ಕೆಡವಲು ಒಪ್ಪುವುದಿಲ್ಲ' ಎಂದು ಹೇಳಿಕೊಂಡಿದ್ದರು. ನಮಗೆ ಗರುಡಗಂಬವಷ್ಟೆ ಮುಖ್ಯವಾಗಿತ್ತು. ತಮಿಳುನಾಡಿನಲ್ಲಿ ದೇವಸ್ಥಾನ ಕಟ್ಟುವುದರ ಬಗ್ಗೆ ನಮಗೆ ವೈಯಕ್ತಿಕವಾಗಿ ವಿರೋಧವಿದ್ದರೂ ಅದನ್ನು ನಾವು ಪಂಚಾಯ್ತಿಯಲ್ಲಿ ಪ್ರಸ್ತಾಪಿಸದಿರಲು ನಿರ್ಧರಿಸಿದ್ದೆವು.

ಸುಮಾರು ಹನ್ನೊಂದು ಗಂಟೆಯಿರಬಹುದು. ಪಂಚಾಯ್ತಿ ಪ್ರಾರಂಭವಾಯಿತು. ಶೇಖರಪ್ಪ ಮತ್ತೊಮ್ಮೆ ಮೊದಲಿಂದ ಅಂದರೆ ಕರುಪ್ಪಯ್ಯನಿಗೆ ದೈವ ಪ್ರೇರಣೆಯಾಗಿದ್ದು, ಅದಕ್ಕೆ ಬೇಕಾದ ಕಲ್ಲು ನಮ್ಮೂರಿನ ಬಳಿ ಸಿಕ್ಕಿದ್ದು, ಅದನ್ನು ಪುರೋಹಿತರೇ ಒಡೆದು ಸಿದ್ಧ ಪಡಿಸಿದ್ದು, ಅದನ್ನು ಸಾಗಿಸಲು ಇದ್ದ ತೊಂದರೆಗಳು, ಅದನ್ನು ಪರಿಹರಿಸಲು ತಾನು ಮಾಡುತ್ತಿರುವ ಪ್ರಯತ್ನಗಳು ಹೀಗೆ ಎಲ್ಲವನ್ನು ಹೇಳಿ ಕೊನೆಗೆ, 'ದೇವರ ಕೆಲಸಕ್ಕೆ ಅಡ್ಡಿ ಮಾಡುತ್ತಿರುವ ಭಟ್ಟರು ತಮ್ಮ ಜಾತಿಯವರನ್ನು ಅವಮಾನ ಮಾಡಿದ್ದಾರೆ' ಎಂದು ಕೂಗಿ ಹೇಳಿದ.

ಇತ್ತ ಭಟ್ಟರು ಬಗ್ಗಿಯಾರೆ ? ನಮ್ಮೂರಿನಲ್ಲಿ ಎಂಟುನೂರು ವರ್ಷಗಳ ಹಿಂದಿದ್ದ ದೇವಸ್ಥಾನ, ಅದರ ಪಳೆಯುಳಿಕೆಯಾಗಿ ನಿಂತಿರುವ ಗರುಡಗಂಬ, ತನ್ನ ಜೀವನಾಧಾರವಾಗಿರುವ ಅಂಗಡಿ ಮನೆ ಮುಂತಾದವುಗಳನ್ನು ಬಿಡಿಸಿ ಬಿಡಿಸಿ ಹೇಳಿದರು.

ನಡುವೆ ಚಂದ್ರು ಎದ್ದು ನಿಂತು ಪಂಚಾಯ್ತುದಾರರ ಅನುಮತಿ ಪಡೆದು, 'ಸ್ವಾಮಿ, ಶೇಖರಪ್ಪನವರು ಹೇಳಿದರು ದೇವರ ಕೆಲಸ ಅಂತ. ಭಟ್ಟರದು ಹೊಟ್ಟೆಪಾಡು. ಆದರೆ ನಮ್ಮ ಕೋರಿಕೆ ಇಷ್ಟೆ. ಸುಮಾರು ಎಂಟುನೂರು ವರ್ಷಗಳಷ್ಟು ಹಳೆಯದಾದ ಈ ಕಂಬವನ್ನು ಕೆಡವುವುದಾಗಲಿ, ಸ್ಥಳಾಂತರಿಸುವುದಾಗಲಿ ಆಗದ ಮಾತು. ಅದು ಸಾಧ್ಯ ಎಂದರೂ ನಾವು ಅದಕ್ಕೆ ಒಪ್ಪುವುದಿಲ್ಲ. ದೇವರ ಕೆಲಸಕ್ಕೆ ಎಂತಲೇ ಶೇಖರಪ್ಪನವರೇ ಏಕೆ ತಮ್ಮ ಮನೆಗಳನ್ನು ಕೆಡವಲು ಅನುಮತಿ ಕೊಡಬಾರದು. ಆ ಭಾಗದ ಮನೆಗಳನ್ನು ಕೆಡವಿದರೆ ಈ ಕಂಬವನ್ನು ಕೆಡವಬೇಕಾಗಿಲ್ಲ. ಇದರಿಂದ ನಾನು ಭಟ್ಟರ ಪರವಾಗಿ ಮಾತನಾಡುತ್ತಿದ್ದೇನೆ ಎಂದು ಭಾವಿಸಬೇಕಿಲ್ಲ. ನಮಗೆ ಉಳಿಯಬೇಕಾಗಿರುವುದು ಆ ಗರುಡಗಂಬ ಮಾತ್ರ. ಅದಕ್ಕಾಗಿ ನಾವು ಏನು ಬೇಕಾದರೂ ಮಾಡಲು ಸಿದ್ಧ' ಎಂದು ಘೋಷಿಸಿದ. ಅಷ್ಟರಲ್ಲಿ ಗುಜುಗುಜು ಪ್ರಾರಂಭವಾಯಿತು. ಶೇಖರಪ್ಪ ಏನೊ ಹೇಳಲು ನೋಡಿದ. ಆಗ ನಾನೇ ಎದ್ದು ನಿಂತೆ.

'ಸ್ವಾಮಿ ನನ್ನದೊಂದು ಮನವಿ. ಮೊದಲನೆಯದಾಗಿ ಭಟ್ಟರ ಜೀವನಾಧಾರದ ಪ್ರಶ್ನೆ. ಅದನ್ನು ಈ ಗರುಡಗಂಬದ ಮಹತ್ವವನ್ನು ತಳುಕು ಹಾಕಬೇಕಾಗಿಲ್ಲ. ಇಷ್ಟೊಂದು ಹಣವನ್ನು ಖರ್ಚು ಮಾಡುತ್ತಿರುವ ಕರುಪ್ಪಯ್ಯನಿಗೆ ಭಟ್ಟರಿಗೆ ಬೇಕಾದಷ್ಟು ಹಣ ಕೊಡುವ ಶಕ್ತಿಯಿರುವುದಿಲ್ಲವೇ ? ಆದರೆ ಇಲ್ಲಿ ಉಳಿಯಬೇಕಾಗಿರುವುದು ನಮ್ಮ ಸಾಂಸ್ಕೃತಿಕ ಕೊಂಡಿಯಾಗಿರುವ ಈ ಕಂಬ. ಅದರ ಬಗ್ಗೆ ಭಟ್ಟರಿಗೆ ಎಷ್ಟು ಕಾಳಜಿ ಇದೆ ಎಂಬುದು ಸ್ಪಷ್ಟವಾಗಬೇಕಾದ ವಿಚಾರ. ಎರಡನೆಯದಾಗಿ, ಶೇಖರಪ್ಪ ಎತ್ತಿದ ಜಾತಿಗೆ ಅವಮಾನವಾದ ವಿಚಾರ. ಸ್ವತಃ ಶೇಖರಪ್ಪನವರೆ ಚಂದ್ರೂನನ್ನು ದನ ತಿನ್ನೊ ಜಾತಿ ಅಂದದ್ದನ್ನು ಕಂಡವರಿದ್ದಾರೆ, ಅದೂ ಚಂದ್ರುವಿನ ಎದುರಿಗೆ. ಭಟ್ಟರನ್ನು ಹಾರುವಯ್ಯ ಎಂದು ಕರೆದಿರುವುದನ್ನ ನಾನೇ ಕಂಡಿದ್ದೇನೆ. ಇವೆಲ್ಲ ಚರ್ಚೆಯಾಗಬೇಕಾದ ವಿಚಾರಗಳು. ರಸ್ತೆ ಕೊಡುವುದು ಬಿಡುವುದು ತೀರ್ಮಾನವಾಗುವ ಮೊದಲು ನಮ್ಮೂರಿನ ಈ ಸಮಸ್ಯೆಗಳು ಬಗೆಹರಿಯಬೇಕಾಗಿವೆ. ಕೊನೆಯದಾಗಿ ದೇವರು ಎಲ್ಲೆಲ್ಲೂ ಇದ್ದಾನೆ ಎಂದು ಹೇಳುವ ಈ ಕರುಪ್ಪಯ್ಯ ಇಷ್ಟೊಂದು ಕಷ್ಟಪಟ್ಟು ಕಲ್ಲನ್ನು ಅಲ್ಲಿಗೆ ಸಾಗಿಸುವುದೇತಕ್ಕೆ ? ಇಲ್ಲಿಯೇ ದೇವಸ್ಥಾನ ಮಾಡಿಸಿ ವಿಗ್ರಹವನ್ನು ಕೆತ್ತಿಸಬಹುದಲ್ಲ ?' ಎಂದು ಹೇಳಿ ಕುಳಿತುಕೊಂಡೆ.

## ಮಾರಾಟಕ್ಕಿವೆ ಕನಸು



ಮುರಿದು ಬಿದ್ದಿದೆ  
ನೆಲದ ಬೆನ್ನೆಲುಬು,  
ಹರಿವ ನೀರಿಗೂ ಪರರಪ್ಪಣೆ.  
ಗಾಳಿ ಗಂಧ ಸೂಸಲು  
ಪಡೆಯಬೇಕು ಒಡೆಯನಾಜ್ಞೆ.  
ಜಡಗೊಂಡ ತರುಲತೆ,  
ಪಡುವಣದ ಅಟ್ಟಹಾಸಕೆ.

ದಿಕ್ಕಿಲ್ಲ, ದೆಸೆಯಿಲ್ಲ....  
ರೆಕ್ಕೆ ಕಳಚಿದ ಹಕ್ಕಿ  
ಬಿಕ್ಕುತಿವೆ. ಬೆಂಕಿ  
ಬಿದ್ದಿದೆ ಕಾಡು-ಮೇಡಿಗೆ –  
ಹೊತ್ತಿ ಉರಿವ ಗೂಡು,  
ಸತ್ತು ಹೋಗಿದೆ ಹಾಡು,  
ಮಾರಾಟಕ್ಕಿವೆ ಕನಸು.

ಪಿ. ಎಂ. ಸಾಣಕರ  
ಅಂಚೆ-ವಸತಿ : ಪಡಗಾನೂರ ತಾ : ಸಿಂಧಗಿ  
ಜಿ : ಬಿಜಾಪುರ-೫೮೬ ೧೨೮

ದೇವಸ್ಥಾನವನ್ನು ಇಲ್ಲಿಯೆ ಕಟ್ಟುವ ವಿಚಾರವನ್ನು ನಾನು ಹೇಳಿದ್ದರಿಂದ ಭಟ್ಟರು ಮೆಚ್ಚುಗೆಯಿಂದ ನನ್ನ ಕಡೆಗೆ ನೋಡುತ್ತಿದ್ದರು. ಪಂಚಾಯ್ತಿ ತನಗೆ ವಿರುದ್ಧವಾಗಿ ಹೋಗುತ್ತಿರುವುದನ್ನು ಕಂಡ ಶೇಖರಪ್ಪನ ಮುಖ ಉರಿಯತೊಡಗಿತ್ತು. ಮಧ್ಯೆ ಯಾರೊ ಏನನ್ನೊ ಹೇಳಲು ಎದ್ದರು. ಅಷ್ಟರಲ್ಲಿ ಗುಜುಗುಜು ಜೋರಾಗಿಯೆ ನಡೆದಿತ್ತು. ಶೇಖರಪ್ಪ ಎದ್ದು ದೊಡ್ಡ ಧ್ವನಿಯಲ್ಲಿ ಹೇಳತೊಡಗಿದ. 'ಸ್ವಾಮಿ, ಪಂಚಾಯ್ತಿದಾರ್ರೆ, ನಮ್ಮ ವಂಶಸ್ಥರನ್ನು ಈ ಹಾರುವಯ್ಯ ಅವಮಾನ ಮಾಡಿದ್ದನ್ನು ಇಡೀ ಪಂಚಾಯ್ತಿಯೆ ಕಂಡಿದೆ. ನಾನು ಚಂದ್ರುನನ್ನೋ, ಯಾವನನ್ನೋ ಏನು ಅಂದಿಲ್ಲ. ಅಂದಿದ್ರೆ ಅದಕ್ಕೆ ಸಾಕ್ಷಿ ಏನಿದೆ ? ಈ ಹಾರುವಯ್ಯನೇನೊ ಸುಳ್ಳೇ ಸುಳ್ಳೇ ಹೇಳಿ ಸುದ್ದಿ ಹಬ್ಬಿಸಿದಾನೆ' ಎಂದು ಕೂಗಾಡತೊಡಗಿದ.

ಪಂಚಾಯ್ತಿ ದಾರಿ ತಪ್ಪುತ್ತಿತ್ತು. ಮುಖ್ಯಸ್ಥರೆಲ್ಲ ಅವರವರೆ ಮಾತನಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಮೈಮೇಲೆ ಆವೇಶ ಬಂದವರಂತೆ ಎದ್ದ ಭಟ್ಟರು ಶೇಖರಪ್ಪನ ಎದುರಿಗೆ ನಿಂತು, 'ಅದ್ಯಾಕೆ ಮಾತುಮಾತಿಗೆ ಹಾರುವಯ್ಯ ಹಾರುವಯ್ಯ ಅಂತ ಬಡುಕೊತಿಯೊ. ನೀನು ಜಂಗಮ ಆಗೋಕು ಮೊದಲು ಹಾರುವಯ್ಯನೆ ಆಗಿದ್ದೆ. ನಿಮ್ಮ ಬಸವಣ್ಣನು ಹಾರುವಯ್ಯನೆ ಆಗಿದ್ದ. ಅದನ್ನು ಮೊದಲು ತಿಳ್ಕೊ' ಅಂದು ಅಬ್ಬರಿಸಿದರು.

ಅವರ ಅಬ್ಬರಕ್ಕೆ ಜನರೆಲ್ಲ ಹೋ ಎಂದರು. ಹಿಂದಿದ್ದವರು ಮುಂದೇನಾಯಿತು ಅಂತ ಮುಂದಕ್ಕೆ ನುಗ್ಗಿ ಬಂದರು. ಮುಂದಿದ್ದ ಕೆಲವರು ಹಿಂದಕ್ಕೆ ನುಗ್ಗಿದರು. ಶೇಖರಪ್ಪ ಸೋಮ ಕುಣಿಯುವವನಂತೆ ಕುಣಿಯುತ್ತ, ಭಟ್ಟರ ಜುಟ್ಟು ಜನಿವಾರಗಳನ್ನು ಹಿಡಿದು ಮುಖ ಮುಸುಡಿ ನೋಡದೆ ಗುದ್ದತೊಡಗಿದ. ಭಟ್ಟರು ಹೋ ಎಂದು ದೊಡ್ಡ ದನಿಯಲ್ಲಿ ಕಿರುಚತೊಡಗಿದರು. ಜನರು ಎರ್ರಾಬಿರ್ರಿಯಾಗಿ ಓಡಾಡತೊಡಗಿದರು. ಕೆಲವೇ ನಿಮಿಷಗಳಲ್ಲಿ ಪಂಚಾಯ್ತಿ ಕುರುಕ್ಷೇತ್ರವಾಗಿ ಹೋಗಿತ್ತು. ಭಟ್ಟರು ಮತ್ತು ಶೇಖರಪ್ಪ ಇಬ್ಬರು ಸೊಂಟದ ಕೆಳಗಿನ ಭಾಷೆಯಲ್ಲಿ ಬಯ್ದಾಡುತ್ತ ಒಬ್ಬರ ಮೇಲೊಬ್ಬರು ಬಿದ್ದು ಒದ್ದಾಡುತ್ತಿದ್ದರೆ, ಪಂಚಾಯ್ತಿ ಮುಖಂಡರು ನಿಂತು ನೋಡುತ್ತಿದ್ದರು. ಯಾರೊ ಹೆಂಗಸು ಹೇಳುತ್ತಿದ್ದಳು, 'ನಾವು ಬಯ್ದಾಡಿದ್ರೆ, ನಾಲ್ಗೆ ಕುಲ ಹೇಳ್ತು ಅಂತ ಬಯ್ತಿದ್ದ ಈವಯ್ಯಗಳೆ ಹೆಂಗೆ ಬಯ್ದಾಡ್ತಾವೆ ನೋಡ್ರಪ್ಪ' ಅಂತ.

ಉನ್ನತ ಸಂಸ್ಕೃತಿಯೊಂದರ ಪರಂಪರೆಯಲ್ಲಿ ಉತ್ತಮರೆನಿಸಿಕೊಂಡ ದೊಡ್ಡ ಜನಗಳ ಸಣ್ಣ ಬುದ್ಧಿಯನ್ನು ಕಂಡು ಚಂದ್ರು ಅಸಹ್ಯದಿಂದಲೂ ಜಿಗುಪ್ಸೆಯಿಂದಲೂ ತಲೆ ತಗ್ಗಿಸಿ ನಿಂತಿದ್ದ.

ಸತ್ಯನಾರಾಯಣ ಬಿ. ಆರ್.  
ಗ್ರಂಥಪಾಲಕರು, ಸುರಾನ ಕಾಲೇಜು, ೧೬, ಸೌತ್ ಎಂಡ್ ರಸ್ತೆ, ಬಸವನಗುಡಿ, ಬೆಂಗಳೂರು - ೪

ಭೋಜರಾಜ ಸೊಪ್ಪಿಮಠ



# ಆದರ್ಶ

**ಉ**ದಯ್ ಒಬ್ಬ ಲೇಖಕ. ಸಮಾಜದಲ್ಲಿ ನಡೆಯುತ್ತಿರುವ ಕೆಲವೊಂದು ಶೋಷಣೆಗಳನ್ನು ಪ್ರತಿಭಟಿಸಿ ಹಲವಾರು ಪ್ರಸಿದ್ಧ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದ. ಅವನ ಲೇಖನಗಳನ್ನು ಬಹಳಷ್ಟು ಜನ ಇಷ್ಟಪಡುತ್ತಿದ್ದರು. ಏಕೆಂದರೆ ಅವನದು ಎಲ್ಲಾ ವರ್ಗದ ಜನರಿಗೂ ತಿಳಿಯುವ ಹಾಗೆ ಮನಮುಟ್ಟುವಂತೆ ಬರೆಯುವ ಶೈಲಿ. ಆದರೆ ಇದ್ದಕ್ಕಿದ್ದಂತೆ ಲೇಖನ ಬರೆಯುವುದನ್ನೇ ನಿಲ್ಲಿಸಿಬಿಟ್ಟ. ತನ್ನ ಬರವಣಿಗೆಯನ್ನು ನಿಲ್ಲಿಸಲು ಕಾರಣವಾದ ಒಂದು ಘಟನೆ ಅವನ ಜೀವನದಲ್ಲಿ ನಡೆಯಿತು.

* * *

ಉದಯ್‌ರವರೆ,

ಪ್ರಸಿದ್ಧ ಸಾಪ್ತಾಹಿಕವೊಂದರಲ್ಲಿ ನೀವು ಬರೆದ 'ಮಹಿಳೆಯರ ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರ' ಲೇಖನ ಅರ್ಥಪೂರ್ಣವಾಗಿತ್ತು. ನಮ್ಮಂಥ ಮಹಿಳೆಯರ ಸಮಸ್ಯೆಗಳನ್ನು ಎತ್ತಿ ಹಿಡಿದು ಸಮಾಜಕ್ಕೆ ತೋರಿಸಿದ್ದೀರಿ. ಮಹಿಳೆಯರಿಗೆ ಸಮಾನತೆಯಾಗಲಿ, ಸ್ವಾವಲಂಬನೆಯಾಗಲಿ ಬರೀ ಲೇಖನಗಳನ್ನು ಬರೆಯುವುದರಿಂದ ಬರುವುದಿಲ್ಲ, ಬದಲಾಗಿ ಗಂಡು ಅವಳಿಗೆ ಸಮಾನ ಅವಕಾಶಗಳನ್ನು ಒದಗಿಸಿಕೊಡಬೇಕು, ಹೆಣ್ಣಿಗೆ ಸಮಾನತೆ ನೀಡುತ್ತಾ ಸಹಾಯ, ಸಹಕಾರ ನೀಡಬೇಕು. ಅವಳಲ್ಲಿನ ದೌರ್ಬಲ್ಯಗಳನ್ನು ಉಪಯೋಗಿಸಿಕೊಂಡು ಶೋಷಿಸಬಾರದು. ಇವುಗಳ ಬಗ್ಗೆ ಉತ್ತಮ ನಿರೂಪಣೆ ನೀಡಿದ್ದೀರಾ. ಈ ಜಾತಿವಾದದ ರಾಷ್ಟ್ರದಲ್ಲಿ ಅಂತರ್ ಜಾತೀಯ ಪ್ರೇಮ ವಿವಾಹಗಳನ್ನು ಪ್ರೋತ್ಸಾಹಿಸುವುದರಿಂದ ಜಾತಿಯ ಮತಾಂಧತೆಯನ್ನು ತೊಡೆದು ಹಾಕಬಹುದೆಂದು ಹೇಳಿದ್ದೀರಿ. ಪ್ರತಿಯೊಂದು ಹಂತದಲ್ಲಿಯೂ ಹೆಣ್ಣು ಯಾವ ರೀತಿ ಶೋಷಣೆಗೊಳಗಾಗುತ್ತಾಳೆಂಬುದನ್ನು ತಿಳಿಸಿದ್ದೀರಿ, ವಂದನೆಗಳು.

ಈಗ ನಾನು ನಿಮಗೆ ಪತ್ರ ಬರೆಯುವ ಉದ್ದೇಶ ಇಲ್ಲಿದೆ. ನನ್ನ ಹೆಸರು ಸರಳಾ. ನಾನು ಕೆಳಸ್ತರದವಳು. ನೀವು ಮೇಲ್ಜಾತಿಯವರೆಂದು ನಿಮ್ಮ ಮನೆತನದ ಹೆಸರೇ ಹೇಳುತ್ತಿದೆ. ನಾನು ನೋಡಲಿಕ್ಕೆ ಕಪ್ಪಗಿದ್ದೇನೆ. ನನಗೀಗ ಇಪ್ಪತ್ತೈದು ವರ್ಷ. ಇನ್ನೂ ಮದುವೆಯಾಗಿಲ್ಲ. ನಾನು ಕಪ್ಪಗಿರುವುದರಿಂದ ಯಾವ ಗಂಡುಗಳೂ ನನ್ನನ್ನು ಮೆಚ್ಚುತ್ತಿಲ್ಲ, ನಾನು ಜಾಸ್ತಿ ಓದಿದವಳೆಂದು ಕೆಲವೊಂದು ಬಾರಿ ನನ್ನ ವಿದ್ಯಾಭ್ಯಾಸ ಅಡ್ಡ ಬಂದಿದೆ. ಲೇಖನದ ಜೊತೆ ನಿಮ್ಮ ವಿಳಾಸ, ಪರಿಚಯ, ಫೋಟೋ ಇರುವುದನ್ನು ನೋಡಿ ನಾನು ನಿಮ್ಮನ್ನು ಕೇಳುತ್ತಿದ್ದೇನೆ. ನಿಮಗಿನ್ನೂ ಮದುವೆಯಾಗಿಲ್ಲ. ಮಹಿಳೆಯರ ಸ್ಥಾನಮಾನದ ಬಗ್ಗೆ ಇಷ್ಟೊಂದು ವಿವೇಚನೆ ಇರುವವರು ನನ್ನನ್ನು ಮದುವೆಯಾಗುತ್ತೀರಾ ? ಬರೀ ಲೇಖನದಲ್ಲಿ ಸಮಾಜದ ಮೌಢ್ಯತೆ ನಿವಾರಣೆಗೆ ಸಲಹೆಗಳನ್ನು ನೀಡುತ್ತಿಲ್ಲ. ಅದನ್ನು ಕೃತಿಯಲ್ಲಿಯೂ ತರುತ್ತೇನೆ ಎಂದು ನೀವೇಕೆ ಒಂದು ಹೆಜ್ಜೆ ಮುಂದೆ ಇಟ್ಟು ಈ ಸಮಾಜಕ್ಕೆ ಮಾದರಿಯಾಗಬಾರದು ? ಇವಳೆಷ್ಟು ದಿಟ್ಟೆ! ತನ್ನ ಬಗ್ಗೆ ಹೇಳಿಕೊಂಡು ಎಷ್ಟು ಧೈರ್ಯದಿಂದ ಕೇಳುತ್ತಿದ್ದಾಳಲ್ಲ ಎಂದು ಆಶ್ಚರ್ಯವಾಗುತ್ತಿದೆಯಾ ? ನಿಜವಾಗಿಯೂ ನನಗೆ ನಿಮ್ಮಂಥವರ ಹೆಂಡತಿಯಾಗಬೇಕಂತ ಆಸೇರೀ. ನನ್ನ ಭಾವನೆಗೆ ನಿಮ್ಮಂಥವರ ಸಹಾಯ, ಸಹಕಾರ ಸಿಕ್ಕೇ ಸಿಗುತ್ತದೆಯೆಂಬ ನಿರೀಕ್ಷೆಯೊಂದಿಗೆ ಈ ಪತ್ರ ಬರೆಯುತ್ತಿದ್ದೇನೆ. ನನಗನ್ನಿಸುತ್ತಿದೆ: ಖಂಡಿತ ನನಗೆ ನೀವು ಪತ್ರ ಬರೆಯುವುದಿಲ್ಲ, ಹೇಗಾದರೂ ಇರಲಿ ಎಂದು ನನ್ನ ವಿಳಾಸವನ್ನು ಕೊಡುತ್ತಿದ್ದೇನೆ.

ಇಂತಿ ನಿಮ್ಮ , ಸರಳಾ

* * *

ಸರಳಾರವರೆ,

ನಿಮ್ಮ ಪತ್ರವನ್ನು ಬಹುಶಃ ನನಗೆ ನೆನಪಿಲ್ಲದಷ್ಟು ಬಾರಿ ಓದಿದೆ. ನಿಮ್ಮ ನೇರ ನಡೆ, ನುಡಿಗೆ ನನ್ನ ಅಭಿಮಾನವಿದೆ. ನೀವು ಕೇಳಿದಿರಿ, ನನ್ನ ಮದುವೆಯಾಗುತ್ತೀರಾ ಅಂತ. ನನ್ನ ತಂದೆಗೆ ಹೇಗೋ ನಿಮ್ಮ ಪತ್ರ ಸಿಕ್ಕಿತು. ಓದಿದ ಅವರು ತುಂಬಾ ರೇಗಾಡಿದರು. ನೀನಾವುದೋ ಕೆಳಸ್ತರದವಳನ್ನು ಮದುವೆಯಾಗುವುದಾದರೆ ಮನೆಬಿಟ್ಟು ಹೊರಡು. ನನ್ನನ್ನು ಮಾತನಾಡಿಸಬೇಡ ಎಂದೆಲ್ಲಾ ಹೇಳಿದರು.

ಆದರೆ ನಿಜವಾದ ತಡೆ ಬಂದಿರುವುದು ಇಲ್ಲಿದೆ. ಮನೆಯಲ್ಲಿ ಇನ್ನೂ ಮದುವೆಯಾಗದ ಇಬ್ಬರು ತಂಗಿಯರಿದ್ದಾರೆ. ನಮ್ಮ ಮದುವೆಯಿಂದ ಅವರ ಭವಿಷ್ಯ ಹಾಳಾಗುವ ಸಂಭವವಿದೆ. ನಮ್ಮ ಮನೆತನದ ಪೂರ್ವ ವಿಷಯಗಳನ್ನು ತಿಳಿದು ಮುಂದೆ ಅವರು ಮನೆಯಲ್ಲಿ ಕಷ್ಟ ಅನುಭವಿಸಬಹುದು. ಏಕೆಂದರೆ ನಾವೆಲ್ಲಾ ಸಂಪ್ರದಾಯದ ಮನೆತನದಲ್ಲಿ ಹುಟ್ಟಿದವರು. ಜಾತ್ಯತೀತತೆಯ ಬಗ್ಗೆ ಮಾತನಾಡಿ ಯೌವನದ ಬಿಸಿ ರಕ್ತದಲ್ಲಿ ಈಗ ಮದುವೆಯಾಗಿ ಮುಂದೆ ಜೀವನದಲ್ಲಿ ಅನೇಕ ತೊಂದರೆಗಳನ್ನು ಅನುಭವಿಸುವುದು ಸುಲಭವಲ್ಲ. ಮುಂದೆ ಪಶ್ಚಾತ್ತಾಪ ಪಡುವ ಸಂದರ್ಭವೂ ಬರಬಹುದು. ಈಗಿನ ನಮ್ಮ ಆದರ್ಶ ದುಃಖದಲ್ಲಿ ಅಂತ್ಯಗೊಳ್ಳುತ್ತದೆ. ಸಲಹೆ ಕೊಡುವುದು ತುಂಬಾ ಸರಳ. ಆದರೆ ಅದನ್ನು ಕೃತಿಯಲ್ಲಿ ತರುವುದು ಕಷ್ಟ. ಕ್ರಾಂತಿಯಾಗಬೇಕು, ನಿಜ. ಆದರೆ, ಹೀಗೆ ಮನೆಯಲ್ಲಿ ಕ್ರಾಂತಿಯಾಗುವಷ್ಟರ ಮಟ್ಟಿಗೆ ಅಲ್ಲ. ನೀವು ನನ್ನ ಬಗ್ಗೆ ಏನಾದರೂ ಅಂದುಕೊಳ್ಳಿ, ದಯವಿಟ್ಟು ಮದುವೆಯ ಆಸೆ ಬಿಟ್ಟುಬಿಡಿ.

ನಿಮ್ಮ , ಉದಯ್.

* * *

ಉದಯ್‌ರವರೆ,

ಪ್ರಸಿದ್ಧ ಸಾಪ್ತಾಹಿಕವೊಂದರಲ್ಲಿ ಬರೆದ 'ಮಹಿಳೆಯರ ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರ' ಲೇಖನ ಓದಿದೆ. ತುಂಬಾ ಚೆನ್ನಾಗಿದೆ, ನಾನು ನಿಮ್ಮ ಹಾಗೆ ಒಬ್ಬ ಲೇಖಕಿ. ಆಗೊಮ್ಮೆ ಈಗೊಮ್ಮೆ ನನ್ನ ಲೇಖನಗಳು ಕೂಡ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುತ್ತವೆ. ಲೇಖನದ ಜೊತೆ ನಿಮ್ಮ ಫೋಟೋ, ವಿಳಾಸ ನೋಡಿದೆ. ಅದಕ್ಕಾಗಿ ಈ ಪತ್ರ ಬರೆಯುತ್ತಿದ್ದೇನೆ. ನಿಮ್ಮ ಲೇಖನದಿಂದ ನಾನು ಪ್ರಭಾವಿತಳಾಗಿದ್ದೇನೆ.

ಉದಯ್‌ರವರೆ, ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಬಹುಶಃ ನಿಮ್ಮ ಮೇಲಿನ ಪ್ರೀತಿಗೆ ಬೆಲೆ ಕಟ್ಟಲಾಗದೇನೋ. ನೀವೇನು ಅಂದುಕೊಳ್ಳುತ್ತೀರಿ ? ಅಷ್ಟೊಂದು ನಾಚಿಕೆ ಬಿಟ್ಟು ನಿಂತಿರುವ ಹೆಣ್ಣು ಅಂತಾನಾ ? ಪ್ರೀತಿಸುವವರನ್ನು ಪ್ರೀತಿಸುತ್ತೇನೆ ಎಂದು ಹೇಳಲು ನಾಚಿಕೆ ಏಕೆ ? ನೀವೇ ಹೇಳಿದ್ದೀರಿ. ಪ್ರೇಮ ವಿವಾಹವನ್ನು ಪ್ರೋತ್ಸಾಹಿಸಬೇಕೆಂದು. ಹಾಗಂತ ವಿವಾಹವೇನೂ ನನಗೆ ಬೇಕಾಗಿಲ್ಲ. ಪ್ರೇಮವಾದರೆ ಅಷ್ಟು ಸಾಕು. ನಿಮ್ಮಂಥವರು ನನಗೆ ಪ್ರೇಮಿಯಾಗಿದ್ದರೆ ನನ್ನ ಬರವಣಿಗೆಗೆ ಸ್ಫೂರ್ತಿ. ನಿಮ್ಮ ಪ್ರೇಮಪತ್ರಕ್ಕಾಗಿ ನಿರೀಕ್ಷಿಸುತ್ತಿರುವ ನಿಮ್ಮ ಪ್ರೇಮಿ,

ಸರಯೂ

* * *

ಸರಯೂರವರೆ,

ನಿಮ್ಮ ಪತ್ರ ನೋಡಿದೆ. ನಿಮ್ಮ ಅಭಿಪ್ರಾಯಕ್ಕೆ ಅಭಿವಂದನೆ. ನಿಮ್ಮ ನೇರ ನಡೆ, ನುಡಿಗೆ ಆಶ್ಚರ್ಯಪಟ್ಟೆನಾದರೂ ಸ್ವಾಗತಿಸಿದೆ. ನಿಜ ಹೇಳಲೇ ಸರಯೂ. ನನ್ನ ಜೀವನದಲ್ಲಿ ನಿಮ್ಮನ್ನು ಪ್ರೀತಿಸುತ್ತೇನೆ ಎಂದು ಹೇಳಿ ಬಂದಿರುವ ಪ್ರಥಮ ಹೆಣ್ಣು ನೀವೇ. ನೀವು ನನ್ನನ್ನು ಫೋಟೋದಲ್ಲಾದರೂ ನೋಡಿದ್ದೀರಿ. ಆದರೆ ನಾನು ನಿಮ್ಮ ಹೆಸರೊಂದನ್ನು ಬಿಟ್ಟು ನಿಮ್ಮ ಬಗ್ಗೆ ನನಗೇನೂ ಗೊತ್ತಿಲ್ಲ. ಆದರೂ ನಿಮ್ಮ ಪ್ರೀತಿಗೆ ಸೋತು ನಾನೂ ನಿಮ್ಮನ್ನು ಪ್ರೀತಿಸುತ್ತೇನೆ ಎಂದು ಹೇಳಲೇಬೇಕಾಗಿದೆ. ಈ ಪತ್ರದ ವ್ಯವಹಾರವೇಕೆ, ಎಂದಾದರೂ, ಎಲ್ಲಿಯಾದರೂ ನಾವು ಯಾವ ಅಭ್ಯಂತರವಿಲ್ಲದಿದ್ದರೆ ಒಂದು ಸಾರಿ ಭೇಟಿಯಾಗಬಹುದಲ್ಲ, ಹೇಳಿ, ಎಂದು ಎಲ್ಲಿ ಭೇಟಿಯಾಗೋಣ ? ನಿಮ್ಮ ಮುದ್ದು ಮುಖಕ್ಕಾಗಿ ನಿರೀಕ್ಷಣೆಯಲ್ಲಿದ್ದೇನೆ. ಬರೀ ಪತ್ರ ವ್ಯವಹಾರದಲ್ಲೇ ಹೃದಯ ಕಳೆದುಕೊಂಡ ನಿಮ್ಮ ಪ್ರೇಮಿ,

ಉದಯ್

* * *

ಉದಯ್‌ರವರೆ,

ನಿಮ್ಮ ಪತ್ರ ಓದಿದೆ. ತುಂಬಾ ಸಂತೋಷಗೊಂಡೆ. ನಿಮ್ಮಂಥವರು ಅಪರೂಪ. ಮತ್ತೆಲ್ಲೂ ಸಿಗಲಾರರೇನೋ. ಸ್ತ್ರೀ ಕುಲವನ್ನೇ ಬೆಳಗಲು ಬಂದಿರುವ ಅವತಾರ ಪುರುಷ. ನಿಮ್ಮನ್ನು ಏನೆಂದು ಬಣ್ಣಿಸಲಿ ? ಸ್ತ್ರೀ ಕುಲೋದ್ಧಾರಕನೆನ್ನಲೇ ? ಆದರ್ಶವಾದಿಯೆನ್ನಲೇ ? ಬೂದಿ ಮುಚ್ಚಿದ ಕೆಂಡವೆನ್ನಲೇ ? ಆದರ್ಶದ ನೆಪದಲ್ಲಿ ತೀಟೆ ತೀರಿಸಿಕೊಳ್ಳುವ ಸೋಗುಗಾರನೆನ್ನಲೇ ? ಅಬ್ಬಾ ! ಎಂಥ ಮನುಷ್ಯರು ನೀವು. ನಿಮ್ಮದು ಒಂದು ಒಳ್ಳೆಯ ಫೋಟೋ ಇದ್ದರೆ ಕಳುಹಿಸಿಕೊಡಿ, ಪೂಜಿಸುತ್ತೇನೆ. ಪತ್ರಿಕೆಯಲ್ಲಿ ಬರೆಯುವುದೆಂದರೆ ಏನೆಂದುಕೊಂಡಿದ್ದೀರಿ ? ಏನೋ ಗೀಚಿ ಶಹಬ್ಬಾಸ್ ಗಿಟ್ಟಿಸುವುದೇ ? ದೊಡ್ಡ ಪತ್ರಿಕೆಯಲ್ಲಿ ಹೆಸರು ಬರುವಂತೆ ಮಾಡಿ ದೊಡ್ಡ ಮನುಷ್ಯನೆನ್ನಿಸಿಕೊಳ್ಳುವುದೇ ? ದಯವಿಟ್ಟು ಇನ್ನು ಮೇಲೆ ಆ ರೀತಿ ಬರೆಯುವುದನ್ನು ನಿಲ್ಲಿಸಿಬಿಡಿ. ಆ ಪತ್ರಿಕೆಗೂ, ಆ ಲೇಖನಿಗೂ ಯಾಕೆ ಅಪಮಾನ ಮಾಡುತ್ತೀರಿ ?

ಏನೊಂದೂ ವಿಷಯವನ್ನು ತಿಳಿಸದೆ ಯಾಕೆ ಇಷ್ಟೊಂದು ಕಟುವಾಗಿ ಬರೆಯುತ್ತಿದ್ದೇನೆಂದು ಆಶ್ಚರ್ಯವಾಗುತ್ತಿರಬೇಕಲ್ಲ ? ನಾನು ಸರಳಾ. ನಿಮಗೊಂದು ಮೊದಲ ಪತ್ರ ಬರೆದೆ. ಮದುವೆಯಾಗಿ ಅಂತ. ನೀವು ಮರಳಿ ಉತ್ತರಿಸಿದ್ದೇನು ? ಲೇಖನ ಬರೆಯುವುದು ಸರಳ. ಅದನ್ನು ಕೃತಿಯಲ್ಲಿ ತರುವುದು ಕಷ್ಟ ಅಂತ. ಹೌದಾ ? ನಿಮ್ಮ ಜೀವನ ದುಃಖಾಂತ್ಯವಾಗುತ್ತದೆ. ಪಶ್ಚಾತ್ತಾಪ ಪಡುವ ಸಂದರ್ಭ ಬರುತ್ತದೆ. ನಾನು ಕೆಳಸ್ತರದವಳೆಂದು ಅದೆಷ್ಟು ನಯವಾಗಿ ನನ್ನನ್ನು ತಿರಸ್ಕರಿಸಿದಿರಿ. ಎಂತಹ ನಯವಾದ ಕೊಲೆ !

ಸರಯೂಳ ಪತ್ರ ಬಂತು. ಪ್ರೀತಿಸುತ್ತೇನೆ ಅಂತ. ನಿಮ್ಮ ಜೀವನದ ಮೊದಲ ಪ್ರೇಮಿಯನ್ನು ತಿರಸ್ಕರಿಸಿದಿರಾ ? ಇಲ್ಲ, ಪ್ರೀತಿಸುತ್ತೇನೆ ಅಂತ ಹೇಳಿದಿರಿ. ಬದಲಾಗಿ ಜಾತಿ, ಮತ, ಪಂಥ ಏನೊಂದೂ ವಿಚಾರಿಸಲಿಲ್ಲ, ನಿಮ್ಮರ್ಥದಲ್ಲಿ ಮದುವೆಗಷ್ಟೇ ಜಾತಿ ಬೇಕು, ಪ್ರೀತಿಸುವುದಕ್ಕಲ್ಲ. ಮದುವೆಯಾದರೆ ನಿಮ್ಮ ತಂಗಿಯರ ಭವಿಷ್ಯ ಹಾಳಾಗುತ್ತದೆ. ಪ್ರೀತಿಸಿದರೆ ಹಾಳಾಗುವುದಿಲ್ಲ ಅಲ್ಲಾ ? ಪತ್ರ ವ್ಯವಹಾರ ಬಿಟ್ಟು ಭೇಟಿಯಾಗಬೇಕಲ್ಲ, ಬನ್ನಿ, ಎಲ್ಲಿ ಸಿಗೋಣ ? ಏಕೆಂದರೆ ಸರಯೂ ನಾನೇ. ಸರಳಾನೂ ನಾನೇ. ಆಶ್ಚರ್ಯವಾಗಿತ್ತದೆಯಾ ? ನಿಮ್ಮ ಆದರ್ಶ ಪರೀಕ್ಷಿಸಲೆಂದು ಈ ರೀತಿ ಎರಡು ಹೆಸರಿನಲ್ಲಿ ಪತ್ರ ಬರೆದೆ. ಬಣ್ಣದ ಹುಳು ನನ್ನ ಪರೀಕ್ಷೆಯಲ್ಲಿ ಸೋತಿತು.

ಅಬ್ಬಬ್ಬಾ ! ಎಂತಹ ಪ್ರೇಮಿ ನೀವು. ಮೊದಲ ಪತ್ರದಲ್ಲಿಯೇ ಹೃದಯ ಕಳೆದುಕೊಂಡಿರಿ. ಇನ್ನು ನನ್ನನ್ನು ನೋಡಿದ್ದರೆ ಜೀವವನ್ನೇ ಕಳೆದುಕೊಳ್ಳುತ್ತಿದ್ದೀರೇನೋ. ಎಂತಹ ಕೀಳುಬುದ್ಧಿ ನಿಮ್ಮದು. ಪ್ರೀತಿಸಿದವಳು ನಾಳೆ ಮದುವೆಗೆ ಒತ್ತಾಯಿಸಬಹುದೆಂದು ನಿಮಗೆ ವಿಚಾರ ಬರಲಿಲ್ಲವೇ ? ಹಾಗೆ ಕೇಳಿದ್ದರೆ, ಸಂಪ್ರದಾಯದ ಹೆಸರಿನಲ್ಲಿ ಪ್ರೀತಿಸಿದವಳಿಗೂ ಮೋಸ ಮಾಡುತ್ತೀರಾ ? ಅಥವಾ ಮದುವೆ ಮಾಡಿಕೊಂಡು ಪ್ರೀತಿಸಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುತ್ತಿದ್ದಿರಾ ? ಯಾವುದೇ ವಿಷಯವನ್ನು ಉಪದೇಶ ಮಾಡುವುದಕ್ಕಿಂತ ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಮುಖ್ಯ. ಲೇಖನ ಬರೆದು ಸಮಾಜದಲ್ಲಿ ದೊಡ್ಡವರಾಗಿರಬಹುದು. ನನಗೆ ಪತ್ರ ಬರೆದು ನನ್ನ ಮುಂದೆ ಚಿಕ್ಕವರಾದಿರಿ. ನಿಮ್ಮ ಅಯೋಗ್ಯ ಕೆಲಸ ನಿಲ್ಲಿಸಿ. ಇನ್ನೊಮ್ಮೆ ಇಂತಹ ಲೇಖನ ಬರೆಯುವ ಮೂರ್ಖ ಕೆಲಸ ಮಾಡಬೇಡಿ.

ಮೊದಲ ಪತ್ರದಲ್ಲಿಯೇ ಕಳೆದುಕೊಂಡ ನಿಮ್ಮ ಹೃದಯವನ್ನು ಮರಳಿಸುತ್ತಿರುವ ನಿಮ್ಮ,

ಸರಯೂ (ಸರಳಾ)

* * *

ಅಂದಿನಿಂದ ಅವನ ಬರವಣಿಗೆ ನಿಂತಿತು. ಯಾವುದನ್ನೂ ವಿಚಾರ ಮಾಡುತ್ತಿಲ್ಲ. ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗದಾದಾಗ ಉಪದೇಶ ಮಾಡುವುದನ್ನು ಬಿಡಬೇಕು ಎಂದು ಅವನು ನಿರ್ಧರಿಸಿದ್ದ.

**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ
ಕೈಗಾರಿಕಾ ತರಬೇತಿ ಸಂಸ್ಥೆ, ಮಂಡಲಗಿರಿ – ೫೮೩ ೨೩೧
ತಾ: ಯಲಬುರ್ಗಾ, ಜಿ: ಕೊಪ್ಪಳ

## ಪ್ರಾರ್ಥನೆ

ಓ ದೇವರೇ
ನೀನು ಕರುಣಾಮಯಿಯಂತೆ
ಹಾಗಿದ್ದರೆ
ಮನುಷ್ಯನ ಹೃದಯದಲ್ಲೇಕೆ
ಅಷ್ಟೊಂದು ದ್ವೇಷವನ್ನು
ಹುದುಗಿಸಿಟ್ಟಿರುವೆ ?



ಓ ದೇವರೇ
ನಿನ್ನ ಸೀಮೆಗಳು ಅನಂತವಂತೆ
ಹಾಗಿದ್ದರೆ
ಮನುಷ್ಯನ ಹೃದಯವನ್ನೇಕೆ
ಅಷ್ಟು ಸಂಕುಚಿತ ಮಾಡಿದೆ ?

ಓ ದೇವರೇ
ನೀನು ಅನಾಥರಕ್ಷಕನಂತೆ
ಹಾಗಿದ್ದರೆ
ಗಾದಿಯ ಭಕ್ಷಣೆಗೆ ಒಳಗಾದ
ನರಜೀವಿಗಳೆಲ್ಲ
ನಿನ್ನ ಕಟಾಕ್ಷಕ್ಕೆ ಬೀಳಲೇ ಇಲ್ಲವೇ ?

ಓ ದೇವರೇ
ಧರ್ಮ ದೇವರು ಜಾತಿ
ಎಲ್ಲವನು ಕಿತ್ತೆಸೆದು
ಸ್ನೇಹ ಸಾಮರಸ್ಯವ ಮಿಡಿವ
ಹೃದಯಗಳ ನೀನಿಲ್ಲಿ ಹುಟ್ಟಿಸು
ಉರಿಯುತಿದೆ ನನ್ನ ದೇಶ
ಬಿಗಿಯುತಿದೆ ಕರಾಳ ಪಾಶ
ಹಿಂದೂ ಮುಸ್ಲಿಂ ಸಿಖ್ ಪಾರ್ಸಿಗಳನೆಲ್ಲ
ಧ್ಯಾನಸ್ಥ ಮೌನದಲಿ ನೀ ಬಂಧಿಸು
ಬುದ್ಧ ಗಾಂಧೀಜಿಗೆ ನೀನೊಮ್ಮೆ ವಂದಿಸು.

**ಎಸ್. ಮಾಲತಿ**
ಮಹಾಳಸ ನಿಲಯ, ಜೋಗ್ ರಸ್ತೆ, ಸಾಗರ - ೫೭೭೪೦೧

# ಓದುವುದು ಅನಿವಾರ್ಯ ಚಟವಾಗಬೇಕು

**ಸಮಾಜದಲ್ಲಿ ಒಳ್ಳೆಯ ಓದು ಕಡಿಮೆಯಾದಂತೆ ವೈಚಾರಿಕತೆ ಬತ್ತತೊಡಗುತ್ತದೆ. ಪರಿಣಾಮವಾಗಿ ಮೌಢ್ಯವೇ ಮೌಲ್ಯವಾಗಿ ಮೆರೆಯತೊಡಗುತ್ತದೆ. ಓದಿನ ಕೊರತೆ ನಮ್ಮನ್ನು ಅವಿಧೇಯ ಹಾಗೂ ಅನಾಗರಿಕ ಪ್ರಜೆಗಳನ್ನಾಗಿ ಮಾಡಬಲ್ಲುದು. ಅಂಥಾ ಸಮಾಜಗಳು ಪಶುಸದೃಶವಾಗುತ್ತವೆ. ಒಂದು ಉತ್ತಮ ಕೃತಿಯನ್ನು ಓದುವುದೆಂದರೆ ಆ ಲೇಖಕನೊಂದಿಗೆ ಸಂವೇದನೆಗಳನ್ನು ಹಂಚಿಕೊಂಡಂತೆ. ಉತ್ತಮ ಕೃತಿಗಳು ಬಹು ಅಮೂಲ್ಯವಾದ ಆಸ್ತಿ. ಅವು ಕೇವಲ ಓದುಗರ ವ್ಯಕ್ತಿತ್ವವನ್ನು ಮಾತ್ರ ರೂಪಿಸದೇ ಅವರಿಂದ ಅನೇಕ ವ್ಯಕ್ತಿತ್ವಗಳು ರೂಪುಗೊಳ್ಳಲು ನೆರವಾಗುತ್ತವೆ. ಓದುವ ಗುಣವನ್ನು ಒಂದು ಅವಶ್ಯಕವಾದ ಚಟವನ್ನಾಗಿ ಬೆಳೆಸುವ ಅನಿವಾರ್ಯತೆ ಇದೆ.**

**ಎಸ್. ಬಿ. ಜೋಗುರ**

ಅವರಿಬ್ಬರೂ ಸ್ನೇಹಿತರು. ಅವರಲ್ಲಿ ಒಬ್ಬಾತನಿಗೆ ಸಾಹಿತ್ಯದಲ್ಲಿ ತುಂಬಾ ಆಸಕ್ತಿ, ಇನ್ನೊಬ್ಬನಿಗೆ ಸಾಹಿತ್ಯವೆಂಬುದು ಅಲರ್ಜಿ. ಸಾಹಿತ್ಯಾಸಕ್ತ ಒಂದು ಕವನ ಸಂಕಲನವನ್ನು ಪ್ರಕಟಿಸಿದ. ಅದನ್ನು ಕೊಂಡು ಓದುವವರು ಇಲ್ಲವೆಂದು ಖಾತ್ರಿಯಾದಾಗ 'ಸ್ನೇಹಪೂರ್ವಕವಾಗಿ', 'ಗೌರವಪೂರ್ವಕವಾಗಿ' ಎಂದು ಗೆಳೆಯರಿಗೆ ಅರ್ಪಿಸಿಯೇ ಒಂದಷ್ಟು ಪ್ರತಿಗಳನ್ನು ಖಾಲಿಮಾಡಿದ. ಪುಕ್ಕಟೆ ಪ್ರತಿ ಪಡೆದಿದ್ದರೂ ಯಾರೂ ಪ್ರತಿಕ್ರಿಯಿಸಲಿಲ್ಲ. ಪಾಪ ! ಸಮಯ ಒದಗಿ ಬಂದಿರಲಿಕ್ಕಿಲ್ಲ ಎಂದು ಲೇಖಕ ಸಮಾಧಾನಪಟ್ಟ, ತನ್ನ ಆತ್ಮೀಯ ಸ್ನೇಹಿತನೊಬ್ಬ ಮನೆಗೆ ಬಂದ. ಅವನಿಗೂ ಒಂದು ಪ್ರತಿಯನ್ನು ಸಮರ್ಪಿಸಿದ. ಆತ ಚಹಾ ಕುಡಿದು ಅರ್ಧ ಗಂಟೆಗೂ ಮಿಕ್ಕಿ ಹರಟೆ ಹೊಡೆದು ಹೋಗುವಾಗ ಆ ಕೃತಿಯನ್ನು ಮಾತ್ರ ಅಲ್ಲಿಯೇ ಬಿಟ್ಟು ಹೊರಟ. ಲೇಖಕನಿಗೆ ತುಂಬಾ ನಿರಾಶೆಯಾಯಿತು. ಬಹುಶಃ ಮರೆತು ಹೋಗಿರಬಹುದೆಂದು ಸಮಾಧಾನಮಾಡಿಕೊಂಡು ಅವನ ಮನೆಗೆ ತೆರಳಿದ. ''ಏನು ಮಾರಾಯಾ, ನಿನಗೆ ನನ್ನ ಕವನ ಸಂಕಲನ ಕೊಟ್ಟಿದ್ದೆ. ನೀನು ಹಾಗೆಯೇ ಮರೆತು ಬಂದಿರುವೆಯಲ್ಲ!'' ಎಂದಾಗ, ಆತ ''ಇಲ್ಲ ಇಲ್ಲ ನನಗೆ ನೆನಪಿತ್ತು. ಆದರೆ ಓದಲಿಕ್ಕೆ ಸಮಯವಿಲ್ಲವೆ ?'' ಎಂದ. ಇದು ನಮ್ಮ ಬಹುತೇಕ ಜನರಾಡೋ ಮಾತು. ತಮ್ಮ ಎಲ್ಲಾ ಚಟುವಟಿಕೆಗಳಿಗೆ ಸಮಯವನ್ನು ಒದಗಿಸಿಕೊಳ್ಳುವ ಈ ಜನರಿಗೆ ಜ್ಞಾನಾರ್ಜನೆಗೆ ಎಡೆಮಾಡುವ ಗ್ರಂಥಗಳ ಅಧ್ಯಯನಕ್ಕೆ, ಓದಿಗೆ ಮಾತ್ರ ಪುರುಸೊತ್ತಿಲ್ಲ !

ಈಚೆಗೆ ತುಮಕೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿ ಮಾತನಾಡುತ್ತಿದ್ದ ಅನೇಕ ಸಾಹಿತಿಗಳ ಕೊರಗು ಇದಾಗಿತ್ತು. ನಮ್ಮಲ್ಲಿ ಪುಸ್ತಕ ಕೊಂಡು ಓದುವವರ ಸಂಖ್ಯೆ ಕಡಿಮೆ. ಒಟ್ಟನಲ್ಲಿ ಈಗೀಗ ಓದುವವರ ಪ್ರಮಾಣವೇ ದಿನೇ ದಿನೇ ಕಡಿಮೆಯಾಗುತ್ತಿದೆ ಎಂಬ ಇನ್ನೊಂದು ಮಾತು ಆಗಾಗ ಇಂಥಾ ಸಾಹಿತ್ಯ ಸಂದರ್ಭದ ವೇದಿಕೆಗಳಲ್ಲಿ ಕೇಳಿಬರುತ್ತಿದೆ. ನೆರೆಯ ಕೇರಳ, ಮಹಾರಾಷ್ಟ್ರಗಳೊಂದಿಗೆ ಹೋಲಿಸಿ ನೋಡಿದಾಗ ಈ ಮಾತು ಹೌದೆನಿಸುತ್ತದೆ. ಕೇರಳದಲ್ಲಿ ತೀರಾ ಕಡಿಮೆ ದರ್ಜೆಯ ಜೀವನಮಟ್ಟವನ್ನು ಹೊಂದಿರುವಾತನೂ 'ಮಲೆಯಾಳ ಮನೋರಮಾ' ದಂತಹ ಒಂದು ಪತ್ರಿಕೆಯನ್ನು ಕೊಂಡು ಓದುತ್ತಾನೆ. ಅಷ್ಟೇ ಅಲ್ಲದೆ ಪ್ರಾದೇಶಿಕ ಭಾಷೆಯ ಪತ್ರಿಕೆ ಹಾಗೂ ಪುಸ್ತಕಗಳಿಗೆ ಪ್ರಥಮ ಪ್ರಾಶಸ್ತ್ಯ ನೀಡುತ್ತಾನೆ. ನಮ್ಮ ರಾಜ್ಯದ ಪರಿಸ್ಥಿತಿ ಬೇರೆಯೇ ಆಗಿದೆ. ಆರ್ಥಿಕವಾಗಿ ಸ್ಥಿತಿವಂತರಾದವರು ಕೂಡ ಇನ್ನೊಬ್ಬರಿಂದ ಎರವಲು ಪಡೆದು ಪತ್ರಿಕೆ ಓದುತ್ತಾರೆ. ಹೀಗೆ ಬಿಟ್ಟಿ ಪೇಪರ್ ಓದುವವರ ಭಯದಿಂದಲೇ ಕೆಲವರು ಪತ್ರಿಕೆ ತರಿಸುವುದನ್ನೇ ಬಿಟ್ಟ ಉದಾಹರಣೆಗಳಿವೆ ! ಇನ್ನು ಸಾರಿಗೆ ಸಂಸ್ಥೆಯ ವಾಹನಗಳಲ್ಲಿ ಪ್ರಯಾಣ ಮಾಡುವಾಗಲಂತೂ ನೀವು ಪೇಪರ್ ಖರೀದಿಸಿದರೆ ಅದೊಂದು 'ಪಬ್ಲಿಕ್ ಪ್ರಾಪರ್ಟಿ' ಎಂಬಂತಾಗುತ್ತದೆ. 'ಸರ್, ಸ್ವಲ್ಪ ಪೇಪರ್ ಕೊಡಿ' ಎಂದು ಕೇಳುವವರನ್ನು ಕಂಡರೆ ಅಸಹ್ಯವೆನಿಸುತ್ತದೆ. ಪ್ರತಿಯೊಂದು ನಿಲ್ದಾಣದಲ್ಲಿಯೂ ಎರಡೆರಡು ಸಿಗರೇಟು ಸುಡುವ ಈ ಮಹಾನುಭಾವರು ಬಿಟ್ಟ ಪತ್ರಿಕೆಯನ್ನು ಓದುವಲ್ಲಿ ಅದೇನು ಮಜಾ ಅನುಭವಿಸುತ್ತಾರೋ ತಿಳಿಯದು !

ಬಹುವಾಗಿ ಪಾಶ್ಚಿಮಾತ್ಯರಲ್ಲಿ ಈ ಪ್ರವೃತ್ತಿಯಿಲ್ಲ. ಅವರು ಎಲ್ಲಿಯೇ ಪ್ರಯಾಣ ಮಾಡಲಿ, ಜೊತೆಯಲ್ಲಿ ಅವರ ಅವಶ್ಯಕ ಸಾಮಗ್ರಿಗಳ ಪೈಕಿ ಪುಸ್ತಕವೂ ಒಂದು. ನಮ್ಮ ಜನ ಮಿಕ್ಕ ಎಲ್ಲಾ ಪಾಶ್ಚಾತ್ಯರ ಸಂಸ್ಕೃತಿಯನ್ನು ಅನುಕರಣೆ ಮಾಡುತ್ತಾರೆ. ಆದರೆ ಆ ಗುಣವನ್ನೇಕೆ ಅನುಕರಣೆ ಮಾಡಬಾರದು ? ಇಂದಿನ ಯುವಪೀಳಿಗೆಯಂತೂ ಓದುವುದು ಬಿಡಿ, ಓದುವವರನ್ನು ಕಂಡರೂ ಸಹಿಸುವುದಿಲ್ಲ. ಓದು ಒಂದು ಪರಂಪರೆಯಂತೆ ಸಾಗಿಬರಬೇಕಿತ್ತು. ಹಾಗಾಗದಿರುವಲ್ಲಿ ಈಗಿನ ಮಸಾಲಾ ಟಿ.ವಿ. ಚಾನೆಲ್‌ಗಳೂ ಕಾರಣವಾಗಿರಬಹುದು.

ನವಕರ್ನಾಟಕ ಪುಸ್ತಕ ಪ್ರಕಾಶನದವರು ರಾಜ್ಯದ ಅನೇಕ ಕಡೆಗಳಲ್ಲಿ ಮಳಿಗೆಗಳನ್ನು ತೆರೆದಿದ್ದಾರೆ. ಹಾಗೆಯೇ, ಸಂಚಾರಿ ಮಳಿಗೆಗಳನ್ನು ಕೂಡಾ ತೆರೆಯುತ್ತಾರೆ. ಈಚೆಗೆ ಅವರು ಅಂಕೋಲಾದಲ್ಲಿ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ಏರ್ಪಡಿಸಿದ್ದರು. ಪ್ರಾರಂಭದ ಒಂದು ವಾರ ಸ್ವಲ್ಪ ಮಾರಾಟವಾಯಿತು. ನಂತರದ ದಿನಗಳಲ್ಲಿ ಆ ಮಳಿಗೆಯವರೇ ಓದುತ್ತಾ ಕುಳಿತುಕೊಳ್ಳಬೇಕಾಯಿತು. ಎಲ್ಲಿಯೇ ಪುಸ್ತಕ ಪ್ರದರ್ಶನ ಹಾಗೂ ಮಾರಾಟವಿರಲಿ ಅಲ್ಲಿಗೆ ಬರುವವರು ಮೊಟ್ಟಮೊದಲು ಒಂದು ಪುಸ್ತಕವನ್ನು ಕೈಗೆತ್ತಿಕೊಂಡರೆ ನೋಡುವುದು ಅದರ ಬೆಲೆಯನ್ನು. ಎಲ್ಲೋ ಕೆಲವರು ಅದರ ಪರಿವಿಡಿ ಹಾಗೂ ವಿಷಯವಸ್ತು, ಲೇಖಕರ ಹೆಸರು ನೋಡಿ ಕೊಂಡುಕೊಳ್ಳಬಹುದು. ಇದನ್ನು ನಮ್ಮ ಪುಸ್ತಕ ಪ್ರಕಾಶಕರು, ಮಾರಾಟಗಾರರು, ಲೇಖಕರು ತುಂಬಾ ಗಂಭೀರವಾಗಿ ಪರಿಗಣಿಸಬೇಕು. ಯಾಕೆಂದರೆ, ಒಬ್ಬ ಓದುಗನಿಗೆ ಒಂದು ಪುಸ್ತಕ ಇಷ್ಟವಾಗಿ ಅದರ ಬೆಲೆ ಭರಿಸುವುದು ಕಷ್ಟವಾದಾಗ ಆತ ಅದನ್ನು ಕೊಳ್ಳುವ ಆಶೆಯನ್ನು ಕೈಬಿಡುತ್ತಾನೆ. ಇನ್ನು ಹೀಗೆ ಯಾವುದೋ ಒಂದು ಪುಸ್ತಕದ ಬೆಲೆ ದುಬಾರಿಯಾಗಿರುವಲ್ಲಿ ಅತಿಮುಖ್ಯವಾದ ಕಾರಣಗಳೆಂದರೆ ಬಳಸಿದ ಸಾಮಗ್ರಿಗಳ ಮಟ್ಟ ಮುಖಪುಟ ವಿನ್ಯಾಸಕ್ಕೆ ತಗುಲಿದ ವೆಚ್ಚ, ಲೇಖಕನ ಜನಪ್ರಿಯತೆ ಮುಂತಾದವುಗಳು ಕಾರಣವಾಗಬಹುದು. ಪುಸ್ತಕಗಳನ್ನು ಕೊಂಡು ಓದುವ ಅಭಿರುಚಿಯನ್ನು ಬೆಳೆಸಿಕೊಂಡವರು ನೀವು ಬಳಸಿದ ಸಾಮಗ್ರಿಗಳ ಶ್ರೇಷ್ಠತೆ, ಆಕರ್ಷಣೀಯ ರಕ್ಷಾಪುಟ ಇದಾವುದರ ಬಗ್ಗೆಯೂ ಲಕ್ಷ್ಯ ವಹಿಸುವುದಿಲ್ಲ. ಆತನಿಗೆ ಮುಖ್ಯವಾಗಿ ಬೇಕಾಗಿರುವುದು ವಿಷಯವಸ್ತು. ಅದರೆಡೆಗೆ ಮಾತ್ರ ಅವನ ದೃಷ್ಟಿ ಕೇಂದ್ರಿತವಾಗಿರುತ್ತದೆ. ತೀರಾ ಸೀದಾ ಸಾದಾ ಮುಖಪುಟ ರೂಪಿಸಿ, ಮಧ್ಯಮ ವರ್ಗದ ಸಾಮಗ್ರಿಗಳನ್ನು ಬಳಸಿ ಇದ್ದದ್ದರಲ್ಲಿಯೇ ಅಚ್ಚುಕಟ್ಟುತನ ಕಾಯ್ದುಕೊಂಡು ಕಡಿಮೆ ಬೆಲೆಯನ್ನು ನಿಗದಿ ಮಾಡಿದ್ದೇಯಾದರೆ ಹೆಚ್ಚು ಓದುಗರು ದೊರೆಯಬಹುದು. ಕೆಲ ಲೇಖಕರ ಕೃತಿಗಳನ್ನು ಕೈಗೆತ್ತಿಕೊಳ್ಳಲು ಕೂಡಾ ಹೆದರಿಕೆಯಾಗುತ್ತದೆ.

ಜನಪ್ರಿಯ ಸಾಹಿತಿಗಳೆಂದು ಗುರುತಿಸಿಕೊಂಡಿರುವವರ ಕೃತಿಗಳ ಬೆಲೆ ಕಡಿಮೆಯಿರಬೇಕು, ಆದರೆ ಹಾಗಾಗುವುದಿಲ್ಲ, ಮಿಕ್ಕವರಿಗಿಂತಲೂ ಅವರ ಕೃತಿಗಳ ದರ ದುಪ್ಪಟ್ಟಾಗಿರುತ್ತದೆ. ಜನಪ್ರಿಯ ಸಾಹಿತಿಗಳಿಗೆ ಒಂದು ಮಾರುಕಟ್ಟೆಯಿದೆ. ಮಾರಾಟಕ್ಕಾಗಿ ಅವರು ಕರುಬಬೇಕಿಲ್ಲ, ಇನ್ನು ಹೊಸದಾಗಿ ಬರೆಯುವವರು ಮಾರುಕಟ್ಟೆಗಾಗಿ ಪೇಚಾಡಬೇಕಾಗದು. ಹೀಗಿದ್ದಾಗ ಕೆಲ ಶ್ರೇಷ್ಠ ಸಾಹಿತಿಗಳು ತಮ್ಮ ಕೃತಿಗಳು ಕಡಿಮೆ ಬೆಲೆಗೆ ದೊರೆಯುವಂತೆ ಮಾಡಬೇಕು. ಇದರಿಂದ ಅವರ ಸಾಹಿತ್ಯ ಸೃಷ್ಟಿ ಕಳಪೆ ಆಗುವುದಿಲ್ಲ, ಬದಲಾಗಿ ಸಾಮಾನ್ಯನಿಗೂ ಶ್ರೇಷ್ಠ ಸಾಹಿತ್ಯವನ್ನು ಕಡಿಮೆ ಬೆಲೆಗೆ ಒದಗಿಸಿದಂತಾಗುವುದು. ಬೇಕಾದರೆ ಸರಕಾರವೇ ಅಂಥಾ ಕೆಲಸ ಮಾಡಲಿ. ಈಚೆಗೆ ಕನ್ನಡ ಸಂಸ್ಕೃತಿ ನಿರ್ದೇಶನಾಲಯದವರು ನಟರಾಜ ಹುಳಿಯಾರರ ಸಂಪಾದಕತ್ವದಲ್ಲಿ ಹೊರತಂದ ಲೋಹಿಯಾ ಸಂಪುಟಗಳೇ ಅತ್ಯುತ್ತಮ ಮಾದರಿ. ಬೆಲೆ ಹಾಗೂ ಗುಣಮಟ್ಟಗಳೆರಡರಲ್ಲೂ ಆ ಸಂಪುಟಗಳು ಶ್ರೇಷ್ಠವಾಗಿವೆ.

ಗ್ರಂಥಗಳ ಬೆಲೆ ಯಾವ ರೀತಿಯಲ್ಲಿ ಓದುಗರ ಮೇಲೆ ಪ್ರಭಾವ ಬೀರುತ್ತ ಎಂಬುದನ್ನು ಸ್ವತಃ ನನ್ನನ್ನೇ ಅನ್ವಯಿಸಿಕೊಂಡು ಉದಾಹರಿಸುತ್ತಿರುವೆ. ಇತ್ತೀಚೆಗೆ ಒಂದು ಕನ್ನಡ ಪುಸ್ತಕ ಮಳಿಗೆಗೆ ಹೋಗಿದ್ದೆ. ಕೆಲ ಗ್ರಂಥಗಳು ಇಷ್ಟವಾದವು. ಆದರೆ ಅವುಗಳ ಬೆಲೆ ಮಾತ್ರ ಹೊರಲಿಕ್ಕಾಗದು ಎಂದು ಕೈ ಬಿಟ್ಟೆ. ಜಗತ್ತಿನ ಕೆಲ ಕಥೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿದ ಒಂದು ಗ್ರಂಥವಿತ್ತು. ಸುಮಾರು ೧೦೦ ಪುಟಗಳ ಒಳಗಿರುವ ಆ ಪುಸ್ತಕದ ಬೆಲೆ ೧೦೦ ರೂಪಾಯಿ. ಆ ಕೃತಿಯೇನೋ ನನಗೆ ಹಿಡಿಸಿತು. ಆದರೆ ಬೆಲೆ ! ನಾನು ತಂದ ಗ್ರಂಥಗಳನ್ನು ಹೆಸರಿಸಿದರೆ ನನ್ನಂಥ ಮಧ್ಯಮ ವರ್ಗದ ಓದುಗನ ಆಯ್ಕೆ ಏನಾಗಿರುತ್ತದೆ ಎಂಬುದನ್ನು ಇಲ್ಲಿ ವಿವರಿಸಬೇಕಿಲ್ಲ.

ಕನ್ನಡ ಪುಸ್ತಕ ಪ್ರಾಧಿಕಾರದವರು ಪ್ರಕಟಿಸಿದ 'ಶಂಭಾ ಜೋಶಿಯವರ ಆಯ್ದ ಲೇಖನಗಳು' ಪುಟಗಳು ೩೫೫, ಬೆಲೆ ೫೫ ರೂಪಾಯಿ. ನ್ಯಾಶನಲ್ ಬುಕ್‌ಟ್ರಸ್ಟ್‌ದವರು ಪ್ರಕಟಿಸಿದ 'ಭಾರತೀಯ ಜನಪದ ಕತೆಗಳು' ಪುಟಗಳು ೩೮೮, ಬೆಲೆ ೬೦ ರೂಪಾಯಿ. ಹಾಗೆಯೇ ರಾದುಗಾ ಪ್ರಕಾಶನದ 'ಚೆಕಾವ್‌ರ ಕಥೆಗಳು' ಪುಟಗಳು ೪೩೦, ಬೆಲೆ ೭೦ ರೂಪಾಯಿ. ಪುಸ್ತಕದ ಬೆಲೆ ಕಡಿಮೆಯಿರುವುದರಿಂದಾಗಿ ರಷ್ಯಾದ ಲೇಖಕನೊಬ್ಬ ನನಗೆ ಹತ್ತಿರವಾದ. ಬೆಲೆಯ ಭಾರದಿಂದ ನಮ್ಮ ಸಾಹಿತಿಗಳೇ ನಮಗೆ ಬೇಡವಾಗಬಹುದು. ಪುಸ್ತಕ ಪ್ರಕಟಣೆಯೆಂಬುದು ತೀರಾ ಸಾಹಸದ ಕಾರ್ಯ ಎಂಬುದು ನನಗೂ ತಿಳಿದಿದೆ. ಹಾಗೆಂದು ಓದುಗ ಭಯಗ್ರಸ್ಥನಾಗುವ ಹಾಗೆ ಬೆಲೆ ಇಡುವಲ್ಲಿ ಯಾವ ಸಾರ್ಥಕ್ಯವೂ ಇಲ್ಲ. ಕೆಲ ಶ್ರೇಷ್ಠ ಇಂಗ್ಲಿಷ್ ಲೇಖಕರ ಕೃತಿಗಳಂತೂ ಜನಸಾಮಾನ್ಯನಿಗೆ ಗಗನ ಕುಸುಮವೇ ಹೌದು. ಆರ್. ಕೆ. ನಾರಾಯಣ್, ಖುಶ್ವಂತ ಸಿಂಗ್, ಅರುಂಧತಿ ರಾಯ್, ಅಮಿತಾಭ್ ಘೋಷ್, ನೈಪಾಲ್ ಇವರ ಶ್ರೇಷ್ಠ ವಿಚಾರಗಳು ಸಾಮಾನ್ಯನಿಗೆ ತಲುಪುವಲ್ಲಿ ಬೆಲೆಗಳು ಅಡ್ಡಿಯಾಗುತ್ತಿವೆ. ಜಾಗತೀಕರಣದ ಪ್ರಭಾವ ಈ ಪುಸ್ತಕ ಪ್ರಕಾಶನದ ಮೇಲೆ ಉಂಟಾಗಿದೆ ಎಂಬುದು ಕೆಲ ಪ್ರಸಿದ್ಧ ಪ್ರಕಾಶನಗಳ ಪ್ರಕಟಣೆಗಳನ್ನು ನೋಡಿದಾಗ ಗೊತ್ತಾಗುತ್ತದೆ. ಪೆಂಗ್ವಿನ್ ಪ್ರಕಾಶನ ಸಂಸ್ಥೆಯ ಡೇವಿಡ್ ಈಚೆಗೆ ಬ್ಲೂ ಮ್ಯಾಂಗೋಸ್ ಎಂಬ ಗ್ರಂಥ ರಚಿಸಿ ಬಿಡುಗಡೆ ಮಾಡಿದರು. ಆ ಸಂದರ್ಭದಲ್ಲಿ ಅವರು ಲೇಖಕರಿಗೆ ನಾವು ಲಕ್ಷಾನುಗಟ್ಟಲೆ ಸಂಭಾವನೆ ಕೊಡುತ್ತೇವೆ ಎನ್ನುವಾಗಲೇ ಅವರ ಸಂಸ್ಥೆಯ ಪುಸ್ತಕಗಳನ್ನು ಓದುವವರ ಜೀವನಮಟ್ಟವನ್ನು ನಾನು ಕಲ್ಪಿಸಿಕೊಂಡೆ. ಹೀಗೆ ಪುಸ್ತಕ ಪ್ರಕಟಣ ಸಂಸ್ಥೆಗಳು ಓದುಗರ ಸಂಖ್ಯೆಯನ್ನು ಹೇಗಾದರೂ ಮಾಡಿ ಹೆಚ್ಚಿಸುವಲ್ಲಿ ಯತ್ನಿಸಬೇಕು ಎಂದು ನಾನು ಹೇಳಲು ಹೊರಟಿಲ್ಲ. ಬದಲಾಗಿ, ಸಾಧ್ಯವಾದಷ್ಟೂ ಬೆಲೆಯನ್ನು ಕಡಿಮೆ ಮಾಡುವ ಮೂಲಕ ಆ ದಿಶೆಯಲ್ಲಿ ನೆರವಾಗಬಹುದು. ಓದು ಹಾಗೂ ಬರಹಗಳೆರಡೂ ವ್ಯಕ್ತಿಯನ್ನು ಆರೋಗ್ಯಕರ ಸ್ಥಿತಿಯಲ್ಲಿಡುತ್ತವೆ. ನೊಬೆಲ್ ಪುರಸ್ಕೃತ ನೈಪಾಲರ ಹಸ್ತದಿಂದ ಜ್ಞಾನಪೀಠ ಪ್ರಶಸ್ತಿ ಸ್ವೀಕರಿಸಿದ ಇಂದಿರಾ ಗೋಸ್ವಾಮಿ ತಾನು ಇಂದಿಗೂ ಆರೋಗ್ಯಯುತವಾಗಿ ಬದುಕಿರಲು ತನ್ನ ಬರವಣಿಗೆಯೇ ಕಾರಣ ಎಂದು ಉವಾಚಿಸಿದರು.

ಸಮಾಜದಲ್ಲಿ ಒಳ್ಳೆಯ ಓದು ಕಡಿಮೆಯಾದಂತೆ ವೈಚಾರಿಕತೆ ಬತ್ತತೊಡಗುತ್ತದೆ. ಪರಿಣಾಮವಾಗಿ ಮೌಢ್ಯವೇ ಮೌಲ್ಯವಾಗಿ ಮೆರೆಯತೊಡಗುತ್ತದೆ. ಓದಿನ ಕೊರತೆ ನಮ್ಮನ್ನು ಅವಿಧೇಯ ಹಾಗೂ ಅನಾಗರಿಕ ಪ್ರಜೆಗಳನ್ನಾಗಿ ಮಾಡಬಲ್ಲುದು. ಅಂಥಾ ಸಮಾಜಗಳು ಪಶುಸದೃಶವಾಗುತ್ತವೆ. ಒಂದು ಉತ್ತಮ ಕೃತಿಯನ್ನು ಓದುವುದೆಂದರೆ ಆ ಲೇಖಕನೊಂದಿಗೆ ಸಂವೇದನೆಗಳನ್ನು ಹಂಚಿಕೊಂಡಂತೆ. ಉತ್ತಮ ಕೃತಿಗಳು ಬಹು ಅಮೂಲ್ಯವಾದ ಆಸ್ತಿ. ಅವು ಕೇವಲ ಓದುಗರ ವ್ಯಕ್ತಿತ್ವವನ್ನು ಮಾತ್ರ ರೂಪಿಸದೇ ಅವರಿಂದ ಅನೇಕ ವ್ಯಕ್ತಿತ್ವಗಳು ರೂಪುಗೊಳ್ಳಲು ನೆರವಾಗುತ್ತವೆ. ಓದುವ ಗುಣವನ್ನು ಒಂದು ಅವಶ್ಯಕವಾದ ಚಟವನ್ನಾಗಿ ಬೆಳೆಸುವ ಅನಿವಾರ್ಯತೆ ಇದೆ.

ಎಸ್. ಬಿ. ಚೋಗುರ
ಸಮಾಜಶಾಸ್ತ್ರದ ಉಪನ್ಯಾಸಕರು
ಪಿ. ಎಂ. ಪದವಿಪೂರ್ವ ಮಹಾವಿದ್ಯಾಲಯ, ಅಂಕೋಲಾ (ಉ.ಕ.)



ತೆಲುಗು ಮೂಲ : ಮಹಾಕವಿ ವಿಶ್ವನಾಥ ಸತ್ಯನಾರಾಯಣ



# ಜೀವೇಚ್ಛೆ

**ಒಂ**ದಾನೊಂದು ಸಮುದ್ರ. ಅದರ ಯಾವುದೋ ಮೂಲೆಯಲ್ಲೊಂದು ದ್ವೀಪ. ಹಡಗುಗಳನ್ನೇರಿ ಹುಡುಕಾಡಿದ ನಾಗರಿಕರ ಕಣ್ಣಿಗೆ ಅದು ಬಿದ್ದಿರಲಿಲ್ಲ. ಅವರು ಇಡೀ ಭೂಮಂಡಲವನ್ನು, ಸಮುದ್ರದ ನೀರಿನಿಂದೆದ್ದ ಪ್ರತಿ ಮಣ್ಣ ದಿಬ್ಬವನ್ನು ಸಾಧಿಸಿದೆವೆಂದುಕೊಂಡ ನಂತರ ಹೀಗೊಂದು ದ್ವೀಪವುಂಟೆಂದು ತಿಳಿಯಲು ಕೆಲವು ಸಾವಿರ ವರ್ಷಗಳೇ ಬೇಕಾದುವು. ತಿಳಿದುಕೊಂಡದ್ದೇ ತಡ ಮತಗಳು, ವರ್ತಕರು, ಬಂದೂಕುಗಳು ಅಲ್ಲಿಗೆ ತಲುಪಿದುವು. ಆ ದ್ವೀಪವೂ ಸಹ 'ಡಿಟ್ಟೋ' ಆಯಿತು.

ಅಂದರೆ ಆ ದ್ವೀಪವಾಸಿಗಳು ಭೂಖಂಡದಲ್ಲಿ ಅಡಿಯಾದ ಇತರೆ ದ್ವೀಪ ವಾಸಿಗಳಿಗಿಂತಲೂ ಕೆಲವು ಸಾವಿರಗಳಷ್ಟು ಹೆಚ್ಚು ಕಾಲ ಸ್ವಾತಂತ್ರ್ಯವನ್ನು ಅನುಭವಿಸಿದರು. ಆದುದರಿಂದಲೇ ಅವರು ಅಷ್ಟು ಸುಲಭವಾಗಿ ಗುಲಾಮಗಿರಿಯನ್ನು ಒಪ್ಪದಾದರು. ಇತರೆಡೆಗಳಲ್ಲಿ ಆದಂತೆ ಅಲ್ಲಿಯೂ ಬಂಡಾಯ, ಪ್ರತಿಭಟನೆ ನಡೆಯಿತು. ಫಿರಂಗಿಗಳು ಮೊಳಗಿದವು. ಹತ್ಯೆಗಳಾದವು.

ಒಂದು ನಾಗರಿಕ ಜಾತಿಯ ದಂಡನಾಯಕನು ಆ ದ್ವೀಪದ ಸೇನಾಧಿಕಾರಿಯಾದ. ಅವನು ಬ್ರಹ್ಮಚಾರಿ. ಅಂದರೆ ಅವಿವಾಹಿತ. ಆ ದ್ವೀಪವು ಶೀತ ಪ್ರದೇಶದಲ್ಲಿದ್ದುದರಿಂದ ಅಲ್ಲಿನ ಜನ ಬಿಳಿಯರು. ಬಿಳಿ ತೊಗಲಿನವರು. ಇತರ ಖಂಡಗಳಲ್ಲಿನ ಅನಾಗರಿಕ ರಂತಹವರು. ಅಂದರೆ ಕೋಟ್ಯಂತರ ವರ್ಷಗಳು ಬದುಕಿ ಉಳಿದು ಬಾಳಿದ ಜನಾಂಗ ಎಂದಾಯಿತು. ಗಿಡಗಂಟೆಗಳಲ್ಲಿ, ಸೂರ್ಯನಲ್ಲಿ, ಗಿರಿನದಿಗಳಲ್ಲಿ, ಮೋಡ ಮಿಂಚುಗಳಲ್ಲಿ ಯಾವುದೋ ದಿವ್ಯ ಚೇತನ ಅಡಗಿದೆಯೆಂದು ನಂಬಿ ಅವನ್ನು ಆರಾಧಿಸಿದವರು. ಮಿಂಚು ಕಂಡರೆ ಜಯಘೋಷ ಮಾಡಿದವರು. ಮಿಂಚು ಹುಳುಗಳನ್ನು ಕಂಡು ಬೆದರಿ ಓಡಿದವರು. ಪ್ರಾಣಶಕ್ತಿ ಇರುವುದರಲ್ಲೆಲ್ಲ ಅವರಿಗೆ ಭಕ್ತಿ, ಗೌರವ. ಪ್ರಾಣವನ್ನು ನೆಲಕ್ಕೆ ಹಾಕಿ ತುಳಿದು ಹೊಸಕಿ ಹಾಕಿದವರಲ್ಲ. ಜೀವಿಗಳನ್ನು ಕಾಲಡಿಯಲ್ಲಿ ಮೆಟ್ಟಿ ತುಳಿದವರಲ್ಲ. ಬಂಗಾರವನ್ನು ನಾಣ್ಯ ಮಾಡಿ ಬಳಸಿದವರಲ್ಲ. ಅದರಲ್ಲಿ ತೇಜೋಶಕ್ತಿ ಉಂಟೆಂದು ಆರಾಧಿಸಿದವರು. ಮಡಕೆ ಕುಡಿಕೆಗಳಲ್ಲಿ ಅಟ್ಟಿ ಉಂಡವರು. ಲೋಹದ ಪಾತ್ರೆಗಳು ನಾಗರಿಕತೆಯೆಂದು ಅರಿಯದವರು. ಅಗತ್ಯವಿದ್ದಷ್ಟು ಮಾತ್ರ ದೇಹದ ಅಂಗಾಂಗಗಳನ್ನು ಮುಚ್ಚಿಕೊಳ್ಳುವವರು. ನಾಗರಿಕವಾಗಿ ಮೈ ಇಡಿಯನ್ನು ಮುಚ್ಚಿಕೊಳ್ಳದವರು. ಈ ಅನಾಗರಿಕರು ನಾಗರಿಕರಾಗುವ ದಿನ ಬಂದು ಆ ದ್ವೀಪ ನಾಗರಿಕರ ಕಣ್ಣಿಗೆ ಬಿದ್ದಿತು.

ಸೈನ್ಯಾಧಿಕಾರಿ ಹೆಣ್ಣೊಬ್ಬಳನ್ನು ನೋಡಿದ. ಅವಳ ಚೆಲುವು ಅವನ ಕಣ್ಣು ಹಿಡಿಯಲಾರದಷ್ಟು ಬೆಳಗುತ್ತಿತ್ತು. ಅಂದು ಸಾಯಂಕಾಲ, 'ನಿನ್ನ ಹೆಂಡತಿಯನ್ನು ತಂದೊಪ್ಪಿಸು' ಎಂದು ಅವಳ ಗಂಡನಿಗೆ ಹೇಳಿ ಕಳುಹಿಸಿದ. ಆತನಿಗೆ ತನ್ನ ದ್ವೀಪದಲ್ಲಿ ಸಂಭವಿಸಿದ ಎಲ್ಲ ಘೋರ ಕೃತ್ಯಗಳೂ ತಿಳಿದಿತ್ತು. ಆದರೂ ಅವನದು ಹೋರಾಡುವ ಸ್ವಭಾವ. ಇದು ಅನ್ಯಾಯ, ತನ್ನ ಪ್ರಾಣ ಹೋದರೂ ಹೆಂಡತಿಯನ್ನು ಬಿಟ್ಟುಕೊಡುವುದಿಲ್ಲವೆಂದು ಹೇಳಿ ಕಳುಹಿಸಿದ. ಅಧಿಕಾರಿಗೆ ಸಿಟ್ಟು ನೆತ್ತಿಗೇರಿತು. ಬಂದೂಕು ಹೊತ್ತ ಹತ್ತು ಮಂದಿ ಸೈನಿಕರೊಂದಿಗೆ ಅವನ ಮನೆಗೆ ಹೊರಟ. ಅವರು ಬರುವರೆಂದು ತಿಳಿದಿದ್ದ ಅವಳ ಗಂಡ ಒಲೆಗಿಡುವ ಕಟ್ಟಿಗೆಗಳಲ್ಲಿ ಉದ್ದವಾದೊಂದನ್ನು ತಾನು ಹಿಡಿದು, ದೊಡ್ಡ ಮಗನ ಕೈಗೊಂದನ್ನು ಕೊಟ್ಟು ಗುಡಿಸಲ ಮುಂದೆ ನಿಂತ. ಅವರನ್ನು, ಅವರ ಆಯುಧಗಳನ್ನು ಕಂಡು ಅಧಿಕಾರಿಗೆ ನಗೆ ಬಂತು. 'ಯಾಕೆ ನಗು ?' ಎಂದು ಗಂಡ ಕೇಳಿದ. ಅಧಿಕಾರಿ, 'ನೀನು ಮೂರ್ಖ. ನಮ್ಮ ಬಂದೂಕುಗಳ ಮುಂದೆ ನಿನ್ನ ಕಟ್ಟಿಗೆ ನಿಂತೀತೆ ?' ಅಂದ. 'ನನ್ನ ಕಟ್ಟಿಗೆ ನಿನ್ನ ಬಂದೂಕುಗಳಿಗೆ ಸರಿ ಉತ್ತರ ನೀಡೀತೆಂದು ನಾನು ಹಿಡಿದಿಲ್ಲ. ನನ್ನ ಮನಸ್ಸು ನಿನ್ನ ಮನಸ್ಸಿಗೆ ತಕ್ಕ ಉತ್ತರ ನೀಡಬೇಕೆಂದಷ್ಟೇ ಹಿಡಿದಿರುವುದು. ಮತ್ತಾವುದಕ್ಕೂ ಅಲ್ಲ' ಎಂದ ಗಂಡ.

ಅಧಿಕಾರಿ ಕುಪಿತನಾದ. ಕತ್ತಿಯ ಒಂದೇ ಬೀಸಿಗೆ ತಂದೆ, ಮಗನ ತಲೆಗಳು ಉರುಳಿ ಬಿದ್ದುವು. ಅಧಿಕಾರಿ ಅವನ ಹೆಂಡತಿಯನ್ನು ಹಿಡಿಯಲು ಗುಡಿಸಲಿಗೆ ನುಗ್ಗಿದ. ಆರು ವರ್ಷದಿಂದ ಹಿಡಿದು ಮೊಲೆ ಕುಡಿವ ಕೂಸಿನವರೆಗೆ ಇದ್ದ ನಾಲ್ಕು ಮಕ್ಕಳು ಅಳತೊಡಗಿದವು. ಆ ಹೆಂಗಸು ಮಕ್ಕಳನ್ನು ಬಿಟ್ಟು ಬರಲಾರೆ ಎಂದಳು. ಗಂಡ ಮಗನ ಹೆಣಗಳ ಮೇಲೆ ಬಿದ್ದು ಹೊರಳಿ ಹೊರಳಿ ಅಳಲಾರಂಭಿಸಿದಳು. ಸೈನಿಕರು ಹೆಣಗಳನ್ನು ಎಳೆದುಕೊಂಡು ಹೋದರು. ಸಮುದ್ರಕ್ಕೆ ಎಸೆದರು. ಅವಳು ಮಕ್ಕಳನ್ನು ತಬ್ಬಿಕೊಂಡು ಅಳತೊಡಗಿದಳು. ಅಧಿಕಾರಿಯ ಆಜ್ಞೆಯಂತೆ ಸೈನಿಕರು ಮುವ್ವರು ಮಕ್ಕಳನ್ನು ತಾಯಿಯಿಂದ ಕಸಿದುಕೊಂಡು ಹತ್ತು ಹನ್ನೊಂದು ಸಲ ಹಿಡಿದು ಹಿಡಿದು ಅಪ್ಪಳಿಸಿ ಅಪ್ಪಳಿಸಿ ಹೊಡೆದರು. ಪೆಟ್ಟು ತಿಂದು ತಿಂದು ಕಡೆಗೆ ಮಕ್ಕಳು ಹೆಣಗಳಾದರು. ಆ ಹೆಂಗಸು ಕೈಗೂಸಿನೊಂದಿಗೆ ಅಧಿಕಾರಿಯ ಮನೆಗೆ ಹೋದಳು.

೨

ಇದಾಗಿ ಐದು ವರ್ಷಗಳಾದವು. ಅಂದಿನ ಕೈಗೂಸಿಗೆ ಐದು ವರ್ಷ ತುಂಬಿತು. ಆ ಹೆಂಗಸು ಆ ಬಾಲೆಯೊಂದಿಗೆ ದಿನ ದೂಡುತ್ತಿದ್ದಳು. ಒಂದು ದಿನ ಆ ಅಧಿಕಾರಿ ಬಂದ.

ಅಧಿಕಾರಿ : ಈ ಹುಡುಗಿಯೂ ತೊಲಗದ ಹೊರತು ನೀನು ನನ್ನೊಂದಿಗೆ ಸರಿಯಾಗಿ ನಡೆದುಕೊಳ್ಳಲಾರೆ.

ಹೆಂಗಸು : ನಿನ್ನ ಕರ್ಕೋಟಕತನ ನಿನ್ನದೆ ! ನೀನು ಮನುಷ್ಯನಲ್ಲ. ಈ ಕಂದನನ್ನೂ ಕೊಲ್ಲುವೆಯಾ ?

ಅಧಿಕಾರಿ : ನಿನ್ನನ್ನು ಕರೆತಂದಾಗ ಇದು ಎಳೆಗೂಸು. ಈಗಿದು ಕೂಸಲ್ಲವಲ್ಲ. ಆಗ ಇದರ ವಯಸ್ಸಿನ ಮಕ್ಕಳನ್ನು ನಿನ್ನಿಂದ ಕಿತ್ತುಕೊಳ್ಳಲಿಲ್ಲವೆ ? ಈಗಲೂ ಅಷ್ಟೆ.

ಅವನೊಂದಿಗೆ ಐದು ವರ್ಷಗಳು ಕಳೆದ ಅವಳಿಗೆ ಅವನ ಯಾವ ಮಾತಿಗೆ ಏನು ಅರ್ಥವೆಂಬುದು ತಿಳಿದಿತ್ತು. ತನ್ನ ಮಗು ತನಗೆ ದಕ್ಕದೆಂದು ತಿಳಿದಿತ್ತು. ಆ ಮಗುವನ್ನು ಅವನ ಕೈಗಿತ್ತು 'ಇದೋ ಕೊಂದುಬಿಡು. ಇದು ಬದುಕಿರುವವರೆಗೆ ನಾನಿದನ್ನು ಬಿಟ್ಟಿರಲಾರೆ' ಅಂದಳು. ಅವನು ಅವಳ ಎದುರಲ್ಲೆ ತನ್ನ ಖಡ್ಗದಿಂದ ಆ ಮಗುವನ್ನು ಎರಡು ತುಂಡು ಮಾಡಿದ. ಅವಳು ರೋಧಿಸುತ್ತ ಹೊರಟುಹೋದಳು.

೨

ಅವಳು ಕೆಲವು ರಾತ್ರಿಗಳಲ್ಲಿ ನೇಣು ಹಾಕಿಕೊಳ್ಳುವ ಆಲೋಚನೆ ಮಾಡಿದಳು. ಹಾಕಿಕೊಳ್ಳಲಿಲ್ಲ. ಅವಳು ಕೆಲವು ರಾತ್ರಿಗಳಲ್ಲಿ ಸಮುದ್ರಕ್ಕೆ ಹಾರಿ ಸಾಯುವ ಆಲೋಚನೆ ಮಾಡಿದಳು. ಸಾಯಲಿಲ್ಲ. ಅವಳು ಕೆಲವು ರಾತ್ರಿಗಳಲ್ಲಿ ಸೀಮೆ ಎಣ್ಣೆ ಸುರಿದುಕೊಂಡು ಸುಟ್ಟುಕೊಳ್ಳುವ ಆಲೋಚನೆ ಮಾಡಿದಳು. ಸುಟ್ಟುಕೊಳ್ಳಲಿಲ್ಲ.

ಹೀಗೆ ಏನೇನೋ ಅಂದುಕೊಂಡಳು. ಏನನ್ನೂ ಮಾಡಲಿಲ್ಲ. ಒಂದು ದಿನ ರಾತ್ರಿ ಅಧಿಕಾರಿ ಕಂಠಪೂರ್ತಿ ಕುಡಿದು ಕಣ್ಣ ತುಂಬ ಮದವೇರಿಸಿಕೊಂಡು ಅವಳ ಕೋಣೆಗೆ ಬಂದ. ತನಗೂ ವಿಷಾದಕ್ಕೂ ನಡುವೆ ಭೇದವಿಲ್ಲವೆಂಬಂತಿದ್ದ ಅವಳನ್ನು ನೋಡಿ ಹೇಳಿದ. ನಿನ್ನ ಗಂಡ ಮಕ್ಕಳು ಸತ್ತು ಹತ್ತು ವರ್ಷಗಳಾದವು. ನಿನ್ನ ಕಡೆಗೂಸು ಹೋಗಿ ಐದು ವರ್ಷಗಳಾದವು.

ಹೆಂಗಸು : ಈ ದ್ವೀಪದ ಸ್ವಾತಂತ್ರ್ಯ ಸತ್ತು ಇಪ್ಪತ್ತೈದು ವರ್ಷಗಳಾದವು.

ಅಧಿಕಾರಿ : (ತಿರಸ್ಕಾರದಿಂದ ನಕ್ಕು) ಇನ್ನೂ ಎಷ್ಟು ಕಾಲ ಈ ದುಃಖ ?

ಹೆಂಗಸು : ಈ ಘಟ ಉರುಳುವವರೆಗೆ.

ಅಧಿಕಾರಿ : ನಿನಗೇನು ಕಡಿಮೆಯಾಗಿದೆ ? ಹಿಂದಿಗಿಂತಲೂ ಉತ್ತಮವಾದ ವಸ್ತ್ರಗಳನ್ನು ತೊಡುತ್ತಿರುವೆ. ಹಿಂದಿಗಿಂತಲೂ ಉತ್ತಮವಾದ ಮನೆಯಲ್ಲಿರುವೆ. ಹಿಂದಿಗಿಂತಲೂ ಉತ್ತಮವಾದ ಊಟ ಮಾಡುತ್ತಿರುವೆ. ನಾನು ನಿನ್ನನ್ನು ಪ್ರೀತಿ ಮಾಡುತ್ತಿರುವೆ. ನನ್ನ ಕುಲ ನಿನ್ನ ಕುಲಕ್ಕಿಂತಲೂ ಶ್ರೇಷ್ಠ. ನಾನು ನಿನ್ನ ಗಂಡನಿಗಿಂತಲೂ ಸಮರ್ಥ.

ಹೆಂಗಸು : ನೀನೆಂದಿಗೂ ನನ್ನ ಗಂಡನಿಗಿಂತಲೂ ಸಮರ್ಥನಲ್ಲ.

ಅಧಿಕಾರಿ : (ಕೋಪದಿಂದ) ಅಲ್ಲ ಅನ್ನುವೆಯಾ ? ಅದು ಹೇಗೆ ಹೇಳು.

ಹೆಂಗಸು : ನಿಮ್ಮಲ್ಲಿ ಬಂದೂಕುಗಳಿವೆ. ಖಡ್ಗ ಕತ್ತಿಗಳಿವೆ. ಅವನಲ್ಲಿ ಇವಾವುವೂ ಇರಲಿಲ್ಲ. ಆದರೂ ತನ್ನ ಹೆಂಡಿರು ಮಕ್ಕಳನ್ನು ರಕ್ಷಿಸಿಕೊಳ್ಳಲು ಕಟ್ಟಿಗೆಯನ್ನೆ ಹಿಡಿದು ನಿಂತ. ರಕ್ಷಣೆ ಸಾಧ್ಯವಿಲ್ಲವೆಂದು ಅವನಿಗೆ ತಿಳಿದಿತ್ತು. ಆದರೂ ತನ್ನ ಧರ್ಮವನ್ನು ತಾನು ಪಾಲಿಸಿದ. ತಾನು ಸಾಯದೆ ನಿನ್ನನ್ನು ನನ್ನ ಬಳಿಗೆ ಸುಳಿಯಗೊಡಲಿಲ್ಲ. ನಾನು ನಿನ್ನ ಹೆಂಡತಿಯಾಗಿ, ನಿನಗಿಂತಲೂ ಬಲಶಾಲಿಯೊಬ್ಬ ನನಗಾಗಿ ಬಂದರೆ ಓಡಿಹೋಗುವ ಹೇಡಿ ನೀನು. ನೀನು ಹೇಡಿ.

ಅಧಿಕಾರಿ : (ಕೋಪಗೊಂಡು) ನಾನು ಹೇಡಿಯಲ್ಲ.

ಹೆಂಗಸು : ನೀನೊಬ್ಬ ಹೇಡಿಯೆಂದು ನನಗಂದೇ ತಿಳಿದಿತ್ತು. ನೀನು ಧೈರ್ಯವಂತನೇ ಆಗಿದ್ದರೆ ಅಂದು ನೀನೂ ಕಟ್ಟಿಗೆ ಹಿಡಿದು ಅವನನ್ನು ಎದುರಿಸುತ್ತಿದ್ದೆ. ಮೇಲಾಗಿ ಅಷ್ಟು ಜನ ಸೈನಿಕರನ್ನು ಕರೆತರುತ್ತಿರಲಿಲ್ಲ.

ಅಧಿಕಾರಿ : (ನಕ್ಕು) ಅಂದರೆ ಆ ದುರ್ಬಲ ಅಯೋಗ್ಯನನ್ನು ನಾನು ಕಟ್ಟಿಗೆ ಹಿಡಿದು ಎದುರಿಸಲಾರದೆ ಹೋದೆನೆಂದು ಹೇಳುವೆಯಾ ?

ಹೆಂಗಸು : ಅವನು ಸತ್ತುಹೋದ. ನಿನ್ನ ಮಾತಿಗೆಲ್ಲಿ ಸಾಕ್ಷಿಯಿದೆ ? ಈಗ ನೀನು ನಿನ್ನ ಧೈರ್ಯವನ್ನು ಸಾಬೀತುಪಡಿಸಲಾರೆ. ನಿಜಕ್ಕೂ ನೀನು ಧೈರ್ಯಶಾಲಿಯೇ ಆಗಿದ್ದರೆ ಆಗ ಹಾಗೆ ಮಾಡುತ್ತಿರಲಿಲ್ಲ.

ಅಧಿಕಾರಿ : ಧೈರ್ಯವಿರಲಿಲ್ಲವೆಂದಲ್ಲ. ನನಗಾಗ ಇದು ಹೊಳೆಯಲಿಲ್ಲ, ಅರಿವಿಗೆ ಬರಲಿಲ್ಲ.

ಹೆಂಗಸು : ನಮ್ಮ ಜಾತಿಗೆ ಅರಿವು ಧೈರ್ಯಗಳ ನಡುವೆ ಹೆಚ್ಚಿನ ಭೇದವಿಲ್ಲ. ನ್ಯಾಯಕ್ಕೂ ಅರಿವಿಗೂ ಹೆಚ್ಚಿನ ಭೇದವಿಲ್ಲ. ಅರಿವೇ ನ್ಯಾಯ, ಧೈರ್ಯ.

ಅಧಿಕಾರಿ : ಹಾಗಿದ್ದ ಮೇಲೆ ಇಂತಹವನ ಜೊತೆ, ನನ್ನೊಂದಿಗೆ ನೀನು ಸಂಸಾರವನ್ನೇಕೆ ಮಾಡುತ್ತಿರುವೆ ?

ಹೆಂಗಸು : ನಾನು ನಿನ್ನೊಂದಿಗೂ ಸಂಸಾರ ಮಾಡಿದ್ದಿಲ್ಲ.

ಅಧಿಕಾರಿ : ಈ ಮಾತು ಕೇಳಿದ ಯಾರಾದರೂ ನಿನ್ನನ್ನು ಮೂರ್ಖಳು ಅಂದುಕೊಳ್ಳುವರು.

ಹೆಂಗಸು : ನಾನು ಅವರನ್ನು ಮೂರ್ಖರು ಅಂದುಕೊಳ್ಳುತ್ತೇನೆ.

ಅಧಿಕಾರಿ : ಅಂದರೆ ನೀನು ನನ್ನೊಂದಿಗೆ ಇಷ್ಟದಿಂದ ಇಲ್ಲ ಎಂದಾಯಿತು.

ಹೆಂಗಸು : ಇಲ್ಲವೆಂದು ಹೇಳುತ್ತಿರುವುದು ಇದು ಲಕ್ಷದೊಂದನೇ ಸಲ.

ಅಧಿಕಾರಿ : ಗೊತ್ತು ಗೊತ್ತು. ನೀನು ನನ್ನನ್ನು ಪ್ರೀತಿಸುವುದಿಲ್ಲವೆಂದು ನನಗೆ ಗೊತ್ತು. ನಾನು ನಿನ್ನ ಪ್ರೀತಿಯನ್ನು ಯೋಗ್ಯ ಮಾರ್ಗದಿಂದ ಗಳಿಸಬೇಕಿತ್ತು. ಆಗ ನೀನು ನನ್ನನ್ನು ಪ್ರೀತಿ ಮಾಡುತ್ತಿದ್ದೆ.

ಹೆಂಗಸು : ಇಲ್ಲ. ನಿನ್ನ ಜಾತಿ ನಿರ್ನಾಮವಾದ ಮೇಲೆ ನಾನು ನಿನ್ನನ್ನು ಪ್ರೀತಿಸುತ್ತೇನೆ.

ಅಧಿಕಾರಿ : ನಿನ್ನನ್ನು ಕೊಂದುಬಿಡುತ್ತೇನೆ.

ಹೆಂಗಸು : ಹತ್ತು ವರ್ಷಗಳಿಂದ ಕಾಯುತ್ತಿದ್ದೇನೆ.

ಅಧಿಕಾರಿ : ಸಾವೆಂದರೆ ನಿನಗಷ್ಟು ಪ್ರೀತಿಯೇ ?

ಹೆಂಗಸು : ಅಷ್ಟು ಇಷ್ಟು ಅನ್ನುತ್ತೀಯಾ ?

ಅಧಿಕಾರಿ : ಆದರೆ ಸಾಯಲು ಮಾರ್ಗಗಳಿಲ್ಲವೆ ?

ಹೆಂಗಸು : ಇವೆ.

ಅಧಿಕಾರಿ : ಆದರೇಕೆ ಸಾಯಲಿಲ್ಲ ? ಸಮುದ್ರದಲ್ಲಿ ಬಿದ್ದು ಸಾಯಬಹುದು. ನೇಣು ಹಾಕಿಕೊಂಡು ಸಾಯಬಹುದು.

ಹೆಂಗಸು : ಹಾಗೆ ಸಾಯುವುದು ನನಗಿಷ್ಟವಿಲ್ಲ.

ಅಧಿಕಾರಿ : ಮತ್ತೆ ಹೇಗೆ ಸಾಯುವುದು ಇಷ್ಟ ?

ಹೆಂಗಸು : ನಿನಗೆ ಕೋಪ ತಂದು, ನೀನು ನನ್ನನ್ನು ಕೊಂದರೆ ಸಾಯಬೇಕೆಂದು.

ಅಧಿಕಾರಿ : ಅಂದರೆ ನಿನಗೆ ನನ್ನಲ್ಲಿ ಪ್ರೀತಿಯಿದೆ ಎಂದಾಯಿತು.

ಹೆಂಗಸು : ಹೌದು, ಇದೆ. ಆ ಪ್ರೀತಿ ಎಂತಹುದೆಂದರೆ ನನ್ನ ಗಂಡ, ಮಕ್ಕಳು ನಿನ್ನ ಕೈಯಲ್ಲಿ ಹತರಾದ ಹಾಗೆ ನಿನ್ನ ಕೈಯಿಂದಲೇ ಸಾಯಬೇಕೆಂಬಷ್ಟು ಪ್ರೀತಿ.

ಅಧಿಕಾರಿ : ಇಂಥ ಮಾತುಗಳಿಗೇನು ? ನಿನಗೆ ಸಾಯುವ ಇಷ್ಟವಿಲ್ಲ.

ಹೆಂಗಸು : ತಪ್ಪು ತಪ್ಪು. ಸಾಯುವ ಇಷ್ಟವಿದೆ. ಆ ಇಷ್ಟವೂ ಕೂಡ ಮೈಯನ್ನೇ ಸುಡುತ್ತಿರುವಷ್ಟು ಇಷ್ಟ. ಆದರೆ ಸಾವಿನಲ್ಲಿ ಎರಡು ಬಗೆ. ತನ್ನಂತೆ ತಾನೆ ಬರುವ ಸಾವೊಂದು. ಇನ್ನೊಬ್ಬರು ಕೊಂದಾಗ ಬರುವ ಸಾವು ಇನ್ನೊಂದು. ನನಗೀ ಎರಡನೇ ರೀತಿಯ ಸಾವೇ ಇಷ್ಟ. ಅದೂ ನೀನು ಕೊಂದಾಗ.

ಅಧಿಕಾರಿ : ಅಂದರೆ ನನ್ನೊಡನಿದ್ದು ಸುಖಿಸುವುದು ಇಷ್ಟವಿಲ್ಲ ?

ಹೆಂಗಸು : ಹತ್ತು ವರ್ಷಗಳಿಂದ ಬಲ್ಲೆ ನಿನ್ನನ್ನು. ನೀನು ಮೃಗ. ನಿನ್ನ ನಾಗರಿಕತೆಯೆಲ್ಲ ನಿನ್ನ ಕುಡಿತದಲ್ಲಿ. ನೀನು ತೊಡುವ ಬಟ್ಟೆಯಲ್ಲಿ, ನಿನ್ನ ಕೈಯ ಬಂದೂಕಿನ ಗುಂಡಿನಲ್ಲಿದೆ. ನಿನ್ನ ಹೃದಯದಲ್ಲಿಲ್ಲ; ನಿನ್ನ ಜಾತಿಯಲ್ಲಿಲ್ಲ; ನಿನ್ನ ಹುಟ್ಟಿನಲ್ಲಿಲ್ಲ. ನಾನು ನಿನ್ನನ್ನು ಪ್ರೀತಿಸುತ್ತಿಲ್ಲ. ನಾನು ಬದುಕಿರುವೆನೆಂಬುದೇ ನಿನಗೆ ಆಶ್ಚರ್ಯವಲ್ಲವೆ ? ಏನಾದರೂ ಮಾಡಿಕೊಂಡು ಸಾಯುವುದು ನನ್ನ ಜೀವನಿಗೆ ಸಮ್ಮತಿ ಇಲ್ಲ. ನನ್ನ ಜೀವನು ಈ ದೇಹವನ್ನು ಧರಿಸಿರುವನು. ತಾನಾಗಿಯೇ ಅವನು ಬಿಟ್ಟು ಹೋಗುವುದಿಲ್ಲ. ಸತ್ತ ಗಂಡನಿಗಾಗಿ, ಮಕ್ಕಳಿಗಾಗಿ ಹೃದಯ ವೇದನೆ ಅನುಭವಿಸಿ ಸಾಯುವುದು, ಆ ಮಹಾಗ್ನಿ ಜ್ವಾಲೆಯಲ್ಲಿ ಬೇಯುವುದು ಈ ಜೀವನಿಗೆ ಇಷ್ಟ. ಅವನಿಗಿದೊಂದು ಅನುಭವ. ಅವನು ತನ್ನಷ್ಟಕ್ಕೆ ತಾನು ಸಾಯುವುದಿಲ್ಲ. ಅದನ್ನು ಬಯಸುವುದೂ ಇಲ್ಲ. ಸುಖ ಅನುಭವಿಸಬೇಕೆಂದಲ್ಲ. ದುಃಖ ಅನುಭವಿಸಲು. ಸುಖವೋ ದುಃಖವೋ ಈ ಶರೀರದೊಂದಿಗೆ ಹುಟ್ಟಿ ಇದಕ್ಕೆ ಸಂಬಂಧಿಸಿದ್ದನ್ನು ಅನುಭವಿಸುವ ಇಚ್ಛೆ ಅವನದು. ಈ ದೇಹಕ್ಕೂ ಆ ಜೀವನಿಗೂ ಒಂದು ಅಂತರದಿಂದ ಸಂಬಂಧವಿದೆ. ಈ ದೇಹದ ಮೂಲಕ ಪಡೆದುದನ್ನು, ಅದರಲ್ಲೂ ತನಗೆ ಪ್ರಿಯವಾದುದನ್ನು ಅನುಭವವೆಂದುಕೊಳ್ಳುತ್ತಾನೆ. ನನ್ನ ಈ ದೇಹ ನಿನ್ನೊಂದಿಗೆ ಸಂಸಾರ ಮಾಡುತ್ತಿರುವುದರಿಂದ ನೀನು ಇದು ಅವನಿಚ್ಛೆಯೇ ಅಂದುಕೊಳ್ಳುತ್ತಿರಬಹುದು. ಅದು ತಪ್ಪು. ನನಗೆ ನಾನೇ ಸಾವು ತಂದುಕೊಳ್ಳುವುದು ನನಗಿಷ್ಟವಿಲ್ಲ. ನೀನು ಕೊಂದರೆ ಸಾಯಲು ಬಲು ಇಷ್ಟ. ಸಾವು ತಾನಾಗಿಯೇ ಬಂದರಂತೂ ಇನ್ನೂ ಇಷ್ಟ. ಜೀವನು ಈ ದೇಹದೊಂದಿಗೆ ತನಗೆ ಪ್ರಿಯವಾದುದನ್ನು ಪಡೆದು ಸುಖಾನುಭವಿಯಾದೆ ಅಂದುಕೊಳ್ಳುವನು. ಅನ್ಯರಿಂದ ಬಲವಂತವಾಗಿ ಹೇರಿದ್ದು ಅವನಿಗೆ ಸುಖವಲ್ಲ. ಅದು ದುಃಖ. ದುಃಖವಾದರೂ ಅದನ್ನು ಅನುಭವಿಸುವುದು ಅವನಿಗೆ ಇಷ್ಟವೇ.

ಅಧಿಕಾರಿ : ಹಾಗೆಂದ ಮೇಲೆ ನೀನು ನನಗೆ ಬೇಡ.

ಹೆಂಗಸು : ನಾನು ನಿನ್ನನ್ನು ಬಯಸಿಯೇ ಇಲ್ಲ.

ಅಧಿಕಾರಿ : ನಿನ್ನನ್ನು ಕೊಂದುಬಿಡುತ್ತೇನೆ.

ಹೆಂಗಸು : ಸುಮ್ಮನೆ ಆಡುವುದೇಕೆ ?

ಅಧಿಕಾರಿ ಅವಳನ್ನು ಕೊಂದುಹಾಕಿದ. ಸಾಯುತ್ತಿದ್ದ ಅವಳ ತುಟಿಗಳ ಮೇಲೆ ಆನಂದದ ನಗೆ ತಾಂಡವವಾಡಿತು. ಅವಳು ಕೊನೆಯ ಉಸಿರಿನೊಂದಿಗೆ ಹೇಳಿದಳು – ನಿನ್ನ ಜನ್ಮದಲ್ಲಿ ನೀನು ಮಾಡಿದ ಒಳ್ಳೆಯ ಕೆಲಸವೆಂದರೆ ಇದೊಂದೇ. ನಾನು ಸಾಯುವೆ. ಆಮೇಲೆ ನೀನೇನು ಮಾಡಿಕೊಳ್ಳುವೆ ?

ಅಧಿಕಾರಿ : ಮತ್ತೆ ಇನ್ನೊಂದು ಹೆಣ್ಣನ್ನು ಸಂಪಾದಿಸುತ್ತೇನೆ.

ಹೆಂಗಸು : ನಿನಗೆ ತಕ್ಕ ಮಾತು ! ನಿನ್ನ ಜಾತಿಗೆ ಜೀವೇಚ್ಛೆ ಎಂದಿಗೂ ತಿಳಿಯುವುದಿಲ್ಲ.


ಅನುವಾದ : ಸ. ರಘುನಾಥ

ಬಾಲಾಂಜನೇಯ ಸ್ವಾಮಿ ಗುಡಿಯ ಪೂರ್ವ, ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ-೫೬೩ ೧೩೫, ಕೋಲಾರ ಜಿಲ್ಲೆ


ಗೌರವ (ಅಂತಿಮ) ಯಾತ್ರೆ !
ಸೆಕ್ಯುಲರಿಸಂ
ಸ್ಮಶಾನ


'ಪಾದಯಾತ್ರೆ'
ಸುಪ್ರೀಂ ಕೋರ್ಟ್
ಕಾವೇರಿ


ನನ್ನ ಈ ಮಹತ್ಕಾರ್ಯದಲ್ಲಿ ನಿನ್ನ ಸಹಕಾರಕ್ಕಾಗಿ ಥ್ಯಾಂಕ್ಸ್!
ಇರಾಕ್
ಅಮೆರಿಕ


ಚುನಾವಣೆ
ಮತದಾರ
ಕಾಶ್ಮೀರ

# ಸಜ್ಜನರ ದುರ್ಜನರ ಸಂಗ

*ಯಾರಾದರೂ ಕತ್ತೇಗಾಲನೊಂದಿಗೆ ತಮ್ಮನ್ನು ಸಮೀಕರಿಸಿಕೊಂಡರೆ ಅಥವಾ ಸುತ್ತಮುತ್ತ ಇರುವವರಲ್ಲಿ ಕತ್ತೇಗಾಲನನ್ನು ಗುರುತಿಸಿದರೆ*

**ಸತ್ಯವತಿ**

ದುಷ್ಟರಲ್ಲೇ ಅತಿ ದುಷ್ಟನಾದ, ಕುತಂತ್ರಗಳಲ್ಲಿ ಶಕುನಿಯನ್ನು ಮೀರಿಸುವ, ಮನೆಮುರಿಯುವುದರಲ್ಲಿ ಇತ್ತೀಚೆಗಷ್ಟೆ ನ್ಯೂಯಾರ್ಕ್‌ನ ನೂರಾಹತ್ತು ಮಹಡಿಯ ಕಟ್ಟಡಗಳನ್ನು ನೆಲಸಮಮಾಡಿದ ವಿಮಾನಗಳಿಗಿಂತಲೂ ಶಕ್ತಿಶಾಲಿಯಾದ, ಕಲ್ಲಯ್ಯ ಕತ್ತೇಗಾಲನ ಕಣ್ಣಿಗೆ ಗ್ರಹಚಾರವಶಾತ್ ಒಂದು ದುರ್ಮುಹೂರ್ತದಲ್ಲಿ 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂಬ ವಚನ ಬಿದ್ದೇಬಿಟ್ಟಿತು. ಬರೀ ಕಣ್ಣಿಗೆ ಬಿದ್ದಿದ್ದರೆ ಪರವಾಗಿಲ್ಲ, ಆದರೆ ಅದು ಅವನ ಬಂಡೆಯಂಥಾ ಮಂಡೆಯೊಳಗೆ ನುಗ್ಗಿ ಮಿದುಳನ್ನೆಲ್ಲ ಆಕ್ರಮಿಸಿಕೊಂಡುಬಿಟ್ಟಿತು. ಹಾಗಾಗಿ ಎಲ್ಲರ ಮೇಲೆ ಒಟ್ಟಾರೊಟ್ಟಿ ಇದ್ದ ಕಲ್ಲಯ್ಯನ ವಕ್ರದೃಷ್ಟಿ ಈಗ ಸಜ್ಜನರ ಮೇಲೆ ಬಿದ್ದಿತು.

ಸರಿ, ಸಜ್ಜನರ ಸಂಗ ಮಾಡಿ ಹೆಜ್ಜೇನು ಸವಿಯಲೇ ಬೇಕೆಂದು ಪಣತೊಟ್ಟ ಕಲ್ಲಯ್ಯ, ಇದರಲ್ಲಿ ಪ್ರಥಮ ಹೆಜ್ಜೆಯೆಂದು, ಊರಿನಲ್ಲಿ ಸಜ್ಜನಿಕೆಗೆ ಹೆಸರಾದ ಸಂಜೀವರಾಯರಿಗೆ ಫೋನಾಯಿಸಿದ.

''ಟ್ರಿಣ್.... ಟ್ರಿಣ್.... ಟ್ರಿಣ್.... ಟ್ರಿಣ್.... ಹಲೋ...''

''ನಮಸ್ಕಾರ ಸಾರ್. ನಾನು ಕಲ್ಲಯ್ಯ ಕತ್ತೇಗಾಲ ಮಾತಾಡ್ತಾ ಇರೋದು.''

''ಹಾಂ'', ಸಂಜೀವರಾಯರಿಗೆ ಕಾಲಮೇಲೆ ಕಲ್ಲು ಚಪ್ಪಡಿ ಬಿದ್ದ ಅನುಭವ.

''ಹೆದರಿಬಿಟ್ರಾ ಸಾರ್ ? ...ಏನಿಲ್ಲ ಸಾರ್, ನಿಮ್ಮಂಥೋರ ಸಹವಾಸ ಮಾಡಿದರೆ ನಮ್ಮಂಥೋರ್ಗೆ ಒಳ್ಳೇದೂಂತ ಎಲ್ಲೋ ಓದಿದೆ. ಅದಕ್ಕೆ....''

ಸಂಜೀವರಾಯರಿಗೆ ಮುಳ್ಳಿನ ಮಧ್ಯೆ ಸಿಕ್ಕಿಹಾಕಿಕೊಂಡ ಹಾಗಾಯ್ತು. ಹೇಗೆ ಬಿಡಿಸಿಕೊಳ್ಳುವುದು ? ಅಂಥಾ ದುರಾತ್ಮನ ಸಹವಾಸ ಅವರಿಗೆ ಬೇಕೆ ? ದುರ್ಜನರನ್ನು ಕಂಡರೆ ದೂರವಿರಬೇಕೆಂದು ಹಿರಿಯರು ಸಾರಿ ಸಾರಿ ಹೇಳಿರುವರಲ್ಲಾ !

''ನೋಡಪ್ಪಾ, ತುರ್ತು ಕೆಲಸದ ಮೇಲೆ ತುರುವೇಕೆರೆಗೆ ಹೊರಟಿದ್ದೇನೆ. ಸಮಯ ಸಿಕ್ಕಾಗ ಮಾತನಾಡುವ.'' ಮೆಲ್ಲನೆ ನುಣುಚಿಕೊಳ್ಳಲು ನೋಡಿದರು ರಾಯರು.

''ಯಾವಾಗ ಬರ್ತೀರಿ ಹೇಳಿ ಸಾರ್. ಆಗ ಫೋನ್ ಮಾಡ್ತೀನಿ, ಇಲ್ಲಾಂದ್ರೆ ನಾನೇ ಬರ್ತೀನಿ.''

ಇದೊಳ್ಳೇ ನಕ್ಷತ್ರಿಕನ ಸಹವಾಸ ಆಯ್ತಲ್ಲಾ ಎಂದು ಮನದೊಳಗೇ ನರಳಿದ ಸಂಜೀವರಾಯರು ಪ್ರಕಟವಾಗಿ,

''ಸರಿಯಾಗಿ ಗೊತ್ತಿಲ್ಲ, ಬಂದ ಮೇಲೆ ನಾನೇ ನಿಮ್ಮನ್ನು ಸಂಪರ್ಕಿಸುತ್ತೇನೆ ಬಿಡಿ'' ಎಂದರು.

'ಬೀಸೋ ದೊಣ್ಣೆ ತಪ್ಪಿದರೆ ನೂರು ವರ್ಷ ಆಯುಷ್ಯ' ಎಂದು ಯೋಚಿಸುತ್ತ ಕತ್ತೇಗಾಲನ ಕರಗಳಿಂದ ಬಚಾವಾದರು ಸಂಜೀವರಾಯರು.

ಒಬ್ಬರು ತಪ್ಪಿಸಿಕೊಂಡರೇನಾಯ್ತು? ನಗರಕ್ಕೆಲ್ಲಾ ಒಬ್ಬನೇ ಸಜ್ಜನನಾ ? ಕತ್ತೇಗಾಲನ ಕಾಕದೃಷ್ಟಿ ಈ ಸಲ 'ಸೇವಾಧುರಂಧರ' ಸೇತುಮಾಧವ ರಾಯರ ಮೇಲೆ ಬಿತ್ತು.

ಈ ವಿಷಯದ ಅರಿವೇ ಇಲ್ಲದ ಸೇತುಮಾಧವ ರಾಯರು ಅಂದು ಯಾವುದೋ ಅನಾಥಾಲಯದ ಮಕ್ಕಳಿಗೆ ವಿಶೇಷ ಆಟೋಟ ಸ್ಪರ್ಧೆಗಳನ್ನು ಏರ್ಪಡಿಸಿ, ಬಹುಮಾನಗಳನ್ನು ನೀಡುವುದರ ಜೊತೆಗೆ ಊಟೋಪಚಾರಗಳ ವ್ಯವಸ್ಥೆಯನ್ನೂ ಮಾಡಿದ್ದರಾಗಿ, ಅಲ್ಲಿಗೆ ಬಿಜಯಂಗೈದಿದ್ದರು.

ಅನಾಚಾರಿ, ಅದ್ವಿತೀಯ ಭಯೋತ್ಪಾದಕ ಕತ್ತೇಗಾಲನೂ ಅದೇ ಅನಾಥಾಲಯದ



ಜಾಡು ಹಿಡಿದು ಬಂದ, ಗ್ರಾಮಸಿಂಹದಂತೆ.

ಅಲ್ಲಿ ನೋಡಿದರೆ, ಪತ್ರಿಕೆಯವರು, ವಿವಿಧ ಟಿ.ವಿ. ಚ್ಯಾನಲ್‌ನವರು ತಮ್ಮ ವಿಡಿಯೋ ಕ್ಯಾಮರಾಗಳಲ್ಲಿ ಅಲ್ಲಿನ ದೃಶ್ಯಾವಳಿಗಳ ಸೆರೆಹಿಡಿಯುತ್ತಿದ್ದಾರೆ ! ಮೊದಲೇ ಸುರಾಪಾನದಿಂದ ಉನ್ಮತ್ತನಾಗಿದ್ದ ಕತ್ತೇಗಾಲ, ತಾನೂ ಟಿ.ವಿ.ಯ ವಾರ್ತಾಪ್ರಸಾರದಲ್ಲಿ ಕಾಣಿಸಿಕೊಳ್ಳಲು ಇಚ್ಛಿಸಿದವನಾಗಿ, ಉತ್ಸಾಹದಿಂದ ತೂರಾಡುತ್ತಾ ಅಂದಿನ ಕೇಂದ್ರಬಿಂದುವಾದ ಸೇತುಮಾಧವರಾಯರು ಇದ್ದೆಡೆಗೇ ಹೋಗಿ ಅವರ ಪಕ್ಕದಲ್ಲೇ ಉಪಸ್ಥಿತನಾಗತೊಡಗಿದ. ಎದುರಿಗೆ ಸಿಕ್ಕಿದವರನ್ನು ಯದ್ವಾತದ್ವಾ ತಳ್ಳಿ, ರಾಯರ ಪಕ್ಕದಲ್ಲಿ ತನ್ನ ಹುಳುಕು ಹಲ್ಲುಗಳನ್ನು ಪ್ರದರ್ಶಿಸುತ್ತಾ ನಿಲ್ಲುತ್ತಿದ್ದ ಆತನನ್ನು ತಡೆಯಲು ಒಬ್ಬರಿಗಾದರೂ 'ದಂ' ಇರಲಿಲ್ಲ. ರಾಯರಿಗಾದರೋ ಹೆಜ್ಜೇನು ಕಡಿದ ಅನುಭವ ! 'ಸಮಯ ನೋಡಿ ಕರ್ಣನನ್ನು ಕಚ್ಚಿ ಹಿಡಿದ ದುಂಬಿಯಂತೆ, ಇವನೆಲ್ಲಿಂದ ಬಂದನಪ್ಪಾ, ನನ್ನನ್ನು ಕಾಡಲಿಕ್ಕೆ' ಎಂದು ಮನದೊಳಗೇ ಪೇಚಾಡಿಕೊಂಡರು ಅವರು.

ಅಲ್ಲಿಯ ಕಾರ್ಯಕ್ರಮ ಮುಗಿಯುತ್ತಿದ್ದಂತೆಯೇ, ಕಲ್ಲಯ್ಯನನ್ನು ನಿವಾರಿಸುತ್ತಾ ರಾಯರು ಅವಸರವಸರವಾಗಿ ಮತ್ತೆಲ್ಲಿಗೋ ತೆರಳಿದ ಕಾರಣ, ಅವನಿಗೆ ಅಂದು ಅವರೊಂದಿಗೆ ಮಾತನಾಡಲು ಅವಕಾಶ ಸಿಗಲೇ ಇಲ್ಲ.

ಆದರೆ ಮರುದಿನ ಪತ್ರಿಕೆಗಳಲ್ಲಿ ಮುದ್ರಿತವಾದ ಛಾಯಾಚಿತ್ರಗಳಲ್ಲಿ ಅರ್ಥಾತ್ ಸಂಬಂಧವಿಲ್ಲದ ಈ ವಿರೋಧ ವ್ಯಕ್ತಿತ್ವದ ಜೋಡಿಯನ್ನು ಒಟ್ಟಿಗೆ ನೋಡಿದ ಜನರು, ಬಾಯಿಗೆ ಬಂದಂತೆ ಮಾತನಾಡತೊಡಗಿದರು.

''ಏನ್ರೀ ಇದು ಗ್ರಹಚಾರ ? ವನ ಕೆಡಿಸೋಕೆ ಒಂದು ಕೋತಿ ಸಾಲದೆ ? ಹಾಲು ಒಡಿಯೋಕೆ ಒಂದು ತೊಟ್ಟು ಹುಳಿ ಸಾಲದೆ ? ಈತ ಎಲ್ಲಿಂದ ವಕ್ಕರಿಸಿದ ಇಲ್ಲಿಗೆ ?'' ಮುಂತಾದ ಪ್ರತಿಕ್ರಿಯೆಗಳನ್ನು ಕೇಳೀ ಕೇಳೀ ರಾಯರ ಕಿವಿ ತೂತು ಬಿತ್ತು; ಅಲ್ಲಲ್ಲ ರಾಯರ ಕಿವಿಯ ತೂತು ಮೊದಲಿದ್ದುದಕ್ಕಿಂತ ಹಿಗ್ಗಿ ಬಾವಿಯಷ್ಟು ದೊಡ್ಡದಾಯ್ತು. ಮುಂದೆ ಕಲ್ಲಯ್ಯನ ಹಿಡಿತಕ್ಕೆ ಸಿಗದಿರಲು ಸೇತುಮಾಧವ ರಾಯರು ಒಂದಷ್ಟು ಮುಂಜಾಗ್ರತೆ ವಹಿಸಿದರು.

ಇತ್ತ ಕಲ್ಲಯ್ಯ ಕತ್ತೇಗಾಲನ ಸಂಗಡಿಗರು, ''ಎಲ ಎಲಾ, ನೀನು ಯಾವಾಗಿನಿಂದ ಸಾಧುಸಂತರ ಸಂಗ ಮಾಡಲು ಶುರುಮಾಡಿದ್ದು ? ನಿನ್ನ ಬುದ್ಧಿ ನೆಟ್ಟಗಿದೆಯಾ ? ಆವೇಗವಿಲ್ಲದ, ಆವೇಶವಿಲ್ಲದ ಅಂಥಾ ನರಸತ್ತವರ ಬಳಿ ನಿನಗೇನು ಕೆಲಸ ?'' ಇತ್ಯಾದಿಯಾಗಿ ವಾಕ್ಯಗಳೆಂಬ ಕೂರಂಬುಗಳಿಂದ ಆತನನ್ನು ಚೆನ್ನಾಗಿ ಛಳಿಸಿದರು. ಆದರೆ ಸಣ್ಣ ಸಣ್ಣ ಪೆಟ್ಟಿಗೆಲ್ಲಾ ಬಗ್ಗುವವನಲ್ಲ ಈ ಜಗಜಟ್ಟಿ. ತನ್ನ ಮನೋರಥವನ್ನು ಅವರಿಗೆ ತಿಳಿಸಿ ಅವರನ್ನು ಸುಮ್ಮನಾಗಿಸಿದ.

ಅವರಲ್ಲದಿದ್ದರೆ ಇವರು, ಇವರಲ್ಲದಿದ್ದರೆ ಇನ್ನೊಬ್ಬರು, ಒಟ್ಟಿನಲ್ಲಿ ಸಜ್ಜನರ ಸಂಗದ ಸವಿಯನ್ನು ಮಾತ್ರ ಸವಿದೇ ತೀರಬೇಕೆಂಬ ಛಲ ಅವನದು. ಆದ್ದರಿಂದ ಸಾವಿರಾರು ಕಾರ್ಯಕ್ರಮಗಳ ಸರದಾರ ಸೇತುಮಾಧವ ರಾಯರಿಗಿಂತ 'ಬಡವರ ಬಂಧು' ಬಸವರಾಜಪ್ಪನವರೇ ವಾಸಿ ಎನ್ನಿಸಿ ಅವರ ಮನೆಗೆ ದೌಡಾಯಿಸಿದ. ಬಡಮಕ್ಕಳನ್ನು ಸಾಲಾಗಿ ಕುಳ್ಳಿರಿಸಿ ಊಟ ಹಾಕುತ್ತಿದ್ದ ಬಸವರಾಜಪ್ಪನವರು ಕತ್ತೇಗಾಲನನ್ನೂ ಅವರ ಸಾಲಿನಲ್ಲಿ ಕುಳ್ಳಿರಿಸಿದರು.

''ನಿಮ್ಮ ಅನ್ನ ತಿಂದು ಉದ್ಧಾರವಾದೆ, ರಾಜಪ್ಪನೋರೆ. ನಾನು ಇಂದಿನಿಂದ ನಿಮ್ಮೊಂದಿಗೇ ಇರಲು ಸನ್ನದ್ಧನಾಗಿ ಬಂದಿದ್ದೇನೆ, ದೊರೆ'' ಎಂಬ ಕತ್ತೇಗಾಲನ ವಚನಗಳನ್ನು ಕೇಳಿ ಅವರು ಹೌಹಾರಿದರು.

''ನಾನು ಹಾವಿಗೆ ಹಾಲೆರೆದೆನೆ ? ಅಥವಾ ಬೀದಿಯಲ್ಲಿ ಹೋಗುತ್ತಿದ್ದ ಮಾರಿಯನ್ನು ಮನೆಗೆ ತಂದೆನೆ ? ಇಂಥಾ ಒಂದು ನರಹುಳ ಇಲ್ಲಿ ಸೇರಿ ಕೊಂಡರೆ, ಅರ್ಬುದರೋಗಕ್ಕೆ ಆಶ್ರಯವಿತ್ತ ದೇಹ ದಂತೆ ಎಲ್ಲಾ ನಶಿಸಿಹೋಗುವುದಿಲ್ಲವೆ ?'' ಎಂದು ಚಿಂತಿತರಾದ ಬಸವರಾಜಪ್ಪನವರು ಅಂತ್ಯವಿಲ್ಲದ ಆಲೋಚನೆಯಿಂದ ಬಸವಳಿದುಹೋದರು.




ಬೇಡಬೇಡವೆಂದರೂ ಬಸವರಾಜರ ಬೆನ್ನುಹತ್ತಿದ್ದ ಕತ್ತೇಗಾಲ. ಕಲ್ಲಯ್ಯನನ್ನು ರಾಜಪ್ಪನವರ ಬಳಿಯಲ್ಲಿ ಕಂಡ ಜನರು, ಹೆದರಿ ಇವರ ಹತ್ತಿರ ಬರುವುದನ್ನೇ ನಿಲ್ಲಿಸತೊಡಗಿದರು. ಕಲ್ಲಯ್ಯ ಒಳ್ಳೆಯವನಾಗುವುದೂ ಕಪ್ಪು ಕಾಗೆ ಬಿಳಿ ಕಾಗೆ ಆಗುವುದೂ ಒಂದೇ ದಿನ ಎಂದು ಜನರು ಬಲ್ಲರು.

ಸತ್ಕಾರ್ಯಕ್ಕೆ ಕಂಟಕವಾದ ಈ ಪ್ರೇತಬಾಧೆಯಿಂದ ಹೇಗೆ ಪಾರಾಗುವುದೆಂದು ಪರದಾಡುತ್ತಿದ್ದ ರಾಜಪ್ಪನವರ ನೆರವಿಗೆ ಬಂದದ್ದು ನೆರೆಮನೆಯ ನರೇಶ.

ಅಯ್ಯೋ, ಇಂಥದ್ದೆಲ್ಲಾ ಬರೀ ಆರಂಭಶೂರತ್ವ ರಾಜಪ್ಪನೋರೇ. ಕಡೇವರೆಗೂ ಉಳಿಯುವುದು ಅವರವರ ಹುಟ್ಟುಗುಣಕ್ಕೆ ಅನುಸಾರಿಯಾದ ಸ್ವಭಾವ ಮಾತ್ರ. ಇವನೂ ಅಷ್ಟೇ. ನಿಮ್ಮಂಥಾ ಸತ್ತ್ವಭಾವದವರ ಬಳಿ ಹೆಚ್ಚು ಕಾಲ ನಿಲ್ಲಲ್ಲ. ಈಗ ನೀವು ಅವನಿಂದ ಸ್ವಲ್ಪ ತಪ್ಪಿಸಿಕೊಂಡರೆ ಸಾಕು, ಅವನೇ ದೂರ ಹೋಗ್ತಾನೆ.'' ಹೀಗೆಲ್ಲ ಉಪದೇಶ ನೀಡಿದ್ದೂ ಅಲ್ಲದೆ ತಪ್ಪಿಸಿಕೊಳ್ಳುವ ಮಾರ್ಗವನ್ನೂ ಸೂಚಿಸಿದ.

ಆದರಂತೆ ಬಸವರಾಜಪ್ಪ ತನ್ನ ಅನಾರೋಗ್ಯದ ನಿಮಿತ್ತ ತಾನು ಕೆಲವು ಸಮಯ ವಿಶ್ರಾಂತಿಗಾಗಿ ಯಾವುದಾದರೂ ಬೆಟ್ಟದ ಮೇಲಿನ ವಿಶ್ರಾಂತಿಧಾಮಕ್ಕೆ ತೆರಳುತ್ತಿದ್ದೇನೆಂದು ಘೋಷಿಸಿದರು. ಕೂಡಲೇ ಕಲ್ಲಯ್ಯ ಮಾಯ !

ಛಲಬಿಡದ ರಾಜಾ ತ್ರಿವಿಕ್ರಮನನ್ನನುಸರಿಸಿ ನಡೆಯುವುದರಲ್ಲಿ ನಿಸ್ಸೀಮನಾದ ಕತ್ತೇಗಾಲ 'ರಾಜಪ್ಪ ತಪ್ಪಿದರೇನು, ಧರ್ಮಪ್ಪನಿಲ್ಲವೇ ?' ಎಂದು ಆಲೋಚಿಸಿದ. ಅಂತೆಯೇ ಸೀದಾ ಧರ್ಮಪ್ಪನ 'ಧರ್ಮಸದನ'ಕ್ಕೆ ನುಗ್ಗಿ, ಅಲ್ಲಿಯೇ ಆಸೀನರಾಗಿದ್ದ ಧರ್ಮಪ್ಪನವರನ್ನು ಕಂಡ. 'ಸತ್ಯಂವದ ಧರ್ಮಂ ಚರ', 'ಧರ್ಮೋ ರಕ್ಷತಿ ರಕ್ಷಿತಃ' ಇತ್ಯಾದಿ ವಾಕ್ಯಗಳ ಬಗ್ಗೆ ಭಾಷಣ ನೀಡುತ್ತಿದ್ದ ಧರ್ಮಪ್ಪನವರು ಅಲ್ಲಿ ನೆರೆದಿದ್ದ ಸಕಲ ಸಜ್ಜನರಿಗೂ ''ಸತ್ಯವನ್ನೇ ನುಡಿಯಿರಿ, ಧರ್ಮದಲ್ಲೇ ನಡೆಯಿರಿ, ನೀವು ಧರ್ಮವನ್ನು ರಕ್ಷಿಸಿದರೆ, ಧರ್ಮವು ನಿಮ್ಮನ್ನು ಕಾಪಾಡುತ್ತದೆ'' ಎಂದು ಉಪದೇಶಿಸುತ್ತಿದ್ದರು.

ಕತ್ತೇಗಾಲನ ಕಿವಿಗೆ ಅದು ಹೀಗೆ ಕೇಳಿಸಿತು – ''ಸತ್ಯಂ ವಧ ಧರ್ಮಂ ಚರ ಅಂದರೆ, ನೀವು 'ಸತ್ಯ'ವನ್ನು ವಧಿಸಿದಾಗ 'ಧರ್ಮ'ವು ಅಲ್ಲಿಂದ ಚಲಿಸಿ ಓಡಿ ಹೋಗುತ್ತದೆ. ನೀವು ಧರ್ಮವನ್ನು ರಕ್ಷಿಸಿದರೆ ಅದು ನಿಮ್ಮನ್ನು ಶಿಕ್ಷಿಸುತ್ತದೆ. ಆದ್ದರಿಂದ ಧರ್ಮವನ್ನು ಬಿಡಿ. ಸತ್ಯವನ್ನು ಜಡಿ, ಮಿಥ್ಯವನ್ನು ಎತ್ತಿ ಹಿಡಿ. ಅನ್ಯಾಯದ ಕೈ ಹಿಡಿ; ನ್ಯಾಯವನ್ನು ಮಾಡಿ ಪುಡಿ !.....''

ಕತ್ತೇಗಾಲನಿಗೆ ಪರಮಾನಂದವಾಯಿತು. ಭಾಷಣ ಮುಗಿಯುತ್ತಿದ್ದಂತೆಯೇ ಧರ್ಮಪ್ಪನ ಕಾಲಿಗೆ ಅಡ್ಡಬಿದ್ದು ''ನಾನು ಇಂದಿನಿಂದ ನಿಮ್ಮ ಶಿಷ್ಯನಾಗಿದ್ದೇನೆ, ಕೈಬಿಡಬಾರದು'' ಎನ್ನುತ್ತ ಅವರ ಕಾಲನ್ನು ಗಟ್ಟಿಯಾಗಿ ಹಿಡಿದ. ಇವನು ಹಿಡಿದ ವೈಖರಿಗೆ ಧರ್ಮಪ್ಪ ತತ್ತರಿಸಿದರು. ಬೀಳುವಂತಾದರು. ಕೂಡಲೆ ಅಲ್ಲಿದ್ದ ಕಂಬವೊಂದನ್ನು ಆಧರಿಸಿ ನಿಂತು ತನ್ನ ಕಾಲನ್ನು ಬಿಡುವಂತೆ ಕೇಳಿಕೊಂಡರು. ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರೆ ಮಾತ್ರ ಕಾಲು ಬಿಡುವುದಾಗಿ ಪಟ್ಟುಹಿಡಿದ ಕತ್ತೇಗಾಲ. ಇತರ ಸಜ್ಜನರು ತನ್ನ ಹಿಡಿತದಿಂದ ತಪ್ಪಿಸಿಕೊಂಡಿದ್ದನ್ನಾತ ಮರೆತಿರಲಿಲ್ಲ. ಆದ್ದರಿಂದ ಈ ಸಲ ಹಿಡಿತವನ್ನು ಬಿಗಿಗೊಳಿಸಿದ.

''ಈತ ಕೆಟ್ಟ ನರಹುಳ ಹೌದಾದರೂ, ಆತನಿಗೂ ಒಳ್ಳೆಯ ಬುದ್ಧಿ ಬರಬಾರದೆಂದು ಎಲ್ಲಿದೆ ? ತಮ್ಮೊಂದಿಗೆ ಸೇರಿ ಆತನೊಬ್ಬ ಸತ್ಪ್ರಜೆಯಾಗಿ ಮಾರ್ಪಾಡು ಹೊಂದಿದರೆ, ದೇಶಕ್ಕೆ ತಮ್ಮಿಂದ ಕಿಂಚಿತ್ತಾದರೂ ಒಳ್ಳೆಯದು ಆದೀತು ಎಂದು ತಾನು ಸಮಾಧಾನ ಪಟ್ಟುಕೊಳ್ಳಬಹುದು'' ಎಂದು ಆಲೋಚಿಸಿ ಧರ್ಮಪ್ಪ ಒಪ್ಪಿಗೆಯಿತ್ತರು. ಕತ್ತೇಗಾಲ ಕಾಲುಬಿಟ್ಟ.

ಧರ್ಮಪ್ಪನವರು ಎಣಿಸಿದಂತೆ ಇರಲಿಲ್ಲ ಈ ಕತ್ತೇಗಾಲ. ಕೊಳೆಯನ್ನು ತೊಳೆದಂತೆ ಆತನಲ್ಲಿರುವ ಕಶ್ಮಲವನ್ನು ತೊಡೆದುಹಾಕಬಹುದೆಂದು ಅವರು ಭಾವಿಸಿದ್ದರು. ಹೊರಗೆ ಮಾತ್ರ ಕೊಳೆಯಾದರೆ

ಅದನ್ನು ತೊಳೆದು ಶುದ್ಧ ಮಾಡಬಹುದು. ಆದರೆ ಅವನೇ ಒಂದು ಕೊಳೆಯಾಗಿದ್ದರೆ ? ಅದನ್ನವರು ಆಲೋಚಿಸಲಿಲ್ಲ. ಸುಳ್ಳು, ವಂಚನೆ, ದುಷ್ಟಬುದ್ಧಿಗಳಿಂದಲೇ ತಯಾರಾದ ಸ್ವರೂಪ ಅವನದು. ಆದ್ದರಿಂದ ದುಷ್ಟತನವನ್ನು ಅವನಿಂದ ದೂರ ಮಾಡುವುದು ಎಂದರೆ ಸಮುದ್ರದ ನೀರನ್ನು ಖಾಲಿ ಮಾಡಲು ಹೊರಟಂತೆಯೇ ಸರಿ.

ಈ ಸೂಕ್ಷ್ಮತೆಯ ಅರಿವಿಲ್ಲದೆ ಈತನೊಬ್ಬ 'ಸುಪಾಪಿ'ಯಾಗಿರಲಿಕ್ಕೆ ಸಾಕು, ಈತನನ್ನು ಕೈಲಾದಷ್ಟು ಉದ್ಧರಿಸಿಬಿಡುವ ಎಂದು ಕಾರ್ಯತತ್ಪರರಾದರು ಧರ್ಮಪ್ಪನವರು. ಆತನನ್ನು ಆದಷ್ಟು ತನ್ನೊಂದಿಗೇ ಇರಿಸಿಕೊಂಡು, ಸಣ್ಣಪುಟ್ಟ ಸತ್ಕಾರ್ಯಗಳನ್ನು ಅವನಿಂದ ಮಾಡಿಸತೊಡಗಿದರು.

ಅಂಥರಿಗಾಗಿ ಸಂಗೀತವೇ ಮೊದಲಾದ ವಿವಿಧ ಸ್ಪರ್ಧೆಗಳನ್ನೇರ್ಪಡಿಸಿದ್ದರು ಧರ್ಮಪ್ಪನವರು. ವಿಜೇತರಿಗಾಗಿ ಹಣವನ್ನೇ ಬಹುಮಾನವನ್ನಾಗಿ ಇರಿಸಿದ್ದರು. ಬಹುಮಾನದ ಹಣವನ್ನು ಬೇರೆ ಬೇರೆ ಕವರ್‌ನಲ್ಲಿ ಹಾಕಿಡುವ ಕೆಲಸವನ್ನು ಕತ್ತೇಗಾಲನಿಗೆ ಒಪ್ಪಿಸಿದರು.

''ಈ ಕುರುಡರಿಗೆ ಎಷ್ಟು ಕೊಟ್ಟರೇನು ? ಹೇಗಿದ್ದರೂ ಇವರಿಗೆ ಕಣ್ಣು ಕಾಣಿಸುವುದಿಲ್ಲವಲ್ಲ'' ಎಂದು ಆಲೋಚಿಸಿ ಐನೂರು ಇಡುವಲ್ಲಿ ನೂರು, ನೂರು ಇಡುವಲ್ಲಿ ಆರು ಇಟ್ಟು ಕವರ್‌ಅನ್ನು ಅಂಟಿಸಿಟ್ಟ ಕತ್ತೇಗಾಲ ಉಳಿದ ಹಣವನ್ನು ನಿರ್ಯೋಚನೆಯಿಂದ ನುಂಗಿ ನೀರು ಕುಡಿದ.

ಮುಂದೆ ಅಂಧರ ಶಿಕ್ಷಕರಿಂದ ವಿಷಯ ತಿಳಿದು ಹೌಹಾರಿದ ಧರ್ಮಪ್ಪನವರಿಗೆ, ಹಣ ತಿಂದವರು ಆ ಶಿಕ್ಷಕರೇ ಆಗಿರಬೇಕೆಂದು ಚುಚ್ಚಿಕೊಟ್ಟ. ಧರ್ಮಪ್ಪನವರು ಬೇರೆ ಹಣ ಕಳುಹಿಸಿಕೊಟ್ಟರಾದರೂ, ಧರ್ಮಪ್ಪನವರಲ್ಲೂ - ಅಂಧರ ಶಿಕ್ಷಕರಲ್ಲೂ ಒಂದು ಬಗೆಯ ಅಸಮಾಧಾನ ಉಳಿದೇಹೋಯಿತು.

ಒಮ್ಮೆ ಧರ್ಮಪ್ಪನವರು ಸಾವಿರಾರು ಬಡ ಮಕ್ಕಳಿಗಾಗಿ ಊಟ, ಪುಸ್ತಕ ವಿತರಣೆ, ವಸ್ತ್ರದಾನ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಆಗ ಕತ್ತೇಗಾಲನಿಗೆ ಸುಗ್ಗಿಕಾಲ ! ಒಳ್ಳೆಯ ಅಕ್ಕಿ ಬದಲಿಗೆ ಕೆಟ್ಟ ಅಕ್ಕಿ, ತಾಜಾ ತರಕಾರಿಯ ಬದಲಿಗೆ ಕೊಳೆತಿದೆಯೆಂದು ತರಕಾರಿಯವರು ಬಿಸುಟ ತರಕಾರಿ, ಹತ್ತು ಕೆ.ಜಿ. ಬೇಳೆ ಬೇಕಿದ್ದರೆ ಕೇವಲ ನಾಲ್ಕು ಕೆ.ಜಿ. ಬೇಳೆ, ಹೀಗೆಲ್ಲ ಬೇಕಾದಷ್ಟು ರಂಪ ಮಾಡಿ, ಅಡುಗೆಯನ್ನೆಲ್ಲಾ ಲಗಾಡಿ ತೆಗೆದ. ಸುಳ್ಳು ರಶೀದಿಗಳನ್ನು ತೋರಿಸಿ ಹಣ ಲಪಟಾಯಿಸಿದ. ಪುಸ್ತಕ, ಬಟ್ಟೆಗಳಿಗೆಂದು ಕೊಟ್ಟ ಹಣದಲ್ಲೂ ಇವನದು ಸಿಂಹಪಾಲು.

ತನ್ನ ಗುಟ್ಟು ಹೊರಬೀಳಬಾರದೆಂದು ಚಾಡಿ ತರಲೆ ಮಾಡಿ ಸ್ನೇಹಿತರಲ್ಲಿ ಭಿನ್ನಾಭಿಪ್ರಾಯ ಮೂಡಿಸಿದ್ದ. ಧರ್ಮಪ್ಪನವರ ಅನುಚರರಲ್ಲಿ ಒಡಕು ದ್ವೇಷ ಹುಟ್ಟಿಸುವುದರಲ್ಲಿ ಪ್ರಚಂಡ ಯಶಸ್ಸನ್ನೂ ಗಳಿಸಿದ್ದ.

ಎಲ್ಲಾ ಕಡೆಗಳಿಂದ ಧರ್ಮಪ್ಪನವರ ಕೆಲಸಗಳಿಗೆ ಕೆಟ್ಟ ಹೆಸರು ಮೆತ್ತಿಕೊಳ್ಳತೊಡಗಿತು. ಧರ್ಮಪ್ಪನವರು ಚಿಂತಿತರಾಗಿ ಹಾಸಿಗೆ ಹಿಡಿದರು. ವಿಷಯ ತಿಳಿದ ಸಂಜೀವರಾಯರು, ಸೇತುಮಾಧವರಾಯರು ಹಾಗೂ ಬಸವರಾಜಪ್ಪನವರು ಧರ್ಮಪ್ಪನವರನ್ನು ನೋಡಲು ಬಂದರು. ಈ ತ್ರಿಮೂರ್ತಿಗಳು ಒಟ್ಟಿಗೆ ಬರುವುದಕ್ಕೂ, ಕತ್ತೇಗಾಲ ಯಾವುದೋ ಕೆಲಸದ ನಿಮಿತ್ತ ಅವಸರದಿಂದ ಹೊರಗೆ ಹೋಗುವುದಕ್ಕೂ ಸರಿಯಾಯ್ತು.

ಧರ್ಮಪ್ಪ ಧರ್ಮಸಂಕಟಕ್ಕೆ ಸಿಲುಕಲು ಕಾರಣವೇನೆಂದು ಚಿಂತಿಸುತ್ತಿದ್ದ ಅವರುಗಳಿಗೆ ಈಗ ಉತ್ತರ ಸಿಕ್ಕಿತ್ತು. ನೇರವಾಗಿ ಧರ್ಮಪ್ಪನವರ ಬಳಿಗೆ ಹೋಗಿ, ಮೊದಲು ಕತ್ತೇಗಾಲನನ್ನು ಕತ್ತೆ ಒದೆಯುವ ಹಾಗೆ ಒದ್ದು ಹೊರಹಾಕುವಂತೆ ಈ ತಂಡ ಬೋಧಿಸಿತು. ಮಾತ್ರವಲ್ಲ, ಧರ್ಮಪ್ಪನ ಆಪ್ತ ಅನುಯಾಯಿಗಳನ್ನು ಕರೆಯಿಸಿ, ಕತ್ತೇಗಾಲನ ದುಷ್ಟ ಕಾರ್ಯಾಚರಣೆಯ ಬಗ್ಗೆ ವಿವರಣಾತ್ಮಕ ಹೇಳಿಕೆ ನೀಡಿ ಎಚ್ಚರಿಸಿತು.

ಸಜ್ಜನರ ಹಿತನುಡಿಗಳನ್ನಾಲಿಸಿ, ಚಿತೆಯತ್ತ ತಳ್ಳುತ್ತಿದ್ದ ಚಿಂತೆಯಿಂದ ಮುಕ್ತರಾದ ಧರ್ಮಪ್ಪನವರು, 'ಇಲ್ಲಿನ ಒತ್ತಡದಿಂದ ಪಾರಾಗಲು ಹಾಗೂ ಆರೋಗ್ಯವನ್ನು ಸಂಪಾದಿಸಲು, ಸಚಿವರುಗಳಂತೆ ಸದ್ಯದಲ್ಲೇ ತಾನು ವಿದೇಶ ಪ್ರವಾಸ ಕೈಗೊಳ್ಳುವ ಯೋಜನೆ ಹಾಕಿರುವುದರಿಂದ ತಾತ್ಕಾಲಿಕವಾಗಿ ತನ್ನ ಕಾರ್ಯಾಚರಣೆಗಳನ್ನು ಸ್ಥಗಿತಗೊಳಿಸಿರುವುದಾಗಿ' ಕತ್ತೇಗಾಲನಿಗೆ ಮಾತ್ರ ತಿಳಿಸಿದರು.

'ತಿನ್ನಲು ಸಿಗದ ಮೇಲೆ ಇಲ್ಲೇನು ಕೆಲಸ ? ತನಗೆ ತಿನ್ನಲಿಕ್ಕುವ ಒಳ್ಳೆಯ ಮಿಕ ಇನ್ನೆಲ್ಲಿಯಾದರೂ ಸಿಕ್ಕೀತು' ಎಂದು ಲೆಕ್ಕಾಚಾರ ಹಾಕುತ್ತ ಕತ್ತೇಗಾಲ ಅಲ್ಲಿಂದ ಕಾಲು ಕಿತ್ತ. ಕೂಡಲೇ ತನ್ನ ಸತ್ಕಾರ್ಯಗಳನ್ನು ಮುಂದುವರಿಸಿದ ಧರ್ಮಪ್ಪ ಮತ್ತೆ ಯಾವಾಗಲೂ ಜಾಗೃತರಾಗಿದ್ದರು.

''ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ;
ದುರ್ಜನರ ಸಂಗವದು ಹೆಜ್ಜೇನು ಕಡಿದಂತೆ''

ಎಂಬ ಫಲಕವನ್ನು ತೂಗುಹಾಕಿ, ದಿನಕ್ಕೆ ಹತ್ತಾರು ಬಾರಿ ಅದನ್ನು ಮಂತ್ರದಂತೆ ಪುನರುಚ್ಚರಿಸುತ್ತ 'ಹೆಜ್ಜೇನಿನ' ಕಡಿತಕ್ಕೆ ಮತ್ತೆಂದಿಗೂ ಸಿಲುಕದೇ ಇದ್ದರು.

**ಸತ್ಯವತಿ**
'ಕೌಸ್ತುಭ', ಮೈದಾನ ರಸ್ತೆ, ಸುರತ್ಕಲ್ - ೫೭೪ ೧೫೮, ಮಂಗಳೂರು

## ಸಾದರ ಸ್ವೀಕಾರ

**ಯಶವಂತನ ಯಶೋಗೀತ (ಮಕ್ಕಳ ಕಾದಂಬರಿ)**
*ಆರ್.ವಿ.ಭಂಡಾರಿ*
ಪು: ೧೪೪ ಬೆಲೆ ರೂ: ೫೦

**ನಾಯಿಬಾಲ (ಲಾರಿ ನಾಟಕ)**
*ಪ್ರೊ॥ ವೇಣುಗೋಪಾಲ ಕಾಸರಗೋಡು*
ಪು : ೬೪ ಬೆಲೆ ರೂ : ೩೫

**ಪ್ರಾಚೀನ ಭಾರತದಲ್ಲಿ ಅಂಧಶ್ರದ್ಧೆಗೆ ಎದುರಾಗಿ ವಿಜ್ಞಾನ (ವೈಚಾರಿಕ ಲೇಖನ)** *ಎಸ್. ಜಿ. ಸರ್ದೇಸಾಯಿ.*
*ರೂಪಾಂತರ : ಕೆ. ಎಲ್. ಗೋಪಾಲಕೃಷ್ಣ ರಾವ್*
ಪು: ೪೮ ಬೆಲೆ ರೂ : ೧೮

**ಬಾಳೆಹಣ್ಣು ಮತ್ತು ಬ್ಲಡ್ ಪ್ರೆಷರ್ (ಲೇಖನಗಳು)**
*ಡಾ॥ ಸ. ಜ. ನಾಗಲೋಟಿಮಠ*
ಪು: ೯೬ ಬೆಲೆ ರೂ: ೪೦

**ರುಚಿರುಚಿ (ಅಡಿಗೆ)** *ವಿಮಲಾ ಶೇಷಾದ್ರಿ*
ಪು: ೬೪ ಬೆಲೆ ರೂ: ೨೫
*ಮೇಲಿನ ಐದು ಪುಸ್ತಕಗಳ ಪ್ರಕಾಶಕರು*
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೧

**ಪಟ ಪಟ ಪಟಾಕಿ (ವಿನೋದ ವ್ಯಂಗ್ಯ ಬರಹಗಳು)**
*ಕು. ಗೋ.*
ಪು : ೫೬ ಬೆಲೆ ರೂ : ೨೫
ಸು.ಹಾ.ಸಂ. ವಾಗ್ದೇವಿ
ಹಯಗ್ರೀವ ನಗರ, ಉಡುಪಿ - ೫೭೬ ೧೦೨

**ನನ್ನ ದೇವರು (ಶಿಶು ಗೀತೆಗಳು)** *ನ.ಭ.ನೆಂಪು*
ಪು: ೨೮ ಬೆಲೆ ರೂ: ೧೮
ನೆಂಪು ಪ್ರಕಾಶನ, 'ಸಂಹಿತಾ', ಅಚ್ಯುತನಗರ
೨ನೇ ಹಂತ, ಪರ್ಕಳ - ೫೭೬ ೧೨೩ ಉಡುಪಿ

**ತೀರ್ಪು (ಕಥಾ ಸಂಕಲನ)** *ಚಂದ್ರಶೇಖರ ಪಾತೂರು*
ಪು: ೭೬ ಬೆಲೆ ರೂ: ೨೫
ವಿಕಾಸ ಬಳಗೆ, ಮುಡಿಪು, ಅಂಚೆ-ಕುರ್ನಾಡು,
ಬಂಟ್ವಾಳ ತಾಲೂಕು, ದ.ಕ. - ೫೭೪ ೧೫೩

**ಗುಜರಾತಿನಲ್ಲಿ ಗಾಂಧಿ ಆತ್ಮ (ಕವನ ಸಂಕಲನ)**
*ಜೆ. ಕಲೀಂಬಾಷ*
ಪು: ೫೪ ಬೆಲೆ ರೂ. : ೩೬
ಸಮೀರ್ ಪ್ರಕಾಶನ, ಸೋಫಿಯಾ ಸದನ
೩ನೇ ಮುಖ್ಯ ರಸ್ತೆ, ೩ನೇ ಅಡ್ಡರಸ್ತೆ, ವಿದ್ಯಾನಗರ
'ಬಿ' ಬ್ಲಾಕ್, ಹರಿಹರ - ೫೭೭ ೬೦೧

**ಕರ್ಣಾಟಕ-ಕರ್ನಾಟಕ-ಕನ್ನಡ ಏಕೀಕರಣ (ಲೇಖನಗಳು)** *ಕೂ. ಗಿ. ಗಿರಿಯಪ್ಪ*
ಪು: ೬೨ ಬೆಲೆ ರೂ: ೨೦
ಮಧು ಪ್ರಕಾಶನ, ಭಾರತೀಯ ಜನಸಂಖ್ಯಾ
ನಿಯಂತ್ರಣ ಯೋಜನಾ ಆಸ್ಪತ್ರೆ ಹಿಂಭಾಗ,
ಕೊಳಾಯಿ ಮನೆ ಮಾರ್ಗ, ಕನಕಪುರ-೫೬೨ ೧೧೭
ಬೆಂಗಳೂರು ಗ್ರಾಮಾಂತರ ಜಿಲ್ಲೆ

**ಟ.ವಿ.ವೆಂಕಟರಮಣಯ್ಯ ಸಂಪಾದಿಸಿದ ಸೂಕ್ತಿ ಸಂಗ್ರಹ ಕೃತಿಗಳು**

| | | |
|---|---|---|
| ಮನುಷ್ಯ | ಪು: ೬೪ | ಬೆಲೆ ರೂ: ೨೦ |
| ಮನೆ | ಪು: ೪೪ | ಬೆಲೆ ರೂ: ೨೦ |
| ಸಂಸಾರ | ಪು: ೧೫ | ಬೆಲೆ ರೂ: ೧೫ |
| ಭಯ | ಪು: ೩೨ | ಬೆಲೆ ರೂ: ೧೫ |
| ಆತ್ಮವಿಶ್ವಾಸ | ಪು: ೨೪ | (ಉಚಿತ್) |
| ಅಹಂಕಾರ | ಪು: ೩೨ | ಬೆಲೆ ರೂ: ೧೫ |
| ಅಸೂಯೆ | ಪು: ೩೨ | ಬೆಲೆ ರೂ: ೧೦ |

ಟ. ವಿ. ವೆಂಕಟರಮಣಯ್ಯ:
ಇಡಬ್ಲ್ಯುಎಸ್ ೨೧೮, ಕೆ.ಎಚ್.ಬಿ. ಕಾಲನಿ
೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯

# ಕ್ಯೂ...

## ಬೃಂದಾ ಎನ್. ರಾವ್

ನಮ್ಮ ಭಾಷೆಯಲ್ಲಿ ವಿಶಿಷ್ಟವಾದ ಗುಣವಾಚಕವೊಂದಿದೆ – 'ಹನುಮಂತನ ಬಾಲ' ಅಂತ. ಉದ್ದವಾಗಿರುವ ಏನನ್ನಾದರೂ ವರ್ಣಿಸಬೇಕಾದರೆ, ಅದರಲ್ಲಿಯೂ ಎಲ್ಲಾದರೂ ಕಂಡುಬಂದ 'ಕ್ಯೂ' ಎಷ್ಟು ಉದ್ದ ಇತ್ತು ಎನ್ನುವುದನ್ನು ವಿವರಿಸಬೇಕಾದರೆ ನಮಗೆ ದೊರಕುವ ಪದ ಇದೇ. 'ಅಯ್ಯೋ! ಆ ಕ್ಯೂ ಅಂತೂ ಕೇಳಲೇಬೇಡ, ಹನುಮಂತನ ಬಾಲ!' ಅಂತ ಕ್ಯೂನಲ್ಲಿ ನಿಂತು ಸುಸ್ತಾಗಿ ಬಂದವರು ಉದ್ಗರಿಸುವುದನ್ನು ನೀವು ಕೇಳೇ ಇರುತ್ತೀರಿ. ಈ ಬಾಲವನ್ನು ತನ್ನ ಗದೆಯಿಂದ ಅಲ್ಲಾಡಿಸಲು ಭೀಮನ ಕೈಯಲ್ಲೂ ಸಾಧ್ಯವಾಗಿರಲಿಲ್ಲವಂತೆ. ಈ ಕಲಿಯುಗದಲ್ಲಿಯೂ ಹನುಮಂತನು ತನ್ನ ಬಾಲವನ್ನು ಕ್ಯೂ ರೂಪದಲ್ಲಿ ನಮ್ಮ ದೇಶದಲ್ಲಿ ಬೇರೂರಿಬಿಟ್ಟಿದ್ದಾನೆ. ಅದಕ್ಕೇ ನೋಡಿ, ನಿಮ್ಮ ಯಾವ ಕೆಲಸ ನೆರವೇರಬೇಕಾದರೂ ಅತ್ಯಾವಶ್ಯಕವಾದ, ಆದರೆ ಅತಿ ಕಷ್ಟಕರವಾದ, ಅಹಿತಕರವಾದ ಹಾಗೂ ತಪ್ಪಿಸಿಕೊಳ್ಳಲಾರದ ಒಂದೇ ಒಂದು ಮಾರ್ಗವೆಂದರೆ ಈ ಕ್ಯೂ. ನಮ್ಮ ದೇಶದ ಜನಸಂಖ್ಯೆ ಸ್ಫೋಟಿಸಿ ಮುನ್ನುಗ್ಗುತ್ತಿದ್ದಂತೆಯೇ, ಈ ಹನುಮ ತನ್ನ ಬಾಲವನ್ನು ಇನ್ನಷ್ಟು ಉದ್ದಕ್ಕೆ ಚಾಚಿ, ಮತ್ತಷ್ಟು ಆಳವಾಗಿ ಬೇರೂರುವ ಸಂಭವವೇ ಹೆಚ್ಚು.

ನಮ್ಮ ಮುಂದಿನ ಪೀಳಿಗೆಗೆ ಸಣ್ಣವಯಸ್ಸಿನಿಂದಲೇ ಶಿಸ್ತಿನ ಬಗ್ಗೆ ಅರಿವು ಮೂಡಿಸಬೇಕೆಂಬ ಸದುದ್ದೇಶದಿಂದ ನಮ್ಮ ಶಿಕ್ಷಣತಜ್ಞರು ಬಹಳ ಹಿಂದೆ, ಪ್ರಾಥಮಿಕ ಪಠ್ಯಪುಸ್ತಕವೊಂದರಲ್ಲಿ 'ಸರತಿಯ ಸಾಲು' ಎಂಬ ಪಾಠವೊಂದನ್ನು ಸೇರಿಸಿದ್ದರು. ಆ ಪಾಠವು ನಮ್ಮ ಮಕ್ಕಳ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲವೆಂದು ತೋರುತ್ತದೆ. ಆದ್ದರಿಂದಲೇ ಇರಬೇಕು ಅದನ್ನು ಪಟ್ಟಿಯಿಂದ ತೆಗೆದುಹಾಕಿಬಿಟ್ಟಿದ್ದಾರೆ. ಹಾಗೆ ನೋಡಿದರೆ ನಮ್ಮ ಜನಗಳಿಗೆ ಪಾಠದ ಮೂಲಕ ಕ್ಯೂ ಬಗ್ಗೆ ಹೇಳಿಕೊಡಬೇಕಾದ ಅವಶ್ಯಕತೆ ಏನೂ ಇಲ್ಲ. ಶಿಸ್ತಿನ ಕ್ಯೂ ಅನ್ನು ನೋಡಿ ಮೆಚ್ಚುವಷ್ಟು ಬುದ್ಧಿ ಅವರಿಗೆ ಸ್ವಂತವಾಗಿಯೇ ಇದೆ! (ಅದನ್ನು ಪಾಲಿಸಬೇಕೆಂಬುವಷ್ಟು ವಿವೇಚನೆ ಇಲ್ಲದಿದ್ದರೂ). ಉದಾಹರಣೆಗೆ, ಹೊರದೇಶಗಳಿಗೆ ಹೋಗಿ ಬಂದವರು ಅಲ್ಲಿಯ ಜನರ ಶಿಸ್ತಿನ ಬಗ್ಗೆ ಉದ್ಗಾರ ಮಾಡುವುದನ್ನು ಕೇಳೇ ಇರುತ್ತೀರ: ''ನಿಜವಾಗಿಯೂ ಅಲ್ಲಿಯ ಜನ ಅಂತು ಅದೇನು ಶಿಸ್ತು ಅಂತೀರಾ? ಒಬ್ಬರಾದರೂ ಕ್ಯೂ ಬ್ರೇಕ್ ಮಾಡಲ್ಲಪ್ಪ. ಅವರನ್ನು ನೋಡಿ ನಮ್ಮವರು ಕಲೀಬೇಕು. ನಮ್ಮ ಜನಾನೂ ಇದಾರಲ್ಲ!'' ಅಂತ ಅವರನ್ನು ಹೊಗಳುತ್ತಾ ಜೊತೆಯಲ್ಲಿಯೇ ನಮ್ಮವರನ್ನು ತೆಗಳುತ್ತಾ, ನೀವು ನೋಡುತ್ತಿದ್ದಂತೆಯೇ ತಾವೇ ಕ್ಯೂ ಬ್ರೇಕ್ ಮಾಡಿ ನಿಮಗಿಂತಲೂ ಮುಂದೆ ಹೋಗಿಬಿಟ್ಟಿರುತ್ತಾರೆ!

ಹಾಗೆ ನೋಡಿದರೆ ಕ್ಯೂ ಬಗ್ಗೆ ಕಲಿಯಲು ಫಾರಿನ್ನಿಗೇ ಹೋಗಬೇಕಾಗಿಲ್ಲ. ಈ ಪಾಠ ಕಲಿಸಲು ನಮ್ಮ, ನಿಮ್ಮ ಮನೆಯ ಬೆಲ್ಲದ ಡಬ್ಬಿಗಳಿಗೆ ಮುತ್ತಿಗೆ ಹಾಕುವ ಇರುವೆಗಳಿಗಿಂತ ಉತ್ತಮವಾದ ಹಾಗೂ ಮಾದರಿ ಶಿಕ್ಷಕರು ನಿಮಗೆಲ್ಲಿ ದೊರೆಯಲು ಸಾಧ್ಯ? ಈ ಜೀವಿಗಳಿಗೆ, ಮಾನವನಿಗಿರುವಂತೆ ಯಾವ ರೀತಿಯ ದುರಾಸೆ, ಅಸಹನೆ, ಅವಸರಗಳೂ ಇಲ್ಲ; ಅವನಂತೆ ನೂಕು ನುಗ್ಗಲು ಮಾಡಿಕೊಳ್ಳುವುದಿಲ್ಲ. ಈ ಬೆಲ್ಲದ ಡಬ್ಬಿಯ ಒಡೆಯರು ತಮ್ಮ ಮೇಲೆ ಹಲ್ಲೆ ಮಾಡಿಯಾರೆಂಬ ಕಿಂಚಿತ್ತೂ ಯೋಚನೆ ಆತಂಕಗಳಂತೂ ಇಲ್ಲವೇ ಇಲ್ಲ. ತಮ್ಮಷ್ಟಕ್ಕೆ ತಾವು ತಮ್ಮ ಕೆಲಸ ಪೂರೈಸಿಕೊಳ್ಳುತ್ತವೆ, ಅಷ್ಟೆ. ಹಾಗೆ ನೋಡಿದರೆ ಫಾರಿನ್ನಿನ ಕ್ಯೂಗಿಂತ ವಿಶಿಷ್ಟ ಕ್ಯೂ ಇವುಗಳದ್ದು. ಏಕೆಂದರೆ, ಅಲ್ಲಿಯ ಜನರಿಗೆ ಕ್ಯೂನಲ್ಲಿ ನಿಲ್ಲುವ ಬಗ್ಗೆ ತರಬೇತಿ ಇರುತ್ತದೆ. ಕ್ಯೂ ಮುರಿದರೆ ಶಿಕ್ಷೆಯಾಗಬಹುದೆಂಬ ಭಯವೂ ಇರುತ್ತದೆ. ಹೀಗಿರುವಾಗ ಅಲ್ಲಿಯ ಜನ ಕ್ಯೂ ಮುರಿಯುವುದಿಲ್ಲ ಎಂದರೆ, ಅದರಲ್ಲಿ ಅವರ ದೊಡ್ಡತನ ಏನು ಬಂತು? ಆದರೆ ಈ ಇರುವೆಗಳನ್ನು ನೋಡಿ! ಅವುಗಳು ಯಾರಿಂದಲೂ ಪಾಠ ಕಲಿತಿಲ್ಲ; ಅವುಗಳಿಗೆ ಯಾರಿಂದಲೂ ನಿಯಂತ್ರಣವೂ ಬೇಕಿಲ್ಲ. ಶಿಸ್ತೆಂಬುದು ಅವುಗಳಿಗೆ ಸ್ವಾಭಾವಿಕವಾಗಿಯೇ ಬಂದಿರುವ ಸದ್ಗುಣ!

ನಮ್ಮ ದೇಶದಲ್ಲಿ ಒಂದು ಮಗು ಜನಿಸುತ್ತಿದ್ದಂತೆಯೇ, ಅದಕ್ಕೆ ಕ್ಯೂನ ಅನುಭವವಾಗುತ್ತದೆ! ಅದು ಹೇಗಪ್ಪಾ ಎಂದು ನೀವು ಖಂಡಿತ ಹುಬ್ಬೇರಿಸುವುದಿಲ್ಲ. ನನಗೆ ಗೊತ್ತು! ಏಕೆಂದರೆ, ಅದಕ್ಕೆ ನರ್ಸರಿ ಶಾಲೆಯಲ್ಲಿ ಸೀಟು ಗಿಟ್ಟಿಸಲು ಅದರ ಅಪ್ಪನೋ, ಅಮ್ಮನೋ ಡಿಸೆಂಬರ್ - ಜನವರಿ ತಿಂಗಳ ಚಳಿಯಲ್ಲಿ, ಬೆಳಗಿನ ಝಾವ ನಾಲ್ಕು ಗಂಟೆಗೇ ಹೋಗಿ ಶಾಲೆಯ ಬಾಗಿಲಲ್ಲಿ ಕ್ಯೂ ನಿಂತಿರುವುದನ್ನು ನೀವು ನೋಡಿಯೇ ಇರುತ್ತೀರಿ. ಪ್ರಾಣಿಗಳ ಮರಿಗಳು ಜನಿಸಿದ ತಕ್ಷಣವೇ ತಮ್ಮ ಕಾಲುಗಳ ಮೇಲೆ ನಿಲ್ಲುವಂತೆ ಮಾನವನ ಹಸುಗೂಸೂ ಎದ್ದು ತನ್ನ ಕಾಲಮೇಲೆ ನಿಲ್ಲುವಂತಿದ್ದಿದ್ದರೆ, ಆ ಕೂಸೇ ಬಂದು ಕ್ಯೂ ನಿಲ್ಲಲಿ ಎಂದು ಶಾಲೆಯವರು ನಿರೀಕ್ಷಿಸುತ್ತಿದ್ದರೇನೋ! ಆದರೆ ಈ ವಿಷಯದಲ್ಲಿ ಮಾತ್ರ ಕೂಸಿನದು ಅದೃಷ್ಟವೇ. ಅದು ಜನಿಸಿದಾಕ್ಷಣ ನಿಲ್ಲಲಾರದಾದ್ದರಿಂದ ಅದರ ಪರವಾಗಿ ಬೇರೆಯವರು ಹೋದರೂ ಆಗುತ್ತದೆ.

ಇತ್ತೀಚಿನ ಪದ್ಧತಿಯ ಪ್ರಕಾರವಂತೂ ಮಗು ಗರ್ಭದಲ್ಲಿರುವಾಗಲೇ ತಂದೆ ತಾಯಿಯರು ಶಾಲೆಗೆ ಹೋಗಿ ಸೀಟು ಕಾದಿರಿಸಬೇಕಾಗುತ್ತದಂತೆ. ಆದ್ದರಿಂದ, 'ಮಕ್ಕಳ ಮೊದಲ ಪಾಠ ಮನೆಯಲ್ಲಿ' ಎನ್ನುವ ನುಡಿ ಈಗಿನ ಪರಿಸ್ಥಿತಿಯಲ್ಲಿ 'ಮಕ್ಕಳ ಮೊದಲ ಪಾಠ ಶಾಲೆಯ ಬಾಗಿಲಲ್ಲಿ' ಎಂದಾಗುತ್ತದೆ. ಅದಕ್ಕೇ ನೋಡಿ, ಜನಿಸುವ ಮೊದಲೇ ಶಾಲೆಯು ಮಕ್ಕಳಿಗೆ ಕಲಿಸಿಕೊಡುವ ಈ ಕ್ಯೂ ಪಾಠವು ಅಲ್ಲಿಂದ ಮುಂದೆ, ಕಾಲೇಜಿಗೆ ಸೇರಲು ಕ್ಯೂ, ಕಾಲೇಜಿಗೆ ಹೋಗಲು ಬಸ್ಸಿಗೆ ಕ್ಯೂ, ಅಧ್ಯಾಪಕರ ಕಣ್ಣು ತಪ್ಪಿಸಿ ಸಿನಿಮಾಗೆ ಹೋದರೆ ಅಲ್ಲಿ ಟಿಕೆಟ್ಟು ಕ್ಯೂ, ಅನಂತರ ಕೆಲಸದ ಇಂಟರ್ವ್ಯೂಗೆ ಕ್ಯೂ ಮತ್ತೆ ನೀರು, ವಿದ್ಯುತ್, ಟೆಲಿಫೋನ್ ಬಿಲ್ಲುಗಳನ್ನು ಕಟ್ಟಲು ಕ್ಯೂ, ಬಸ್ಸು ರೈಲುಗಳಿಗೆ ಟಿಕೆಟ್ಟು ಕೊಳ್ಳಲು ಕ್ಯೂ.....ಹೀಗೆ ತರಹೇವಾರಿ ಕೆಲಸಗಳಿಗಾಗಿ ಕ್ಯೂ ನಿಲ್ಲುವಲ್ಲಿ ಸದುಪಯೋಗವಾಗುತ್ತದೆ. ಇವಲ್ಲದೆ, ಅವರವರ ಆಸಕ್ತಿ ಅಭಿರುಚಿಗಳಿಗೆ ತಕ್ಕಂತೆ ನಿಲ್ಲಬೇಕಾದ ಕೆಲವು ಕ್ಯೂಗಳಿಗೆ ಪೊಲೀಸರ ನೆರವು, ನಿಯಂತ್ರಣಗಳೂ ಅವಶ್ಯಕವಾಗುತ್ತವೆ. ಉದಾಹರಣೆಗೆ, ಕ್ರಿಕೆಟ್ ಪಂದ್ಯ, ಪಾಪ್ ಸಂಗೀತ ಕಾರ್ಯಕ್ರಮ, ಫ್ಯಾಶನ್ ಶೋ ಮುಂತಾದವುಗಳಿಗೆ ಟಿಕೆಟ್ ಕೊಳ್ಳಲು ನಿಲ್ಲಬೇಕಾದ ಕ್ಯೂ ಎಷ್ಟೋ ಬಾರಿ ಇಂತಹ ಕ್ಯೂಗಳನ್ನು ಹಾಗೂ ಜೊತೆಯಲ್ಲಿರುವ ಪೊಲೀಸರನ್ನು ನೋಡಿದರೆ, ನಗರದಲ್ಲಿ ಏನೋ ಗಲಭೆ ಪ್ರಾರಂಭವಾಗಿದೆ ಎಂಬ ಅನುಮಾನ ಬಂದು, ಆತಂಕವಾಗದಿರುವುದಿಲ್ಲ. ಹೀಗೆ ವಿವಿಧ ಕ್ಯೂಗಳ ಪಟ್ಟಿ ಮಾಡುತ್ತಾ ಹೋದರೆ, ಅದೇ ಒಂದು ಹನುಮಂತನ ಬಾಲವಾಗುತ್ತದೆ.

ಸಾಧಾರಣವಾಗಿ ಜನ ಕ್ಯೂ 'ನಿಲ್ಲ'ಬೇಕಾದುದೇ ಹೆಚ್ಚು ತಾನೇ? ಆದರೆ ನೀವು ನಿಮ್ಮ ಮನೆಯ ಸೋಫಾದಲ್ಲೋ, ಆಫೀಸಿನ ಕುರ್ಚಿಯಲ್ಲೋ ಕ್ಯೂ 'ಕುಳಿತುಕೊಳ್ಳ'ಲೂ ಬಹುದು. ಅಂದರೆ, ಎಷ್ಟೋ ಆಫೀಸುಗಳಿಗೆ ನೀವು ಫೋನು ಮಾಡಿದಾಗ, 'ನೀವು ಕ್ಯೂನಲ್ಲಿದ್ದೀರಿ. ದಯವಿಟ್ಟು ನಿರೀಕ್ಷಿಸಿ' ಎಂಬ ಒಂದು ಮಧುರವಾಣಿಯು ಸಂಗೀತದ ಮಧ್ಯೆ ಮಧ್ಯೆ ಉಲಿಯುತ್ತಿರುತ್ತದೆ. ಇಲ್ಲಿ ನಿಮಗೆ ಸಮಯ, ತಾಳ್ಮೆ ಇದ್ದರೆ ಸಾಕು. ಕಾಲು ನೋಯಿಸಿಕೊಳ್ಳದೆ ಕಾಯುತ್ತಾ ಕುಳಿತಿರಬಹುದು.

ನಮ್ಮ ದೇಶದಲ್ಲಿ ಕ್ಯೂ ನಿಲ್ಲುವುದು ಬರಿಯ ಮನುಷ್ಯರು ಮಾತ್ರವಲ್ಲ. ಸೀಮೆಎಣ್ಣೆ ಕ್ಯಾನುಗಳೂ, ನೀರಿನ ಬಿಂದಿಗೆಗಳೂ ನಿಲ್ಲಬೇಕಾಗುತ್ತದೆ. ಈ ಸೀಮೆಎಣ್ಣೆ, ಈ ನೀರು ಸಾಕ್ಷಾತ್



ಪರಮಾತ್ಮನ ಅವತಾರವಿದ್ದಂತೆ. ಎಲ್ಲಿ ಯಾವಾಗ ಪ್ರತ್ಯಕ್ಷವಾಗಿ ಯಾರುಯಾರಿಗೆ ಒಲಿಯುತ್ತವೆಯೋ ತಿಳಿದಿರುವುದಿಲ್ಲ. ಈ ಅನಿಶ್ಚಿತತೆಯಿಂದಾಗಿ ತಮ್ಮ ಕೆಲಸ ಹಾಗೂ ಸಮಯ ನಷ್ಟವಾಗಬಾರದೆಂದು ಹಾಗೂ ಕಾಲು, ತಲೆ ನೋಯಿಸಿಕೊಳ್ಳಬಾರದೆಂದು ಜನಸಾಮಾನ್ಯರು ಕಂಡುಕೊಂಡಿರುವ ಮಾರ್ಗ ಇದು.

ಈ ಕ್ಯೂಗಳ ಪೈಕಿ ಎಲ್ಲದಕ್ಕಿಂತ ಹೆಚ್ಚು ಸಂಕಟ ಉಂಟು ಮಾಡುವುದೆಂದರೆ, ಹೋಟೆಲುಗಳಲ್ಲಿ ಊಟ ತಿಂಡಿಗಳ ಟೇಬಲ್ಲಿಗಾಗಿ ಕಾಯಬೇಕಾದ ಕ್ಯೂ. ನಮ್ಮಲ್ಲಿ ಕೆಲವು ಪ್ರಖ್ಯಾತ ಹೋಟೆಲುಗಳಿವೆ. ಅಲ್ಲಿಯ ನಳಪಾಕ ಸವಿಯಬೇಕೆಂದರೆ ಸಾಕಷ್ಟು ಯಾತನೆ ಅನುಭವಿಸಬೇಕು. ಅಲ್ಲಿ ಊಟದ ಟೇಬಲ್ಲುಗಳು ಬಿಡುವಾಗಿಲ್ಲದಿದ್ದರೆ, ಹೊರಗೆ ಕುರ್ಚಿಯ ಮೇಲೆ ಕೂಡಿಸಿ ಕಾಯಿಸುತ್ತಾರೆ. ಅಲ್ಲಿಯೂ ಜಾಗ ಇಲ್ಲಾಂದ್ರೆ ಹೊರಗಡೆ ಫುಟ್‌ಪಾತೇ ಗತಿ. ಹಸಿವೆಯಿಂದ ಚುರುಚುರುಗುಟ್ಟುತ್ತಿರುವ ಹೊಟ್ಟೆ, ಮೂಗು ಬಿರಿಯುವಂತೆ ತಿನಿಸುಗಳು ಸೂಸುವ ಘಮಘಮ ಪರಿಮಳ..... ಇಂತಹ ಪರಿಸ್ಥಿತಿಯಲ್ಲಿ ನಮ್ಮ ಗಮನಕ್ಕೆ ಬರುವುದೇನೆಂದರೆ, ಇತರರು ಟೇಬಲ್ಲುಗಳಿಗಾಗಿ ಹೊರಗೆ ಕಾಯುತ್ತಿದ್ದಾರೆ ಎಂಬ ಪರಿವೆಯೇ ಇಲ್ಲದೆ, ತಿಂಡಿ ತೀರ್ಥಗಳನ್ನು ಚಪ್ಪರಿಸಿ ಸವಿಯುತ್ತಿರುವ ಜನರು. ಅವರನ್ನೂ ಆಕ್ಷೇಪಿಸುವಂತಿಲ್ಲ ಬಿಡಿ. ಏಕೆಂದರೆ ಅವರು ಎದ್ದು ಹೋದಮೇಲೆ ನಾವು ಮಾಡುವುದೂ ಅದನ್ನೇ ತಾನೆ ? ಏನೇ ಆಗಲಿ, ಒಟ್ಟಿನಲ್ಲಿ ಕಾಯುವಿಕೆಯು ಒಂದು ನರಕ ಯಾತನೆ. ಇಂತಹ ಸಮಯದಲ್ಲಿ ಮನೆಯಲ್ಲಿ ಮಾಡುವ ಹುಣಿಸೆ ತಿಳಿಸಾರನ್ನು ನೆನೆಸಿಕೊಂಡರೆ, ಅದರಷ್ಟು ರುಚಿ ಬೇರೆ ಯಾವ ತಿನಿಸಿಗಿರಲು ಸಾಧ್ಯ ಎನಿಸದಿರುತ್ತದೆಯೇ ?!

ಮತ್ತೊಂದು ಜಬರದಸ್ತಿ ಕ್ಯೂ ಇದೆ. ನೂರು ರೂಪಾಯಿ ನೋಟನ್ನೋ, ಹೆಂಡದ ಬಾಟಲಿಯನ್ನೋ ಕೈಗೆ ಹಾಕಿ ಅಸಹಾಯಕ ಹಾಗೂ ನಿರ್ಗತಿಕ ಹಳ್ಳಿಗರನ್ನು ಕುರಿಮಂದೆಗಳಂತೆ ಟ್ರಕ್ಕುಗಳಲ್ಲಿ ಹೊತ್ತು ತಂದು ಜಬರದಸ್ತಿ ಓಟು ಹಾಕಿಸಿಕೊಳ್ಳುವ ಸಲುವಾಗಿ ರಾಜಕಾರಣಿಗಳ ಚಮಚಗಳು ಮತಗಟ್ಟೆಯ ಬಾಗಿಲಲ್ಲಿ ಉಂಟುಮಾಡುವ ಕ್ಯೂ. ಒಂದು ರೀತಿಯಲ್ಲಿ ಇದು ಎಷ್ಟೋ ವಾಸಿ. ಏಕೆಂದರೆ ಈ ಕ್ಯೂ ದಿನನಿತ್ಯದ ಕರ್ಮ ಅಲ್ಲ.

ಸರ್ಕಾರಿ ಆಸ್ಪತ್ರೆಗಳ ಮುಂದೆ ನಿಲ್ಲುವ ರೋಗಿಗಳ ಕ್ಯೂಅನ್ನು ನೀವು ನೋಡಿಯೇ ಇರಬೇಕು. ಇದು ಕರಗುತ್ತದೆಂಬ ಭರವಸೆ ನೀವು ಇಟ್ಟುಕೊಳ್ಳದಿದ್ದರೇ ಒಳ್ಳೆಯದು. ವಜ್ರದಷ್ಟೇ ಗಟ್ಟಿ ಇದು. 'ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ, ಗಟ್ಯಾಗಿ ಸಲಹುವನು, ಇದಕೆ ಸಂಶಯವಿಲ್ಲ' ಎಂಬ ಕನಕದಾಸವಾಣಿಯನ್ನು ಅಕ್ಷರಶಃ ನಂಬಿದ್ದಾರೆ ಇಲ್ಲಿಯ ವೈದ್ಯರು. ಆದ್ದರಿಂದಲೇ, 'ನಿನ್ನ ಕೆಲಸ ನೀನು ಮಾಡು' ಎಂದು ದೇವರಿಗೇ ಜವಾಬ್ದಾರಿ ವಹಿಸಿ ಅವರು ಕೈಕಟ್ಟಿ ಕುಳಿತಿರುತ್ತಾರೆ. ಆದರೆ ನೋಡಿ, 'ಭಾಗ್ಯದ ಲಕ್ಷ್ಮಿ' ಎಂಬ ಶಕ್ತಿಶಾಲಿ ನಾರಿ, 'ಝುಣ ಝುಣ' ಎಂದು ತನ್ನ 'ಗೆಜ್ಜೆಯ ಕಾಲ್ಗಳ ನಾದವ ತೋರುತ' ಬಂದು, 'ಮಜ್ಜಿಗೆಯೊಳಗಿನ ಬೆಣ್ಣೆಯಂತೆ' ವೈದ್ಯರ ಜೇಬನ್ನು ಹೊಕ್ಕಳೆಂದರೆ, ವಜ್ರದಂತಹ ಕ್ಯೂ ಸಹ ಆ ಬೆಣ್ಣೆಯಂತೆಯೇ ಕರಗಿಬಿಡುತ್ತದೆ. ನೋಡಿದಿರಾ ಅವಳ ಸಾಮರ್ಥ್ಯ ?

ಈ ಲಕ್ಷ್ಮಿ ಎಂಬಾಕೆ ಅದೆಷ್ಟು ಶಕ್ತಿಶಾಲಿಯೆಂದರೆ, ಸಾಕ್ಷಾತ್ ಪರಮಾತ್ಮನನ್ನೂ ಬಿಟ್ಟಿಲ್ಲ. ಅವನಲ್ಲಿಯೂ ದುರಾಸೆ ಉಂಟುಮಾಡುವುದರಲ್ಲಿ ಹಂಡ್ರೆಡ್ ಪರ್ಸೆಂಟ್ ಯಶಸ್ವಿಯಾಗಿದ್ದಾಳೆ. ಆಕಾಶದಲ್ಲಿ ಮೋಡದಿಂದಾಚೆ ಅದೆಷ್ಟು ದೂರದಲ್ಲಿ ವಾಸವಾಗಿದ್ದರೂ ಸಹ ತನ್ನ ಎಕ್ಸ್-ರೇ ಕಣ್ಣುಗಳ ನೆರವಿನಿಂದ, ಮೋಡಗಳ ಕೆಳಗೆ ಭೂಲೋಕದಲ್ಲಿ ಜನ ಯಾವ ಯಾವ ತಂತ್ರಗಳಿಂದ ಆಕೆಯನ್ನು ಒಲಿಸಿಕೊಳ್ಳುತ್ತಾರೆಂಬುದೆಲ್ಲವನ್ನೂ ಪರಮಾತ್ಮ ಕಂಡುಕೊಂಡುಬಿಟ್ಟಿದ್ದಾನೆ. ಈ ಮೂಲಕ ಆಕೆಯನ್ನು ಒಲಿಸಿಕೊಳ್ಳಲು ತಾನೂ ಒಂದು ಸುಲಭ ಮಾರ್ಗವನ್ನು ಕಲ್ಪಿಸಿಕೊಂಡಿದ್ದಾನೆ. ಅದೇನೆಂದರೆ, ಭೂಲೋಕದ ಜನ ಯಾವ ಯಾವ ಪ್ರಮಾಣದಲ್ಲಿ ಅವನಿಗೆ ಲಕ್ಷ್ಮಿಯ ದರ್ಶನ ಮಾಡಿಸುತ್ತಾರೋ ಅದಕ್ಕೆ ತಕ್ಕಂತೆ ತನ್ನ ದರ್ಶನವನ್ನು ಅವರಿಗೆ ನೀಡುವ ಏರ್ಪಾಡು ಆತ ಮಾಡಿಕೊಂಡಿದ್ದಾನೆ. ಆತನ ದರ್ಶನಕ್ಕಾಗಿ ದೇವಾಲಯಗಳ ಮುಂದೆ ವಿವಿಧ ಬೆಲೆಗಳ ಟಿಕೆಟ್ಟುಗಳ ಕ್ಯೂ ಇರುವುದೇ ಇದಕ್ಕೆ ಸಾಕ್ಷಿ. ಹೆಚ್ಚು ಬೆಲೆಯ ಕ್ಯೂನಲ್ಲಿ ನಿಂತವರಿಗೆ ಸಾಕಷ್ಟು ಬೇಗ ಹಾಗೂ ತಕ್ಕಮಟ್ಟಿಗೆ ಸಾವಕಾಶವಾದ ದರ್ಶನವನ್ನು ಆತ ನೀಡುತ್ತಾನೆ. ಒಂದು ಸಮಾಧಾನಕರವಾದ ಸಂಗತಿಯೆಂದರೆ, ಭಗವಂತನು ತೀರ ನಮ್ಮ ಸರ್ಕಾರೀ ನೌಕರರಷ್ಟು ಹದಗೆಟ್ಟಿಲ್ಲ. ಹಣ ನೀಡದವರಿಗೂ ಸಹ, ಅಂದರೆ, ಟಿಕೆಟ್ಟಿಲ್ಲದ ಧರ್ಮದರ್ಶನದ ಕ್ಯೂನಲ್ಲಿ ನಿಂತವರಿಗೂ ಸಹ, ತಡವಾಗಿಯಾದರೂ ಸರಿ ಕೆಲವು ಸೆಕೆಂಡುಗಳಷ್ಟು ಕಾಲವಾದರೂ ದರ್ಶನ ನೀಡಿಯೇ ನೀಡುತ್ತಾನೆ. ಅದು ಮಾತ್ರ ಗ್ಯಾರಂಟಿ. ಒಂದು ಗುಟ್ಟು ಯಾರಿಗೂ ಹೇಳಬೇಡಿ. ಇಪ್ಪತ್ತೋ ಇಪ್ಪತ್ತೈದೋ ಸಾವಿರಕ್ಕೂ ಮೇಲ್ಪಟ್ಟ ಕಾಣಿಕೆನ (ಅದರಲ್ಲೂ ಕಪ್ಪು ಹಣ ಇದ್ದರೆ ಭೇಷ್ !) ತಿಮ್ಮಪ್ಪನ ಪಾದದಡಿ ಇಟ್ಟು ಸೇವೆ ಸಲ್ಲಿಸಿ ಬನ್ನಿ. ವೆಂಕಟರಮಣಸ್ವಾಮಿ ಪದ್ಮಾವತಿ ಸಮೇತ ನಿಮ್ಮ ಮನೆ ಬಾಗಿಲಿಗೇ ಬಂದು ನಿಮ್ಮನ್ನು ಹರಸಿ ಹೋಗ್ತಾನೆ. ಅಲ್ಲಿ ಮಾತ್ರ ಕ್ಯೂ ಗಲಾಟೆ ಅಂದರೆ ನಿಮ್ಮ ಮನೆಯವರಿಂದಲೇ ಆಗಬೇಕಾಗುತ್ತದೆ.

ಇನ್ನು, ನಮ್ಮಲ್ಲಿಯ ಕೆಲವು ತಜ್ಞವೈದ್ಯರ ಬಳಿ ಸಲಹೆ ಪಡೆಯಬೇಕಾದ ಸಂದರ್ಭ ಎಷ್ಟೋ ಜನರಿಗೆ ಒದಗಿರಬಹುದು. ಇವರ ಸಲಹೆ ಪಡೆಯಬೇಕಾದರೆ ನಿಮ್ಮ ನಂಬರು ಮೂರೋ ನಾಲ್ಕೋ ವಾರಗಳ ಕಾಲ ಕ್ಯೂನಲ್ಲಿರಬೇಕಾಗುತ್ತದೆ. ನಿಮ್ಮ ಅದೃಷ್ಟ ಚೆನ್ನಾಗಿದ್ದರೆ, ನಿಮ್ಮ ಸರದಿ ಬರುವ ವೇಳೆಗೆ ಸ್ವಾಭಾವಿಕವಾಗಿಯೇ ನಿಮ್ಮ ಕಾಯಿಲೆ ವಾಸಿಯಾಗಿ, ಅವರಿಗೆ ಕೊಡಬೇಕಾದ ಶುಲ್ಕ, ಎಕ್ಸ್-ರೇ, ಔಷಧಿಗಳ ಖರ್ಚು – ಎಲ್ಲವೂ ಉಳಿತಾಯವಾಗಬಹುದು. ಇಲ್ಲದಿದ್ದರೆ, ನಿಮ್ಮ ಸರದಿ ಬಂದ ದಿನ, ವೈದ್ಯರನ್ನು ಕಾಣಲು ಎರಡು ಮೂರು ಗಂಟೆಗಳ ಕಾಲ ಕ್ಯೂನಲ್ಲಿ ಕಾದಿದ್ದು, ಅವರ ಸಲಹೆ ಹಾಗೂ ಚಿಕಿತ್ಸೆ ಪಡೆದು ಗುಣಮುಖರಾಗಬಹುದು. ಅದೃಷ್ಟ ನೆಟ್ಟಗಿಲ್ಲದಿದ್ದವರು, ತಮ್ಮ ಸರದಿಗಾಗಿ ಕಾದು ಕಾದು, ಕೊನೆಗೂ ಒಂದು ದಿನ ತಮ್ಮ ಕ್ಯೂವನ್ನು ಯಮಧರ್ಮರಾಯನ ದ್ವಾರಕ್ಕೆ ಸ್ಥಳಾಂತರಿಸಬೇಕಾಗಿರಬಹುದು !

ನಮ್ಮಲ್ಲಿಯ ಮತ್ತೊಂದು ಸಾಮಾನ್ಯವಾದ ಕ್ಯೂ ಎಂದರೆ ಮದುವೆ ಮನೆಗಳಲ್ಲಿಯದು. ಮದುವೆ ಮನೆಗಳಲ್ಲಿ ವಧೂವರರನ್ನು ಆಶೀರ್ವದಿಸಲು ಕ್ಯೂ ನಿಲ್ಲಬೇಕಾದ ಅನುಭವ ಯಾರಿಗೆ ತಾನೇ ಆಗಿರುವುದಿಲ್ಲ ? ಇದು ಅತ್ಯಂತ ಉದ್ದನೆಯ ಕ್ಯೂಗಳ ಪೈಕಿ ಒಂದು. ಅತ್ಯಂತ ವರ್ಣರಂಜಿತವಾದ ಹಾಗೂ ಉತ್ತಮ ಮನೋರಂಜನೆ ನೀಡುವಂತಹ ಕ್ಯೂನೂ ಹೌದು. ಬಗೆಬಗೆಯ ಹೂಗಳ ಅಲಂಕಾರ, ವಿವಿಧ ವೇಷಭೂಷಣಗಳನ್ನು ಹಾಗೂ ಒಡವೆಗಳನ್ನು ಧರಿಸಿದ ಜನ ಸುಗಂಧ ದ್ರವ್ಯಗಳನ್ನು ಎರಚುವ ಫ್ಯಾನುಗಳು, ಅವುಗಳು ಬೀಸುವ ತಂಗಾಳಿ, ನಿಮಗೆ ಬೇಕಿರಲಿ ಬಿಡಲಿ ಆರ್ಕೆಸ್ಟ್ರಾದವರು ನಿಮ್ಮ ಕಿವಿಗೆ ತೂರಿಬಿಡುವ ಪಾಪ್ ಸಂಗೀತ, ಪಕ್ಕದ ಡೈನಿಂಗ್ ಹಾಲಿನಿಂದ ಹೊರಹೊಮ್ಮುವ ಭಕ್ಷ್ಯಗಳ ಪರಿಮಳ..... ಇನ್ನೇನು ಬೇಕು ? ಪಂಚೇಂದ್ರಿಯಗಳಿಗೂ ರಸದೌತಣ ಇಲ್ಲಿ ದೊರಕಿಬಿಡುತ್ತದೆ. ಈ ಕ್ಯೂನಲ್ಲಿ ಹೀಗೇ ಮುಂದುವರಿದು, ವಧೂವರರನ್ನು ಆಶೀರ್ವದಿಸಿ, ಉಡುಗೊರೆ ನೀಡಿ, ವೀಡಿಯೋ ಫೋಟೋಗಾಗಿ ಸೀರೆಯ ನಿರಿಯನ್ನೋ ಶರ್ಟಿನ ಕಾಲರನ್ನೋ ಸರಿಪಡಿಸಿಕೊಂಡು ದೇಶಾವರಿ ನಗೆ ಬೀರಿ ಪೋಸ್ ಕೊಡುತ್ತಿದ್ದಂತೆಯೇ ಆ ಕ್ಯೂ ತಾನಾಗಿಯೇ ಡೈನಿಂಗ್ ಹಾಲಿನ ದಿಕ್ಕಿಗೆ ತಿರುಗಿಕೊಂಡುಬಿಡುತ್ತದೆ. ಇನ್ನು ಆ ಡೈನಿಂಗ್ ಹಾಲಿನ ವೈಭವ ಏನು ಕೇಳುತ್ತೀರಿ ? ಈಗಿನ ಕೆಲವು ಮದುವೆ ಮನೆಗಳಲ್ಲಂತೂ ನಮ್ಮ ದಕ್ಷಿಣದ ಬಿಸಿಬೇಳೆ ಭಾತ್, ಮಸಾಲೆದೋಸೆಗಳಿಂದ ಹಿಡಿದು ಉತ್ತರ ಭಾರತದ ಪಾನಿಪೂರಿ, ಸಮೋಸ, ಪಕೋಡಿಗಳವರೆಗೆ ಎಲ್ಲ ಪ್ರಾಂತ್ಯಗಳ ತಿನಿಸುಗಳೂ, ಅಷ್ಟೇ ಏಕೆ ಚೈನೀಸ್ ನೂಡಲ್ಸ್ ಹಾಗೂ ಗೋಬಿ ಮಂಚೂರಿಯೂ ಸಹ ನಿಮ್ಮ ಜಿಹ್ವೆಯನ್ನು ತಣಿಸಲು ಅಲಂಕೃತ ಮೇಜುಗಳ ಮೇಲೆ ನಾ ಮುಂದು ತಾ ಮುಂದು ಎಂದು ಕ್ಯೂನಲ್ಲಿ ಕಾದಿರುತ್ತವೆ. ಈ ವಿವಿಧ ತಿನಿಸುಗಳನ್ನು ಹೊತ್ತ ಪ್ರತಿಯೊಂದು ಮೇಜಿನ ಮುಂದೆಯೂ ಒಂದೊಂದು ಕ್ಯೂ ಇರುತ್ತದೆ. ಒಂದೊಂದಾಗಿ ಎಲ್ಲ ಕ್ಯೂಗಳನ್ನೂ ಸೇರುವ ಬಯಕೆ ನಿಮಗಾಗುತ್ತದೆ. ಇವೆಲ್ಲವೂ ಪುಕ್ಕಟೆ ಬೇರೆ ! ನಿಮಗೇನೂ ಬಿಲ್ಲು ಬರುವುದಿಲ್ಲ. ಅಂದಮೇಲೆ ಕೇಳಬೇಕೆ ? ಆದರೆ ಇಲ್ಲೊಂದು ಬೃಹತ್ಸಮಸ್ಯೆ. ಜಠರದ ಸಾಮರ್ಥ್ಯಕ್ಕೆ ಒಂದು ಮಿತಿ ಇರುವುದೇ ನಮ್ಮ ನಿಮ್ಮ ದುರಾದೃಷ್ಟ. ಜಿಹ್ವಾ ಚಾಪಲ್ಯಕ್ಕೆ ಸರಿದೂಗುವ ಹೊಟ್ಟೆಯನ್ನು ಭಗವಂತ ಮಾನವನಿಗೆ ಕರುಣಿಸಲಿಲ್ಲ. ಆದರೂ ಸಿಕ್ಕ ಅವಕಾಶ ಬಿಡಬಾರದೆಂದು ಎಲ್ಲ ಕ್ಯೂಗಳಲ್ಲೂ ಸೇರಿ ತಿಂದು ಬಂದಿರೋ, ನಾಳೆ ಬೆಳಿಗ್ಗೆ ವೈದ್ಯರ ಬಳಿ ಕ್ಯೂನಲ್ಲಿ ನಿಮಗೊಂದು ಸ್ಥಾನ ಗ್ಯಾರಂಟಿ. ಇತ್ತಕಡೆ ಇಂತಹ ಕ್ಯೂಗಳು ಕಂಡುಬಂದರೆ, ಮತ್ತೊಂದು ಕಡೆ ಕಂಡುಬರುವುದು, ಸುತ್ತಲಿನವರನ್ನು ಮೆಚ್ಚಿಸಲು ಅದ್ದೂರಿಯಾಗಿ ಮದುವೆ ನೆರವೇರಿಸಿಕೊಟ್ಟ ಕನ್ಯಾಪಿತೃವಿನ ಬಾಗಿಲ ಬಳಿ ನಿಲ್ಲುವ ಸಾಲಗಾರರ ಕ್ಯೂ.

ಒಟ್ಟಾರೆ ನೋಡಿದರೆ, ಈ ಕ್ಯೂ ಎಂಬುದು ಯಾರಿಗೇ ಆಗಲಿ ಒಂದು ಅಹಿತಕರ ಅನುಭವ. ಆದರೆ ಕೆಲವರಿಗೆ, ಕೆಲವು ಬಗೆಯ ಕ್ಯೂಗಳು ಹೆಮ್ಮೆಯ ವಿಷಯವೂ ಹೌದು. 'ನನ್ನ ಮಗಳ ನೃತ್ಯ ಪ್ರದರ್ಶನಕ್ಕೆ ಜನ ಕ್ಯೂ ನಿಂತು ಟಿಕೆಟ್ ಪಡೆದರು' ಎಂದೋ, ಅಥವಾ 'ನನ್ನ ಮಗನ/ಮಗಳ ಕೈ ಹಿಡಿಯಲು ವಧು/ವರರು ಕ್ಯೂ ನಿಂತಿದ್ದಾರೆ' ಎಂದೋ ಜಂಭವಾಗಿ ಹೇಳಿಕೊಳ್ಳುವ ತಂದೆ ತಾಯಿಯರೂ ಬೇಕಾದಷ್ಟು ಸಂಖ್ಯೆಯಲ್ಲಿದ್ದಾರೆ !

ಮೂರು ನಾಲ್ಕು ದಿನಗಳಿಂದ ಯಾವ ಯಾವುದೋ ಕೆಲಸಗಳಿಗಾಗಿ ಬೇರೆ ಬೇರೆ ಸ್ಥಳಗಳಲ್ಲಿ ಕ್ಯೂನಲ್ಲಿ ನಿಂತು ಬೇಸತ್ತಿದ್ದೆ. ಕೊನೆಯಲ್ಲಿ ವೈದ್ಯರೊಬ್ಬರನ್ನು ಕಾಣಲು ಕ್ಯೂನಲ್ಲಿ ಕಾಯುತ್ತಿದ್ದಾಗ ಬೇರೆ ಏನೂ ತೋಚದೆ, ಮನಸ್ಸಿಗೆ ಬಂದ ಇವೆಲ್ಲವನ್ನೂ ಕಾಗದದ ತುಂಡಿನ ಮೇಲೆ ಗೀಚುತ್ತಿದ್ದುದರ ಪರಿಣಾಮವೇ ಈ ಲೇಖನ. ನನ್ನ ಸರದಿ ಬರುವುದು ಇನ್ನೂ ತಡವಾಗಿದ್ದರೆ ಈ ಪಟ್ಟಿ ಮತ್ತಷ್ಟು ಬೆಳೆಯುತ್ತಿತ್ತೇನೋ ! ನನ್ನ ಅನುಭವಗಳನ್ನು ಓದುಗರೊಂದಿಗೆ ಹಂಚಿಕೊಳ್ಳೋಣವೆಂದು, ಪತ್ರಿಕೆಗೆ ಕಳಿಸಿದ್ದೇನೆ. 'ನಿನ್ನ ಲೇಖನ ಓದಲು ಜನ ಕ್ಯೂನಲ್ಲಿ ನಿಂತು ಪತ್ರಿಕೆ ಕೊಳ್ಳುತ್ತಾರೆ. ಅಂದುಕೊಂಡಿದ್ದೀಯಾ ? ಸಂಪಾದಕರ ಮೇಜಿನ ಮೇಲೆ ಪರ್ಮನೆಂಟ್ ಕ್ಯೂನಲ್ಲಿ ಕುಳಿತಿರುತ್ತದೆ' ಎಂದು ಎಲ್ಲರೂ ರೇಗಿಸುತ್ತಿದ್ದಾರೆ. ಇರಲಿ. ನಾನಂತೂ ಇದು ಅಚ್ಚು ಕಾಣುವುದೆಂಬ ನಿರೀಕ್ಷೆಯಲ್ಲಿ 'ಸಮಯ'ವೆಂಬ ಕ್ಯೂನಲ್ಲಿ ಸಹನೆಯಿಂದ ಕಾಯುತ್ತಿದ್ದೇನೆ.

ಬೃಂದಾ ಎಸ್. ರಾವ್
ನಂ. ೩೬೨, ೧೯ನೇ 'ಎಫ್' ಮೈನ್, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೧೦



## ರಸಾಯನ ವಿಜ್ಞಾನಿಗಳು

ಡಾ॥ ಎಚ್. ರಾಮಚಂದ್ರ ಸ್ವಾಮಿ

**ಪುಟ : ೨೩೨** ಬೆಲೆ : ರೂ. ೧೦೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಲೂಯಿ ಪಾಶ್ಚರ್ ಹಾಗೂ ಎರಡು ಬಾರಿ ನೊಬೆಲ್ ದಕ್ಕಿಸಿಕೊಂಡ ಮೇರು ಪ್ರತಿಭೆ ಮೇರಿ ಕ್ಯೂರಿ ಈ ಇಬ್ಬರನ್ನು ಹೊರತುಪಡಿಸಿ ಅಪೂರ್ವ ಸಾಧನೆಗೈದ ರಸಾಯನ ವಿಜ್ಞಾನಿಗಳನ್ನು ಪರಿಚಯಿಸುವ ಕೃತಿ. ರಸಾಯನ ವಿಜ್ಞಾನ ಪ್ರಾಚೀನ ರಸವಿದ್ಯಾಶಾಸ್ತ್ರದ ಮುಂದುವರಿಕೆ ಮಾತ್ರವಲ್ಲ, ಆಧುನಿಕ ರೂಪ. ಲೋಹಗಳನ್ನು ಚಿನ್ನವನ್ನಾಗಿಸುವ ಕನಸು ಕಂಡ ಪ್ರಾಚೀನ ವಿಜ್ಞಾನಿಗಳಿಗಿಂತ ಇಂದಿನ ವಿಜ್ಞಾನಿಗಳು ಚಿನ್ನಕ್ಕಿಂತಲೂ ಬೆಲೆ ಬಾಳುವ ಸಂಶೋಧನೆಗಳಿಂದ ಪ್ರಗತಿಯ ಮೆಟ್ಟಲೇರಿದ್ದಾರೆ.



## ಅಗ್ನಿಗರ್ಭ (ಕಾದಂಬರಿ)

ಮಹಾಶ್ವೇತಾ ದೇವಿ ಅನು : ಜಿ. ಕುಮಾರಪ್ಪ

**ಪುಟ : ೧೫೬** ಬೆಲೆ : ರೂ. ೬೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ನಮ್ಮ ದೇಶದ ಮಣ್ಣನ್ನು ಯಾವ ಕಡೆಯಿಂದ ಅಗೆದರೂ ದೀನರ-ಭೂಹೀನ ಕೃಷಿಕರ ಒಂದೇ ಮಾತಿನಲ್ಲಿ ಹೇಳುವುದಾದರೆ ಶೋಷಿತರ ಕ್ಷೀಣ ಧ್ವನಿಯೇ ನೆಲದೊಳಗಿನಿಂದ ಕೇಳಿಸುತ್ತದೆ. ತಕ್ಕಡಿಯ ತಟ್ಟೆಗಳನ್ನು ಸಮನಾಗಿ ತೂಗಿಸಲು ರಾಜಕೀಯದ ಎಡವಾಗಲೀ ಬಲವಾಗಲೀ ಯಾವುದೇ ಪಂಥಕ್ಕೂ ಸಾಧ್ಯವಾಗಿಲ್ಲ. ನಕ್ಸಲ್‌ಬಾರಿ ಆಂದೋಲನದ ಹಿನ್ನೆಲೆಯಿರುವ ಈ ಕೃತಿಯಲ್ಲಿ ಶೋಷಿತರ ಆಕ್ರೋಶವನ್ನು ಲೇಖಕಿ ಸಮರ್ಥವಾಗಿ ಚಿತ್ರಿಸಿದ್ದಾರೆ.



## ದಲಿತೋದ್ಧಾರಕ ಮಹಾತ್ಮ ಜ್ಯೋತಿಬಾ ಫುಲೆ

ಡಾ॥ ಎಂ. ಪಿ. ಭುವನೇಶ್ವರ ಪ್ರಸಾದ್

**ಪುಟ : ೭೨** ಬೆಲೆ : ರೂ. ೪೦

**ಕಲಾ ಪ್ರಕಾಶನ**, ನಂ. ೨, ೨ನೇ ಅಡ್ಡರಸ್ತೆ, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು -೩

ದಲಿತೋದ್ಧಾರದ ಮಾತು ಬಂದಾಗ ಅಂಬೇಡ್ಕರ್ - ಗಾಂಧೀಜಿಯವರಿಗೂ ಮುಂಚೆಯೇ ಅಸ್ಪೃಶ್ಯತೆಯ ನಿವಾರಣೆಗೆ ತೊಡಗಿದ ಆದರಣೀಯ ವ್ಯಕ್ತಿ ಜ್ಯೋತಿಬಾ ಫುಲೆ. ಶಿಕ್ಷಣದ ಕೊರತೆ, ಜಾತಿ ಪದ್ಧತಿಯಂಥ ಸಾಮಾಜಿಕ ಪಿಡುಗು ತಾಂಡವವಾಡುತ್ತಿದ್ದ ಸ್ವಾತಂತ್ರ್ಯಪೂರ್ವದ ಭಾರತೀಯ ಸಮಾಜದ ಸುಧಾರಣೆ ಸುಲಭವೇನೂ ಆಗಿರಲಿಲ್ಲ. ಮತಧಾರ್ಮಿಕ ಕುರುಡು ಸಂಪ್ರದಾಯದ ವಿರುದ್ಧ ಜನಜಾಗೃತಿ ಮೂಡಿಸಿ ಸ್ತ್ರೀಯರಿಗೂ ಸಹನೀಯ ಬದುಕು ನೀಡಿದ ಫುಲೆಯವರ ಜೀವನ-ಚಿಂತನ-ಸಾಹಸಗಳ ಪರಿಚಯ. ಸುಂದರ ವ್ಯಕ್ತಿತ್ವದ ಅನುಭವ.



## ಪರಕಾಯ (ಲೇಖನಗಳು)

ಡಾ॥ ಗುಂಡಣ್ಣ ಕಲಬುರ್ಗಿ

**ಪುಟ : ೧೭೬** ಬೆಲೆ : ರೂ. ೧೨೫

**ಕನಕ ಸಾಹಿತ್ಯ ಪ್ರತಿಷ್ಠಾನ**, ನಂ. ೧೫೭, ೧ನೇ ಮುಖ್ಯರಸ್ತೆ, ೩ನೇ ಹಂತ, ಪಶ್ಚಿಮ ಕಾರ್ಡ್ ರಸ್ತೆ, ಬೆಂಗಳೂರು - ೧೦

ಮನುಷ್ಯ-ಮನುಷ್ಯರ ನಡುವೆ ಭಾವನಾತ್ಮಕ ಸಂಬಂಧಗಳನ್ನು ಹುಡುಕುತ್ತ ಅವು ಕಾಣದಾದಾಗ ಅವಕ್ಕೆ ಕಾರಣಗಳನ್ನು ಹುಡುಕುತ್ತ ಗಂಭೀರವಾಗಿ ಅಧ್ಯಯನ ಮಾಡಿದ ಪರಿಣಾಮ ಈ ಲೇಖನಗಳು. ನವ್ಯ-ನವ್ಯೋತ್ತರದ ಸಾಹಿತ್ಯ ಸಾಗರವನ್ನೇ ಜಾಲಾಡುತ್ತ ವಿಮರ್ಶೆ-ಸಂಶೋಧನೆಗಳನ್ನು ಇಲ್ಲಿ ಏಕಕಾಲದಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ. ಸುಸಂಸ್ಕೃತ ಸಾಹಿತ್ಯ ರಚನೆಯ ಸಾಧ್ಯತೆಯಿದ್ದರೂ ಸಾಂದರ್ಭಿಕ-ಸನ್ನಿವೇಶಗಳಿಗೆ ಮಣಿದು ಓಲೈಸುವ ಡಾಂಭಿಕ ಸಾಹಿತ್ಯ ಸೃಷ್ಟಿಯನ್ನು ವಿಷಾದದಿಂದಲೇ ಗುರುತಿಸುತ್ತಾರೆ.



## ಲಜ್ಜಾ (ಕಾದಂಬರಿ)

ಮೂಲ : ತಸ್ಲೀಮಾ ನಸ್ರೀನ್ ಕನ್ನಡಕ್ಕೆ : ರಾಮಣ್ಣ ಆರ್ಡೆಜ್ಜಿ

**ಪುಟ : ೨೬೪** ಬೆಲೆ : ರೂ. ೧೨೫

**ಶ್ರುತಿ ಪ್ರಕಾಶನ**, ೧-೪-೧೬೧, ಐ. ಬಿ. ಕಾಲೋನಿ, ರಾಯಚೂರು

ಮತಧಾರ್ಮಿಕ ಮೂಲಭೂತವಾದಿಗಳ ಅಪಾಯಕಾರಿ ಪ್ರವೃತ್ತಿಯನ್ನು ವಸ್ತುವನ್ನಾಗಿಸಿದ ಈ ಕೃತಿಯಿಂದಾಗಿ ತಸ್ಲೀಮಾ ನೇರವಾಗಿ ಮುಸ್ಲಿಂ ಸಂಘಟನೆಗಳ ವಕ್ರದೃಷ್ಟಿಯನ್ನೆದುರಿಸಬೇಕಾಯಿತು. ಕಾರಣ ಆಕೆ ಒಬ್ಬ 'ಮುಸ್ಲಿಂ' ಆಗಿದ್ದರೂ ಕೃತಿಯಲ್ಲಿ ಹಿಂದುಗಳನ್ನು ಸಹೋದರರಂತೆ ಚಿತ್ರಿಸಿದ್ದು! ಧರ್ಮಾಂಧರ ಬಿಗಿ ಹಿಡಿತದಲ್ಲಿದ್ದ ಬಾಂಗ್ಲಾ ಸರ್ಕಾರ ನಿರ್ಲಜ್ಜವಾಗಿ ಆಕೆಯ ಎಲ್ಲ ಕೃತಿಗಳನ್ನೂ ಬಹಿಷ್ಕರಿಸಿದ್ದು, ಅಲ್ಲಿನ ಧಾರ್ಮಿಕ ಮುಖಂಡರು ಆಕೆಗೆ ತಲೆದಂಡದಂತಹ ಕ್ರೂರ ಶಿಕ್ಷೆಗೆ ಆಗ್ರಹಿಸುತ್ತಿದ್ದಾರೆ.



## ನೋಟ ನಿಲುವು (ಪ್ರವಾಸ ಕಥನ)

ಕೆ. ಮರುಳಸಿದ್ದಪ್ಪ

**ಪುಟ : ೨೧೬** ಬೆಲೆ : ರೂ. ೯೫

**ಅಂಕಿತ ಪುಸ್ತಕ**, ನಂ. ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು - ೪

ಇತ್ತೀಚೆಗೆ ಯೂರೋಪ್ ರಾಷ್ಟ್ರಗಳಿಗೆ ನೀಡಿದ ಭೇಟಿಯನ್ನು ಒಂದು ಮಾಹಿತಿಯ ಆಕರವನ್ನಾಗಿ ಪ್ರಸ್ತುತಪಡಿಸಿರುವ ಶ್ರೀ ಮರುಳಸಿದ್ದಪ್ಪನವರು ತಮ್ಮ ಪ್ರವಾಸವನ್ನು ಬಹುಮುಖ ಕೋನಗಳಿಂದ ವಿಶ್ಲೇಷಿಸಿದ್ದಾರೆ. ಮೂರು ತಿಂಗಳ ವಾಸ್ತವ್ಯದಲ್ಲಿ ವಿವಿಧ ರಾಷ್ಟ್ರಗಳ ಜನಜೀವನ, ರಾಜಕೀಯ ವಿಚಾರಗಳು ನಮಗೆ ಅಪರೂಪವೆನಿಸುವಂತಹ ಜೀವನಶೈಲಿ ಇವನ್ನೆಲ್ಲ ದಾಖಲಿಸಿ ಒಂದು ಸೋಜಿಗದ ಓದನ್ನು ನಮಗೆ ನೀಡಿದ್ದಾರೆ.



## ನೆನಪು ಗರಿ ಬಿಚ್ಚಿದಾಗ (ವ್ಯಕ್ತಿ ಚಿತ್ರಗಳು)

ಎಲ್. ವಿ. ಶಾಂತಕುಮಾರಿ

**ಪುಟ : ೧೭೬** ಬೆಲೆ : ರೂ. ೧೦೦

**ಅನಿಕೇತನ ಪ್ರಕಾಶನ**, ರಾಜು ಬಿಲ್ಡಿಂಗ್ ಸಮೀಪ, ದೇವನೂರು ರಸ್ತೆ, ವಿಜಯನಗರ, ತುಮಕೂರು

ಇವು ಸ್ಮೃತಿ ಚಿತ್ರಗಳೂ ಹೌದು; ವ್ಯಕ್ತಿ ಚಿತ್ರಣಗಳೂ ಹೌದು. ಬದುಕಿನಲ್ಲಿ ಎದುರಾಗುವ ಕ್ಲಿಷ್ಟ ಸಮಸ್ಯೆಗಳೊಂದಿಗೆ ಮುಖಾಮುಖಿಯಾದಾಗ ಮನುಷ್ಯ ಹೇಗೆ ವರ್ತಿಸುತ್ತಾನೆಂಬುದು ಬಹಳ ಮುಖ್ಯ ವಿಚಾರವಾಗುತ್ತದೆ. ವಿವೇಕದಿಂದ ವರ್ತಿಸುವ ಸನ್ನಡತೆ, ಹೃದಯವಂತಿಕೆ ಹಣವುಳ್ಳವರಿಗಿಂತ ಬಡತನದ ಕಹಿಯುಂಡ ಜನರಿಗೆ ಹೆಚ್ಚಾಗಿರುವುದು ಸಾಧ್ಯ. ಲೇಖಕಿ ಪರಿಚಯಿಸಿದ ಕೆಲವು ವಿಶಿಷ್ಟ ವ್ಯಕ್ತಿಗಳು ರಾಷ್ಟ್ರೀಯ ಇಲ್ಲವೇ ಅಂತರರಾಷ್ಟ್ರೀಯ ಮಟ್ಟಕ್ಕೇರದಿದ್ದರೂ ಇಂತಹ ವ್ಯಕ್ತಿಗಳು ನಮ್ಮ ನಿಮ್ಮ ಮನಸ್ಸುಗಳನ್ನು ಸೆರೆಹಿಡಿದು ಒಂದು ಉತ್ತಮ ಮೌಲ್ಯ ಬಿತ್ತಬಲ್ಲರು.



## ಗ್ರಾಮೀಣ ಸಂಸ್ಕೃತಿ ಸಂದರ್ಭಕೋಶ

ಪ್ರೊ॥ ಶಿವರಾಮಯ್ಯ

**ಪುಟ : ೨೩೭** ಬೆಲೆ : ರೂ. ೧೦೦

**ಕಲಾ ಪ್ರಕಾಶನ**, ನಂ. ೨, ೨ನೇ ಅಡ್ಡರಸ್ತೆ, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು - ೫೬೦ ೦೦೩

ಹಳಗನ್ನಡ ಚಂಪೂ ಕಾವ್ಯಗಳಲ್ಲಿ ಹೇರಳವಾಗಿ ದಾಖಲಾಗಿರುವ ಗ್ರಾಮೀಣ ಸಾಂಸ್ಕೃತಿಕ ಬದುಕಿನ ಶೋಧ ಹಾಗೂ ಇಂದಿನ ಸಂದರ್ಭದಲ್ಲಿ ತುಲನೆ ಮಾಡುವ ಅಪೂರ್ವ ಪ್ರಯತ್ನ. ಪ್ರಾಚೀನ ಗ್ರಾಮೀಣ ಬದುಕನ್ನು ತಿಳಿಯಲು ನಮಗೆ ಸಾಹಿತ್ಯವೊಂದೇ ಹೆದ್ದಾರಿ. ಹಳಗನ್ನಡ ಸಾಹಿತ್ಯದಲ್ಲಿ ಪ್ರಯೋಗಿಸಲ್ಪಟ್ಟ ಗಾದೆ-ನುಡಿಗಟ್ಟು-ಒಗಟುಗಳನ್ನು ಸಂದರ್ಭಸಹಿತ ವಿವರಿಸುತ್ತ ವೈವಿಧ್ಯತೆಯ ಪ್ರಾಚೀನ ಸಾಂಸ್ಕೃತಿಕ ಸಂಪತ್ತನ್ನು ಅಂದಾಜು ಮಾಡುವ ಲೇಖಕರು ಸುಂದರ ಅನುಭವದ ದೇಶೀ ಬದುಕಿನ ಪರಿಚಯ ನೀಡುತ್ತಾರೆ.

– ಇಂದಿರಾ ಕುಮಾರಿ

## ಸುಧಾರಣೆಗಳ ಮೂಲಕ ಪ್ರಗತಿ ಸಾಧನೆಗಾಗಿ ಯೋಜನೆಗಳು

**ಇ-ಆಡಳಿತ**
**'ಭೂಮಿ'** –ರೈತರ ಭೂದಾಖಲೆಗಳ ಗಣಕೀಕರಣಕ್ಕಾಗಿ ದೇಶದಲ್ಲೇ ಮೊಟ್ಟಮೊದಲು ರೂಪಿತವಾದ ವಿಶಿಷ್ಟ ಹಾಗೂ ಬೃಹತ್ ಮಾಹಿತಿ ತಂತ್ರಜ್ಞಾನ ಯೋಜನೆ.
• ಕರ್ನಾಟಕದ67 ಲಕ್ಷ ರೈತರ 2 ಕೋಟಿ ಭೂದಾಖಲೆಗಳ ಸಂಪೂರ್ಣ ಕಂಪ್ಯೂಟರೀಕರಣ. ▪ ಪ್ರತಿವರ್ಷ ಒಂದು ಬಾರಿ ರೈತರ ಮನೆ ಬಾಗಿಲಿಗೇ ಗಣಕೀಕೃತ ಪಹಣಿ ಉಚಿತ. ▪ ಪಹಣಿಗಾಗಿ ಕಾಯುವ ಕೆಲಸವಿಲ್ಲ, ಶೋಷಣೆಗಾಗಲಿ, ಮಧ್ಯವರ್ತಿಗಳಿಗಾಗಲಿ ಅವಕಾಶವೇ ಇಲ್ಲ • 176 ತಾಲ್ಲೂಕುಗಳಲ್ಲಿ ಪ್ರತಿ ತಾಲ್ಲೂಕಿನಲ್ಲಿ ಒಂದೊಂದು ಭೂದಾಖಲೆ ಕಿಯಾಸ್ಕ್
• 'ಭೂಮಿ' ಯೋಜನೆಗೆ ವಿಶ್ವ ಮಾನ್ಯತೆ. ಈಗಾಗಲೇ 2002ರ ಪ್ರತಿಷ್ಠಿತ ಸ್ಟಾರ್‌ಹೋಮ್ ಛಾಲೆಂಜ್ ಪ್ರಶಸ್ತಿಗಾಗಿ 89 ದೇಶಗಳೊಂದಿಗೆ ಸ್ಪರ್ಧೆ. ▪ ಕೈಬರಹದ ಭೂದಾಖಲೆಗಳು ಕರ್ನಾಟಕದಲ್ಲಿ ಇನ್ನು ಮುಂದೆ ಊರ್ಜಿತವಲ್ಲ

**ಮಾಹಿತಿ**
- ಸಾರ್ವಜನಿಕರ ವಿಶ್ವಾಸಕ್ಕೆ ಪಾತ್ರವಾದ ಮತ್ತು ಅವರಿಗೆ ಅಡೆತಡೆಯಿಲ್ಲದೆ ಮಾಹಿತಿ ಒದಗಿಸುವ ವ್ಯವಸ್ಥೆ

**ಆಡಳಿತದಲ್ಲಿ ಪಾರದರ್ಶಕತೆ**
• ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2000 ಜಾರಿಗೆ
▪ ಸರ್ಕಾರಿ ಟೆಂಡರುಗಳನ್ನು ಕೊಡುವ ಕಾರ್ಯವಿಧಾನದಲ್ಲಿ ಸಂಪೂರ್ಣ ಪಾರದರ್ಶಕತೆ. ದೇಶದಲ್ಲೇ ಪ್ರಥಮವಾಗಿ ಕರ್ನಾಟಕ (ಸಾರ್ವಜನಿಕ ಖರೀದಿಗಳಲ್ಲಿ ಪಾರದರ್ಶಕತೆ) ಕಾಯಿದೆ–2000 ಜಾರಿಗೆ

**ಸರಳೀಕೃತ ನೋಂದಣಿ ವಿಧಿ ವಿಧಾನಗಳು**
▪ ಆಸ್ತಿ ದಾಖಲೆಗಳ ನೋಂದಣಿಯಲ್ಲಿ ಅಡ್ಡಿ ಅಡಚಣೆಗಳನ್ನೂ, ವಿಳಂಬವನ್ನೂ ತಡೆಗಟ್ಟಲು ಮುದ್ರಾಂಕ ಮತ್ತು ನೋಂದಣಿ ವಿಧಿವಿಧಾನಗಳ ಸರಳೀಕರಣ. ▪ ನೋಂದಣಿಗಾಗಿ ಮುದ್ರಾಂಕದ ಬಳಕೆ ಅಗತ್ಯವಿಲ್ಲ ▪ ಮಾರ್ಚ್ 2003ರ ವೇಳೆಗೆ ರಾಜ್ಯದ 220 ಉಪನೋಂದಣಾಧಿಕಾರಿಗಳ ಕಛೇರಿಗಳು ಸಂಪೂರ್ಣವಾಗಿ ಕಂಪ್ಯೂಟರೀಕರಣ. ಆಸ್ತಿದಾಖಲೆಗಳ ನೋಂದಣಿಯನ್ನು ಕೇವಲ 30 ನಿಮಿಷಗಳಲ್ಲಿ ಮಾಡುವ ಸೌಲಭ್ಯ

**ನಗರ ಪಾಲಿಕೆಗಳ ಲೆಕ್ಕಪತ್ರ ವ್ಯವಸ್ಥೆಯಲ್ಲಿ ಸುಧಾರಣೆ**
▪ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಅಪೂರ್ವ ನಿಧಿ ಆಧಾರಿತ ಲೆಕ್ಕಪತ್ರ ವ್ಯವಸ್ಥೆ ಅನುಷ್ಠಾನಕ್ಕೆ ಕ್ರಮ. ಈ ವ್ಯವಸ್ಥೆಯನ್ನು ಹಂತ ಹಂತವಾಗಿ ರಾಜ್ಯದ ಇತರ ಎಲ್ಲಾ ನಗರಪಾಲಿಕೆಗಳಲ್ಲೂ ಜಾರಿಗೆ

**ಪೊಲೀಸ್ ಇಲಾಖೆಯ ಆಧುನೀಕರಣ**
▪ ಕಳೆದ ಎರಡೂವರೆ ವರ್ಷಗಳಲ್ಲಿ ರೂ.160 ಕೋಟಿ ವೆಚ್ಚದಲ್ಲಿ ಪೊಲೀಸ್ ಸಿಬ್ಬಂದಿಗಾಗಿ 5,000 ಮನೆಗಳ ನಿರ್ಮಾಣ. ಆದರೆ 1985–2000 ವರೆಗಿನ 15 ವರ್ಷಗಳ ಅವಧಿಯಲ್ಲಿ ಕೇವಲ 5,566 ಮನೆಗಳ ನಿರ್ಮಾಣ. ▪ ರೂ.32.05 ಕೋಟಿ ವೆಚ್ಚದಲ್ಲಿ ವಿವಿಧ ಬಗೆಯ 1,200 ವಾಹನಗಳ ಪೂರೈಕೆ ▪ ರೂ.22.65 ಕೋಟಿ ವೆಚ್ಚದಲ್ಲಿ 10,000 ವೈರ್‌ಲೆಸ್ ಸೆಟ್‌ಗಳ ಸೌಲಭ್ಯ • ಇಲಾಖೆಯ ಕಂಪ್ಯೂಟರೀಕರಣ ರೂ.9 ಕೋಟಿ ವೆಚ್ಚದಲ್ಲಿ ▪ ದೇಶದ ಪ್ರಪ್ರಥಮ ಸೈಬರ್ ಪೊಲೀಸ್ ಸ್ಟೇಷನ್ ಬೆಂಗಳೂರಿನಲ್ಲಿ ಸ್ಥಾಪನೆ

**ಆರೋಗ್ಯ ಸುಧಾರಣೆಗಳು**
▪ ರೂ.790 ಕೋಟಿ ವಿಶ್ವ ಬ್ಯಾಂಕ್ ನೆರವಿನ ಯೋಜನೆ – ಕರ್ನಾಟಕ ಸಮಗ್ರ ಆರೋಗ್ಯ, ಪೌಷ್ಟಿಕಾಂಶ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಅಭಿವೃದ್ಧಿ ಯೋಜನೆಗೆ ಪ್ರಸಕ್ತ ಸಾಲಿನಲ್ಲಿ ಪ್ರಸ್ತಾವನೆ ▪ 180 ಆಸ್ಪತ್ರೆಗಳನ್ನು ಮೇಲ್ದರ್ಜೆಗೇರಿಸಲು ರೂ.594.9 ಕೋಟಿ ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಯೋಜನೆ. ಈ ಯೋಜನೆಯಡಿ 64,49,338 ಹಳದಿ ಕಾರ್ಡ್ ಫಲಾನುಭವಿಗಳು. ▪ ಜನರಿಗೆ ಉತ್ತಮ ಆರೋಗ್ಯ ಸೇವೆ ನೀಡಲು ಪ್ಯಾರಾಮೆಡಿಕಲ್ ಸಿಬ್ಬಂದಿಯೂ ಸೇರಿದಂತೆ 6,000 ವೈದ್ಯರ ನೇಮಕಾತಿ ▪ ರಾಜ್ಯದ 1,000 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ವೈದ್ಯರು, ದೂರವಾಣಿ, ಪ್ರಯೋಗಾಲಯ, ತಂತ್ರಜ್ಞರು ಮತ್ತು ರೋಗಪತ್ತೆ ಸೌಲಭ್ಯಗಳೊಂದಿಗೆ ಆರೋಗ್ಯ ಪಾಲನೆಯ ಆಧುನೀಕರಣ • ಒಪೆಇಸಿ ನೆರವಿನೊಂದಿಗೆ ಸಾರ್ವಜನಿಕ–ಖಾಸಗಿ ಪಾಲುಗಾರಿಕೆಯಡಿ ರಾಯಚೂರಿನಲ್ಲಿ ರಾಜೀವ್ ಗಾಂಧಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಹೈದರಾಬಾದಿನ ಅಪೋಲೊ ಆಸ್ಪತ್ರೆಯ ಜಂಟೀ ಸಹಯೋಗದೊಂದಿಗೆ ಕಾರ್ಯಾರಂಭ ▪ ಸರ್ಕಾರಿ ಆಸ್ಪತ್ರೆಗಳಲ್ಲಿ ಸ್ಪೆಷಲಿಸ್ಟ್ ವೈದ್ಯರನ್ನು ನೇಮಕ ಮಾಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ

## ಗ್ರಾಮಾಂತರ ಜನ ಜೀವನ ಸುಧಾರಣೆಗಾಗಿ ವಿಶಿಷ್ಟ ಯೋಜನೆ

**ಸ್ತ್ರೀಶಕ್ತಿ**
• ಗ್ರಾಮೀಣ ಮಹಿಳೆಯರನ್ನು ಸಶಕ್ತಗೊಳಿಸಿ, ಸ್ವಸಹಾಯ ಗುಂಪುಗಳ ಮುಖಾಂತರ ಆರ್ಥಿಕ ಸ್ವಾವಲಂಬನೆಗಳಿಸಲು ಅಪೂರ್ವ ಯೋಜನೆ. ಆದಾಯ ತರುವ ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಅಗತ್ಯ ನೆರವು ಮತ್ತು ಮಾರ್ಗದರ್ಶನ. ▪ ಈಗಾಗಲೇ 11.04 ಲಕ್ಷ ಗ್ರಾಮೀಣ ಮಹಿಳೆಯರನ್ನೊಳಗೊಂಡ 75,660 ಸ್ವಸಹಾಯ ಗುಂಪುಗಳು ಕಾರ್ಯನಿರತ. ರೂ.80 ಕೋಟಿ ಉಳಿತಾಯ ಸಾಧನೆ

**ಸುರಕ್ಷ ಹೆರಿಗೆ**
▪ ಗರ್ಭಿಣಿ ಗ್ರಾಮೀಣ ಮಹಿಳೆಯರಿಗೆ ರಕ್ಷಣೆ ಒದಗಿಸುವ ಯೋಜನೆ, ತಾಯಿ ಹಾಗೂ ಶಿಶು ಆರೋಗ್ಯ ವರ್ಧನೆ, ಅಂತೆಯೇ ತಾಯಿ ಹಾಗೂ ಶಿಶು ಮರಣ ತಡೆಗಟ್ಟುವದೇ ಯೋಜನೆಯ ಮುಖ್ಯ ಉದ್ದೇಶ. ▪ 6 ಲಕ್ಷಕ್ಕೂ ಹೆಚ್ಚು ಗರ್ಭಿಣಿ ಸ್ತ್ರೀಯವರಿಗೆ ಈಗಾಗಲೇ ಸ್ಟರಿಲೈಸ್ ಮಾಡಿದ ಸುರಕ್ಷ ಪ್ರಸವ ಕಿಟ್‌ಗಳನ್ನು ನೀಡಲಾಗಿದೆ.

**ರೈತಮಿತ್ರ**
– ಒಂದೇ ಛಾವಣಿಯಡಿ ರೈತರಿಗೆ ಅಗತ್ಯ ಮಾಹಿತಿ ಸಲಹೆ ನೀಡುವ ಇಡೀ ದೇಶಕ್ಕೆ ಮಾದರಿಯಾದ ಕಾರ್ಯಕ್ರಮ. ರೈತರ ತ್ವರಿತ ಪುರೋಭಿವೃದ್ಧಿಗಾಗಿ ಹಾಗೂ ಉತ್ತಮ ಇಳುವರಿಗಾಗಿ ಕೃಷಿ ವಿಧಾನಗಳನ್ನು ಸುಧಾರಿಸಲು ರೂಪುಗೊಂಡಿರುವ ಯೋಜನೆ. ಈ ಯೋಜನೆಯಡಿ ಪ್ರತಿ ಹೋಬಳಿಗೂ ಒಂದರಂತೆ ಸ್ಥಾಪಿತವಾಗಿರುವ 744 **ರೈತ ಸಂಪರ್ಕ ಕೇಂದ್ರಗಳು** ರೈತರಿಗೆ ಹತ್ತುಹಲವು ಕೃಷಿ ಸಂಬಂಧಿತ ವಿಷಯಗಳ ಬಗ್ಗೆ ನೆರವು ನೀಡುವುವು. ಈಗಾಗಲೇ 159 ರೈತ ಸಂಪರ್ಕ ಕೇಂದ್ರಗಳಿಗೆ ಕಂಪ್ಯೂಟರ್ ಒದಗಿಸಲಾಗಿದೆ

**ರೈತಸಂತೆ**
– ಮಧ್ಯವರ್ತಿಗಳ ಕಾಟವಿಲ್ಲದೆಯೇ ರೈತರು ತಮ್ಮ ಉತ್ಪನ್ನಗಳನ್ನು ಬಹಿರಂಗ ಮಾರುಕಟ್ಟೆಯಲ್ಲಿ ಲಾಭದಾಯಕ ಬೆಲೆಗೆ ಮಾರಾಟ ಮಾಡಲು ಅವಕಾಶ. ಈಗಾಗಲೇ ಬೆಂಗಳೂರಿನ ಯಲಹಂಕದಲ್ಲಿ ಹಾಗೂ ಹುಬ್ಬಳ್ಳಿಯಲ್ಲಿ ರೈತಸಂತೆ ಕಾರ್ಯಕ್ರಮಗಳು ಯಶಸ್ವಿ ಜಾರಿಯಲ್ಲಿವೆ. ಈ ಕಾರ್ಯ ಯೋಜನೆ ರಾಜ್ಯದ ಇತರೆಡೆಗಳಿಗೂ ವಿಸ್ತರಣೆಗೆ ಕ್ರಮ.

**ಮಾರುಕಟ್ಟೆ ಮಧ್ಯಪ್ರವೇಶ ಯೋಜನೆ**
▪ ಮೆಕ್ಕೆಜೋಳ, ರಾಗಿ, ಭತ್ತ, ಕೊಬ್ಬರಿ, ಆಲೂಗಡ್ಡೆ, ಈರುಳ್ಳಿ ಮತ್ತು ಅಡಿಕೆಗೆ ಬೆಂಬಲ ಬೆಲೆ. 2002–03ರಲ್ಲಿ ರೂ.125 ಕೋಟಿ ಆವರ್ತನಿಧಿ

**ರೇಷ್ಮೆ ಕೃಷಿ**
▪ 'ರೇಷ್ಮೆ ಸಂಪತ್ತು' ಯೋಜನೆಯ ಮೂಲಕ ರೇಷ್ಮೆ ಕೃಷಿಯ ಅಭಿವೃದ್ಧಿಗೆ ಒತ್ತು ▪ ಕೇಂದ್ರ ರೇಷ್ಮೆ ಮಂಡಳಿಯ ನೆರವಿನಿಂದ ರೇಷ್ಮೆ ಗೂಡುಗಳ ಮಾರುಕಟ್ಟೆಗೆ ಆನ್‌ಲೈನ್ ಮಾಹಿತಿ ಹಾಗೂ ಮಾರಾಟ ವ್ಯವಸ್ಥೆ

**ಜಲಸಂವರ್ಧನೆ**
▪ ಸ್ಥಳೀಯ ಸಮುದಾಯದ ಸಹಭಾಗಿತ್ವದೊಂದಿಗೆ ಮುಂದಿನ 5 ವರ್ಷದೊಳಗಾಗಿ 5,000 ಗ್ರಾಮೀಣ ಕೆರೆಗಳ ಹೊಳೆತ್ತಿ ಅವುಗಳ ಪುನಶ್ಚೇತನಕ್ಕಾಗಿ ರೂ.1,000 ಕೋಟಿ ಮೀಸಲು. • ರೈತರಿಗೆ ನೀರು ನಿರ್ವಹಣೆಗಾಗಿ ತರಬೇತಿ

**ಯುವ.ಕಾಮ್**
• ರಾಜ್ಯದ ಎಲ್ಲಾ 224 ವಿಧಾನಸಭಾ ಕ್ಷೇತ್ರಗಳಲ್ಲೂ ಗ್ರಾಮೀಣ ನಿರುದ್ಯೋಗಿ ಯುವ ಜನರಿಗೆ ಕಂಪ್ಯೂಟರ್ ತರಬೇತಿ ನೀಡಲು ಯುವ.ಕಾಮ್ ಚಾಲನೆ

**ಗ್ರಾಮೀಣ ವಸತಿ**
▪ ಏಪ್ರಿಲ್ 2000ರಲ್ಲಿ ಸ್ಥಾಪಿತವಾದ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಮೂಲಕ ಗ್ರಾಮೀಣ ವಸತಿ ಯೋಜನೆಗಳ ಅನುಷ್ಠಾನಕ್ಕೆ ಆದ್ಯತೆ • ಮುಂದಿನ 5 ವರ್ಷಗಳಲ್ಲಿ 11 ಲಕ್ಷ ಮನೆಗಳನ್ನು ಕಟ್ಟುವ ಗುರಿ. ▪ ಕಳೆದ ಎರಡೂವರೆ ವರ್ಷಗಳಲ್ಲಿ 3,49,378 ಮನೆಗಳ ನಿರ್ಮಾಣ ಪೂರ್ಣ.

**ಗ್ರಾಮೀಣ ಕುಡಿಯುವ ನೀರು**
▪ 56,682 ಜನವಸತಿಗಳ ಪೈಕಿ ಶೇಕಡ 61ರಷ್ಟು ಜನವಸತಿಗಳಿಗೆ ಜನರಿಗೆ ಈಗಾಗಲೇ ದಿನಂಪ್ರತಿ ತಲಾ 55 ಲೀಟರ್ ಕುಡಿಯುವ ನೀರು ಪೂರೈಕೆ. ಮುಂದಿನ 3 ವರ್ಷಗಳಲ್ಲಿ ಉಳಿದ ಜನವಸತಿಗಳಿಗೂ ದಿನಂಪ್ರತಿ ತಲಾ 55 ಲೀಟರ್ ಕುಡಿಯುವ ನೀರು ಒದಗಿಸಲು ಕಂಕಣಬದ್ಧ. ▪ ಉತ್ತರ ಕರ್ನಾಟಕದ 11 ಜಿಲ್ಲೆಗಳಲ್ಲಿ ವಿಶ್ವಬ್ಯಾಂಕ್ ನೆರವಿನ 'ಜಲ ನಿರ್ಮಲ ಯೋಜನೆ' ಯಡಿ 2,100 ಗ್ರಾಮಗಳಿಗೆ ಕುಡಿಯುವ ನೀರು ಯೋಜನೆಯ ಅನುಷ್ಠಾನ. ▪ 72 ತಾಲ್ಲೂಕುಗಳಲ್ಲಿ ಅಂತರ್ಜಲ ಅಭಿವೃದ್ಧಿಗೆ ಚಾಲನೆ.

**ಗ್ರಾಮೀಣ ರಸ್ತೆಗಳು**
• 61 ಸಂಪರ್ಕ ರಹಿತ ಗ್ರಾಮಗಳಿಗೆ ರಸ್ತೆ ಸಂಪರ್ಕ. • ನಬಾರ್ಡ್ ನೆರವಿನಿಂದ 7,105 ಕಿಮೀ. ಉದ್ದದ ಗ್ರಾಮೀಣ ರಸ್ತೆಗಳ ಸುಧಾರಣೆ ಹಾಗೂ 127 ರಸ್ತೆ ಸೇತುವೆಗಳ ನಿರ್ಮಾಣ.

## ಸಮಾಜದ ಶೋಷಿತ ಹಾಗೂ ಹಿಂದುಳಿದ, [illegible] ವರ್ಗದವರ ಅಭಿವೃದ್ಧಿ

**ಪರಿಶಿಷ್ಟ ಜಾತಿ/ವರ್ಗದವರ ಕಲ್ಯಾಣಕ್ಕಾಗಿ ಯೋಜನೆಗಳು**
**ಭೂಒಡೆತನ ಯೋಜನೆ** - ಕೃಷಿಕ ಕುಟುಂಬದ ಮಹಿಳೆಯರಿಗೆ 2 ಎಕರೆ ಖುಷ್ಕಿ ಜಮೀನು ಅಥವಾ ರೂ.60,000ಕ್ಕೆ ಮೀರದಂತೆ 1 ಎಕರೆ ತರಿ ಜಮೀನು.
**ಸ್ವಯಂ ಉದ್ಯೋಗ ಯೋಜನೆ** - ಜನರು ಉದ್ಯಮಶೀಲತೆಯಿಂದ ಸ್ವಾವಲಂಬಿಗಳಾಗಲು ಸೌಲಭ್ಯ.
**ಸಫಾಯಿ ಕರ್ಮಚಾರಿ ಪುನರ್ವಸತಿ ಯೋಜನೆ** - ಸಫಾಯಿ ಕರ್ಮಚಾರಿಗಳ ಅವಲಂಬಿತರಿಗೆ ಆರ್ಥಿಕ ನೆರವು ನೀಡಿ ಅವರಿಗೆ ಸ್ವಯಂ ಉದ್ಯೋಗ ಅವಕಾಶ.
**ದೇವದಾಸಿ ಪುನರ್ವಸತಿ ಯೋಜನೆ** - ಜಮೀನು ಖರೀದಿಸಲು, ಕೊಳವೆಬಾವಿ ಕೊರೆಯಲು, ಎತ್ತುಮತ್ತುಗಾಡಿ ಕೊಳ್ಳಲು, ಹಾಲುಕರೆಯುವ ಹಸುಗಳನ್ನು ಕೊಳ್ಳಲು ಸಾಲಸೌಲಭ್ಯ

**ಹಿಂದುಳಿದ ವರ್ಗದ ಕಲ್ಯಾಣಕ್ಕಾಗಿ ಸೌಲಭ್ಯಗಳು**
• 2002–03 ಸಾಲಿನಲ್ಲಿ ರೂ.114.49 ಕೋಟಿ ಹಿಂದುಳಿದ ವರ್ಗದವರ ಏಳಿಗೆಗಾಗಿ ಮೀಸಲು. ▪ 72,460 ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗಾಗಿ 1,403 ವಿದ್ಯಾರ್ಥಿನಿಲಯಗಳು. ▪ 2,500 ವಿದ್ಯಾರ್ಥಿಗಳಿಗಾಗಿ 10 ಮೆಟ್ರಿಕ್ ಪೂರ್ವ ಮತ್ತು 40 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು.

**ಅಲಸಂಖ್ಯಾತರ ಅಭಿವೃದ್ಧಿಗಾಗಿ ಸೌಲಭ್ಯಗಳು**
• 2002–03 ಸಾಲಿನಲ್ಲಿ 15,658 ಫಲಾನುಭವಿಗಳಿಗಾಗಿ ರೂ.15 ಕೋಟಿ ಮೀಸಲು. ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಆಶ್ರಯದಲ್ಲಿ ವಿವಿಧ ಕಲ್ಯಾಣ ಯೋಜನೆಗಳ ಜಾರಿ. ▪ 548 ಕೊಳವೆಬಾವಿಗಳ ಹಾಗೂ 36 ಏತನೀರಾವರಿ ಘಟಕಗಳ ಮೂಲಕ 1,245 ಫಲಾನುಭವಿಗಳಿಗಾಗಿ ರೂ.5.08 ಕೋಟಿ ವೆಚ್ಚ ▪ ರೂ.16.83 ಕೋಟಿ ಸಾಲದ ನೆರವಿನೊಂದಿಗೆ 12,103 ಫಲಾನುಭವಿಗಳಿಗಾಗಿ ಸ್ವಯಂಉದ್ಯೋಗ ಕಲ್ಪನೆ. ▪ 7,594 ವಿದ್ಯಾರ್ಥಿಗಳ ವಿವಿಧ ಕರಕುಶಲಗಳಲ್ಲಿ ತರಬೇತಿ ನೀಡಲು ರೂ.2.92 ಕೋಟಿ ವೆಚ್ಚ.

## ಇತರ ಪ್ರಮುಖ ಕಾರ್ಯಕ್ರಮಗಳು

- ಬರ ಪರಿಹಾರ – ಬರಪೀಡಿತ ಪ್ರದೇಶಗಳಲ್ಲಿ 'ಕೆಲಸಕ್ಕಾಗಿ ಆಹಾರ' ಕಾರ್ಯಕ್ರಮದಡಿ ರೂ.100 ಕೋಟಿ ಬಿಡುಗಡೆ. ಜಾನುವಾರುಗಳಿಗೆ ಮೇವು ಮತ್ತು ಕುಡಿಯುವ ನೀರು ಸೌಲಭ್ಯಕ್ಕಾಗಿ ಅಗತ್ಯ ಕ್ರಮ.
- ನೀರಾವರಿ - ನೀರಾವರಿ ಸೌಲಭ್ಯಗಳಿಗಾಗಿ ವಿಶೇಷ ಒತ್ತು, 2002–03 ಸಾಲಿನಲ್ಲಿ ನೀರಾವರಿಗಾಗಿ ಅಂದಾಜು ವೆಚ್ಚ ರೂ.2,790 ಕೋಟಿಗೆ ನಿಗದಿ. ಇದು ರಾಜ್ಯದ ಅಂದಾಜು ವೆಚ್ಚದಲ್ಲಿ ಸುಮಾರು ಶೇ.32ರಷ್ಟಿರುವುದು: ಜಲಾನಯನ ಪ್ರದೇಶಗಳ ಅಭಿವೃದ್ಧಿಗಾಗಿ ವಿಶ್ವಬ್ಯಾಂಕ್‌ನಿಂದ ರೂ.690 ಕೋಟಿ ನೆರವು.
- ವಿವಿಧ ನಗರಾಭಿವೃದ್ಧಿ ಪ್ರಾಧಿಕಾರಗಳಿಂದ 50,000 ನಿವೇಶನಗಳ ವಿತರಣೆ.
- 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ವೃತ್ತಿ ಶಿಕ್ಷಣ ಕೋರ್ಸ್‌ಗಳಲ್ಲಿ ಮತ್ತು ಉದ್ಯೋಗ ನೇಮಕಾತಿಗಳಲ್ಲಿ ಶೇಕಡ 5 ಮೀಸಲು.
- ಪ್ರಾದೇಶಿಕ ಅಸಮತೋಲನ ನಿವಾರಣೆಗಾಗಿ ಈಶಾನ್ಯ ವಲಯದ 7 ಜಿಲ್ಲೆಗಳಿಗೆ ಪ್ರತ್ಯೇಕ ಸಾರಿಗೆ ವಿಭಾಗ: ಉತ್ತಮ ಗುಣಮಟ್ಟದ ಶಿಕ್ಷಣದೊಂದಿಗೆ ವಿದ್ಯಾರ್ಥಿಗಳ ತೇರ್ಗಡೆ ಪ್ರಮಾಣದ ಸುಧಾರಣೆಯ ಮುಖ್ಯ ಉದ್ದೇಶದೊಂದಿಗೆ ಈ ವಲಯದಲ್ಲಿ ಪ್ರತ್ಯೇಕ ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯದ ಸ್ಥಾಪನೆ.
- ಪ್ರಾದೇಶಿಕ ಸಾರಿಗೆ ಕಛೇರಿಗಳ ಗಣಕೀಕರಣಕ್ಕೆ ಚಾಲನೆ: ಪ್ರಯಾಣಿಕರ ಸೌಕರ್ಯಕ್ಕಾಗಿ ಸುಖಾಸೀನ ಬಸ್ಸುಗಳು.

*... ಹಾಗೂ ಜನಸಾಮಾನ್ಯರ ಕಲ್ಯಾಣಕ್ಕಾಗಿ ಮತ್ತಿತರ ಅನೇಕ ಕಾರ್ಯಕ್ರಮಗಳು*

ಕರ್ನಾಟಕ ವಾರ್ತೆ



***ಸಮೃದ್ಧ ಕರ್ನಾಟಕ ನಮ್ಮ ಛಲ - ನಮಗೆ ಬೇಕು ಸರ್ವರ ಬಲ***

# ಮಂದಗತಿಯದೇ ಆದರೂ ನಿಖರ ಅಭಿವೃದ್ಧಿಮಾರ್ಗ ಬೇಕು

**- ಡಾ॥ ಪಿ. ಆರ್. ಬ್ರಹ್ಮಾನಂದ**

'**ಹೊ**ಸತು' ಪತ್ರಿಕೆಯ ಒಂದೆರಡು ಸಂಚಿಕೆಗಳನ್ನು ಪ್ರೊ॥ ಪಿ. ಆರ್. ಬ್ರಹ್ಮಾನಂದರಿಗೆ ಮೊದಲು ಕೊಟ್ಟು ಅವರೊಡನೆ ಸಂದರ್ಶನಕ್ಕೆ ಪೀಠಿಕೆ ಹಾಕಿ, ಪರಿಚಯ ಮಾಡಿಕೊಳ್ಳೋಣವೆಂದು ಮನೆಯೊಳಕ್ಕೆ ಕಾಲಿಡುತ್ತಿದ್ದಂತೆ ಅವರೇ 'ಹೊಸತು'ವಿನ ಹೆಸರಿನಲ್ಲಿ ಸ್ವಾಗತಿಸಿ ನಮ್ಮನ್ನು ಚಕಿತಗೊಳಿಸಿದರು. ಈ ಪತ್ರಿಕೆಯನ್ನು ಅವರ ಸೋದರಿ ತರಿಸುವುದಾಗಿ ಹೇಳಿ ವಿಷಯ ವಿನ್ಯಾಸಕ್ಕಾಗಿ 'ಹೊಸತು'ವನ್ನು ಮುಕ್ತವಾಗಿ ಪ್ರಶಂಸಿಸಿದರು. ಅನೇಕ ಬಗೆಯ ತಾತ್ವಿಕ ಪುನರ್ವಿಮರ್ಶೆಯಾಗುತ್ತಿರುವ ಇಂದಿನ ಸಂಧಿಕಾಲದಲ್ಲಿ ಇಂಥ ಪತ್ರಿಕೆಯ ಅತ್ಯಗತ್ಯವಿದೆಯೆಂದು ಅಭಿಪ್ರಾಯಪಟ್ಟರು. ಇದರ ಓದುಗರೊಡನೆ ತಮ್ಮ ಕೆಲವು ಚಿಂತನೆಗಳನ್ನು ಹಂಚಿಕೊಳ್ಳಲು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಸಂವಾದಕ್ಕೆ ಮುಂದಾದರು.



ನಮ್ಮ ಕಾಲೇಜಿನ ವ್ಯಾಸಂಗದ ಕಾಲದ ಐವತ್ತರ ದಶಕದಲ್ಲಿ ಬ್ರಹ್ಮಾನಂದರೆಂಬುವರೊಬ್ಬರು ಮುಂಬಯಿಯಲ್ಲಿದ್ದಾರೆ, ಅವರು ಹಣಕಾಸು ಪ್ರಪಂಚದ ಅರ್ಥಶಾಸ್ತ್ರಜ್ಞರೆಂದು ಹೇಳಿ ಅಷ್ಟಕ್ಕೆ ಅವರ ಪರಿಚಯ ಮುಗಿಸುತ್ತಿದ್ದುದು ವಾಡಿಕೆ. ಅದೊಂದು ನೀರಸ ಪಾಂಡಿತ್ಯವೆಂಬ ಧೋರಣೆ. ಅಂದು ಎಲ್ಲರೂ ಆರ್ಥಿಕ ಬೆಳವಣಿಗೆಯ ಶಾಸ್ತ್ರದಲ್ಲಿ ಉತ್ಸಾಹಿಗಳಾಗಿದ್ದ ಕಾಲ. ಆದರೆ ಈಗ ಅನ್ನಿಸುತ್ತೆ, ಅಧಿಕಾರಾರೂಢ ಅರ್ಥಶಾಸ್ತ್ರ ಯಾವುದೋ ಪಿತೂರಿ ಮಾಡಿ ಅವರ ನೈಜ ಕೊಡುಗೆಯ ವ್ಯಾಪ್ತಿಯನ್ನು ಮತ್ತು ವಿಶಿಷ್ಟ ವ್ಯಕ್ತಿತ್ವವನ್ನು ಬೇಕೆಂತಲೇ ಮರೆಮಾಚಿತ್ತೋ ಎಂದು. ಅವರು ಹಣಕಾಸು ಶಾಸ್ತ್ರಕ್ಕೆ ಮೂಲ ಕೊಡುಗೆ ಮಾಡಿರುವಂತೆಯೇ ಆರ್ಥಿಕ ಅಭಿವೃದ್ಧಿ, ಚಿನ್ನ-ಡಾಲರ್ ಚರ್ಚೆ, ಭಾರತೀಯ ಅರ್ಥಶಾಸ್ತ್ರ ಯೋಜನೆ, ಹಣದುಬ್ಬರ, ಆರ್ಥಿಕತೆಯ ಕ್ಷೇಮಚಿಂತನೆ, ಅಭಿವೃದ್ಧಿಯ ಪರಿಭಾಷೆಗೊಂದು ಸಾಮಾನ್ಯ ನಿಯಮಾನ್ವೇಷಣೆ, ಹೀಗೆ ಹತ್ತು ಹಲವಾರು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ.

ಭಾರತದ ಹಾಗೂ ವಿಶ್ವದ ಅರ್ಥಶಾಸ್ತ್ರ ಪಂಡಿತರೊಡನೆ ಭುಜಕ್ಕೆ ಭುಜ ತಾಗಿಸಿ ಸರಿಸಾಟಿಯೆನಿಸಿಕೊಂಡಿರುವ ಧೀಮಂತರು ಪ್ರೊ॥ ಬ್ರಹ್ಮಾನಂದ. ಇವರ ಶಿಷ್ಯ ವರ್ಗ ಇವರ ಎಪ್ಪತ್ತನೆಯ ವರ್ಷಕ್ಕೆ ೫೧೮ ಪುಟಗಳ 'ಫಿಫ್ಟಿ ಯಿಯರ್ಸ್ ಆಫ್ ಡೆವಲಪ್‌ಮೆಂಟ್ ಇಕನಾಮಿಕ್ಸ್' ಎಂಬ ಸಂಪುಟವನ್ನು ಅರ್ಪಿಸಿ ಗೌರವಿಸಿದೆ. ಮತ್ತೊಮ್ಮೆ ಇವರ ಎಪ್ಪತ್ತೈದನೆಯ ವರ್ಷಕ್ಕೆ ವಿದ್ವಾಂಸ ವರ್ಗ ೬೦೦ ಪುಟಗಳ 'ಇಂಡಿಯನ್ ಇಕಾನಮಿ: ಅಜೆಂಡಾ ಫಾರ್ ದಿ ಟ್ವೆಂಟಿಫಸ್ಟ್ ಸೆಂಚುರಿ' ಎಂಬ ಮಹದ್‌ಗ್ರಂಥ ಸಮರ್ಪಿಸಿ ಮೆಚ್ಚುಗೆ ವ್ಯಕ್ತಪಡಿಸಿದೆ. ಈಗಾಗಲೇ ೬೦೦ಕ್ಕೂ ಮಿಕ್ಕು ಪ್ರಬಂಧಗಳನ್ನು, ೭೦ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವ ಇವರು ರಿಸರ್ವ್ ಬ್ಯಾಂಕಿಗಾಗಿ ಮೂರು ಸಂಪುಟದ 'ಮಾನಿಟರಿ ಹಿಸ್ಟರಿ ಆಫ್ ಇಂಡಿಯಾ ಫ್ರಮ್ ನೈನ್ಟೀನ್ತ್ ಸೆಂಚುರಿ ಟು ಇಂಡಿಪೆಂಡೆನ್ಸ್ ಆಫ್ ಇಂಡಿಯಾ' ಎಂಬ ಬೃಹತ್ ಗ್ರಂಥವನ್ನು ರಚಿಸುತ್ತಿದ್ದು ಸಾವಿರ ಪುಟದ ಇದರ ಮೊದಲ ಸಂಪುಟವನ್ನು ಪ್ರಕಟಿಸಿದ್ದಾರೆ. ಇವರ ಮೊದಲ ಗುರುಗಳಾದ ಕರ್ನಾಟಕದ ಮತ್ತೊಬ್ಬ ಹಿರಿಯ ಅರ್ಥಶಾಸ್ತ್ರಜ್ಞ ಎಸ್.ಎಲ್.ಎನ್. ಸಿಂಹ, ಇದರ ಮೌಲಿಕ ವಿಮರ್ಶೆ ಮಾಡಿದ್ದಾರೆ. ಪ್ರೊ॥ ಪಿ. ಆರ್. ಬ್ರಹ್ಮಾನಂದ ಅಪ್ಪಟ ಕನ್ನಡನಾಡಿನವರಾಗಿದ್ದು ಅವರನ್ನು ನಮ್ಮವರು ಎಂದು ಹೇಳಿಕೊಳ್ಳುವ ಹೆಮ್ಮೆ ನಮ್ಮದು. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರ ಅಭ್ಯಾಸ ಮಾಡಿದ ಇವರು ಮುಂಬಯಿ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ವಿಭಾಗವನ್ನು ತಮ್ಮ ಸಾರ್ಥಕ ಜೀವನದ ಕರ್ಮಭೂಮಿಯನ್ನಾಗಿಸಿಕೊಂಡವರು. 'ತಾಯಿನಾಡು' ರಾಮಯ್ಯನವರೆಂದೇ ನಾಡಿನಾದ್ಯಂತ ಹೆಸರಾಂತ ದೇಶಪ್ರೇಮಿ ಪಾಲಹಳ್ಳಿ ರಾಮಯ್ಯನವರ ಮಗ ಶ್ರೀ ಬ್ರಹ್ಮಾನಂದರಿಗೆ ಈಗ ೭೬ ವರ್ಷಗಳ ತಾರುಣ್ಯ. ತಾರುಣ್ಯವೆಂದೇ ಹೇಳುವುದು ಸರಿಯಾದ ಮಾತು. ಏಕೆಂದರೆ ಅವರು ನಿದ್ರೆಯ ಸಮಯ ಬಿಟ್ಟು ಮಿಕ್ಕೆಲ್ಲ ಸಮಯವನ್ನೂ ನಾಡಿನ, ವಿಶ್ವದ, ಜನತೆಯ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸುವ ನಿರಂತರ ಗುಂಗಿನಲ್ಲಿಯೇ ಇರುತ್ತಾರೆ. ತಾಯಿ ಸಮಾಜ ಸೇವಕಿ ಮತ್ತು ಬೆಂಗಳೂರಿನ ಡೆಪ್ಯೂಟಿ ಮೇಯರೂ ಆಗಿದ್ದ ಪಿ. ಆರ್. ಜಯಲಕ್ಷ್ಮನವರ ಕಡೆಯಿಂದ ಇವರು ಸಿ. ವಿ. ರಾಮನ್ ಅವರಿಗೂ ನೆಂಟರು. ಚಿಕ್ಕ ವಯಸ್ಸಿನಲ್ಲಿ ರಾಮನ್ ಅವರೊಡನೆ ಕಳೆದ ಸಂದರ್ಭಗಳು ಪರಿಣಾಮ ಬೀರಿವೆ. ಬಹು ಮುಖ್ಯವಾಗಿ ಶಾಸ್ತ್ರಾಭ್ಯಾಸದಲ್ಲಿ ಸ್ವದೇಶೀ ಭಾವನೆ ಅದು ಎಂದು ಅನಿಸುತ್ತದೆ. ಕಾರಣ ಇವರು ವಿಶ್ವದ ವಿವಿಧ ವಿದ್ವತ್ ಸಭೆಗಳಲ್ಲಿ ಭಾಗವಹಿಸಿದ್ದಾರಾದರೂ, ತಮ್ಮ ಕಾರ್ಯ ಕ್ಷೇತ್ರವನ್ನು ಭಾರತದಲ್ಲೇ ಉಳಿಸಿಕೊಂಡವರು. ಇವರ ಮನೆಯೆದುರೇ ಇದ್ದ ವಿ.ಸೀ.ಯವರ ಸ್ವಂತ ಸಂಗ್ರಹ, ಕೀನ್ಸ್ ಮಹಾಶಯನ ಅರ್ಥಶಾಸ್ತ್ರ ಸಾಹಿತ್ಯ, ಅವರೊಡನೆ ಇದರ ಬಗ್ಗೆ ಚರ್ಚೆ ಚಿಕ್ಕಂದಿನ ಮತ್ತೊಂದು ಶಾಶ್ವತ ಛಾಯೆ ಇವರ ಮೇಲೆ.

ನಮ್ಮ ಪಂಚವಾರ್ಷಿಕ ಯೋಜನೆಯನ್ನು ಟೀಕಿಸಿ ಪರ್ಯಾಯ ಚಿಂತನೆಯಂತೆ ತಮ್ಮ ಗುರು ವಿ. ಎನ್. ವಕೀಲರೊಡನೆ, ೧೯೫೮ರಲ್ಲೇ ಇವರು 'ಪ್ಲಾನಿಂಗ್ ಫಾರ್ ಎ ಷಾರ್ಟೇಜ್ ಇಕಾನಮಿ' ಎಂಬ ಗ್ರಂಥ ಪ್ರಕಟಿಸಿದ್ದರು. 'ವೇಜ್ ಗುಡ್ಸ್ ಇಕಾನಮಿ' ಎಂದೇ ಪ್ರಸಿದ್ಧವಾಗಿರುವ ಈ ಚಿಂತನೆ ಪುನಃ ಪುನಃ ಹೊರಸೂಸಿ ಬೆಳೆಯುತ್ತಾ ಬರುವ ಮಾರ್ಗವನ್ನು ಇವರ ಇತರ ಗ್ರಂಥಗಳು ಸೂಚಿಸುತ್ತವೆ. ಮೊದಲ ಪುಸ್ತಕ ಅಂದಿನ ಅಧಿಕಾರಾರೂಢ ಅರ್ಥಶಾಸ್ತ್ರದ ನೆಹರೂ-ಮಹಲನೋಬಿಸ್ ಮಾರ್ಗದ ಟೀಕೆಯಾಗಿ

> ಮುಂಬೈ ವಿಶ್ವವಿದ್ಯಾಲಯದ ವಿಶ್ರಾಂತ ಪ್ರಾಧ್ಯಾಪಕರಾದ ವಿಶ್ವವಿಖ್ಯಾತ ಅರ್ಥಶಾಸ್ತ್ರಜ್ಞ ಪ್ರೊ॥ ಪಿ. ಆರ್. ಬ್ರಹ್ಮಾನಂದರನ್ನು ಕಂಡು 'ಹೊಸತು' ತಂಡದವರು ಸೆಪ್ಟೆಂಬರ್ ೯ರಂದು ಬೆಂಗಳೂರಿನ ಅವರ ಮನೆಯಲ್ಲಿ ಸಂವಾದ ನಡೆಸಿದರು. ಡಾ॥ ಜಿ. ಆರ್., ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ ಮತ್ತು ಕೆ. ಪಿ. ಸ್ವಾಮಿ ಉಪಸ್ಥಿತರಿದ್ದರು. ಸಂವಾದದ ಶೈಲಿಯೇ ಹಾಗಿದ್ದು ಇದನ್ನು ವರದಿಯ ರೂಪದಲ್ಲಿ ಪ್ರಕಟಿಸಲಾಗಿದೆ.
>
> ■
>
> ವರದಿಯನ್ನು ಸಿದ್ಧಪಡಿಸಿದವರು
> ಕೆ. ಎಸ್. ಪಾರ್ಥಸಾರಥಿ

ಅಧಿಕಾರಶಾಹಿಯ ಒಲವು ಪಡೆಯುವಂಥದಾಗಿರಲಿಲ್ಲವಾದರೂ, ೧೯೮೮ರ ವೇಳೆಗೆ ಅವರ ಚಿಂತನೆ ಭಾರತ ಸರ್ಕಾರದ ಅರ್ಥನೀತಿಯನ್ನು ಪ್ರಭಾವಿಸುವಂಥ, ಜನಪ್ರಿಯ ಚಿಂತನೆಯಾಗಿಬಿಟ್ಟಿತ್ತು ಎನ್ನಬಹುದು. ವೇತನ-ಸಾಮಗ್ರಿಗಳು ಎಂಬ ಈ ಆರ್ಥಿಕ ವಿಕಾಸ ಮಾರ್ಗದ ಚಿಂತನೆ ಮೂಲಭೂತವಾಗಿ ಮಹಲನೋಬಿಸ್ ಮಾರ್ಗದಿಂದ ಭಿನ್ನವಾದುದು. ಭಾರತ ನೆಹರೂರವರ ನೇತೃತ್ವದಲ್ಲಿ ಆರ್ಥಿಕ ವಿಕಾಸದ ಉದ್ದೇಶ ದೇಶದ ರಕ್ಷಣೆಯೂ ಸೇರಿದಂತೆ ಹಲವು ರೀತಿಯ ಸ್ವಾವಲಂಬನಾ ಮಾರ್ಗವೆಂದು ಗುರುತಿಸಿತ್ತು. ಅದರ ಒತ್ತು ಉಳಿತಾಯ, ಅನುಭೋಗದಲ್ಲಿ ಕಡಿತ, ಹಲವು ರೀತಿಯ ನಿಯಂತ್ರಣ, ಬೃಹತ್ ಕೈಗಾರಿಕೆಗಳು, ಮೂಲಭೂತವೆನಿಸುವ ಕ್ಷೇತ್ರಗಳಲ್ಲಿ ಬೃಹತ್ ಬಂಡವಾಳ ನಿವೇಶನ, ಬೃಹತ್ ನೀರಾವರಿ-ವಿದ್ಯುಚ್ಛಕ್ತಿ ಯೋಜನೆ, ಇದಕ್ಕಾಗಿ ವಿದೇಶೀ ನೆರವಿಗೆ ಮೊರೆ ಹೋಗುವುದು ಇತ್ಯಾದಿ. ಈ ಮಾರ್ಗದಲ್ಲಿ ಸ್ವಲ್ಪ ಕಾಲ ಉದ್ಯೋಗ ಅವಕಾಶ ಉಂಟಾದರೂ, ಅದರ ಬೆಳವಣಿಗೆಯ ವೇಗ ಕುಗ್ಗಲಾರಂಭಿಸಿ, ಬೆಲೆ ಏರಿಕೆ, ಹಣದುಬ್ಬರ ಮುಂತಾದ ಸಂಕಟಗಳು, ಅದೇ ಕಾರಣ ಅತಿ ಹೆಚ್ಚಿನ ಬಡ್ಡಿ, ಹೂಡಿಕೆಗೆ ಆಂತರಿಕ ಬಂಡವಾಳ ಶೇಖರಣೆ ಸಾಕಷ್ಟು ಆಗದ್ದು, ಹೀಗೆ ಈ ಮುಗ್ಗಟ್ಟುಗಳ ಕತೆ ಈಗ ಇತಿಹಾಸ. ಆ ಮಾರ್ಗದಲ್ಲಿ ಉತ್ಪಾದಿತ ಸರಕುಗಳು ಮತ್ತಷ್ಟು ಬಂಡವಾಳ ಹೂಡಿಕೆಯ ಸರಕುಗಳಾಗಿ ಪರಿವರ್ತಿತವಾಗುತ್ತಿದ್ದುವೇ ವಿನಃ ತಕ್ಷಣ ಉಪಭೋಕ್ತರ ಸರಕಾಗಿ ಪರಿವರ್ತಿತವಾಗದೆ, ಮುಂದೆಂದೋ ಅವುಗಳು ದೊರಕಬಹುದಾದ ಸಾಧ್ಯತೆಯನ್ನು ಸೂಚಿಸುತ್ತಿತ್ತು. ಆದರೆ ಸಂಪೂರ್ಣ ಉದ್ಯೋಗ ನಿರ್ಮಾಣವಾಗಲು ಅಸಾಧ್ಯವಾದ ಹಿಂದುಳಿದ ಅರ್ಥ ವ್ಯವಸ್ಥೆಯಲ್ಲಿ ಈ ಮಾರ್ಗ ಅನುಸರಿಸಿದರೆ ಬಡವರ ಅಗತ್ಯ ಬಿಸಿಲು ಕುದುರೆಯಂತೆ ಕೈಗೆಟುಕದೆ ಮುಂದೆ-ಮುಂದೆ ಸರಿಯುತ್ತಲೇ ಅನಗತ್ಯವಾದ ಸಾಮಾಜಿಕ ಕ್ಷೋಭೆ ಉಂಟಾಗುತ್ತದೆ ಎಂದು ಬ್ರಹ್ಮಾನಂದರು ವಾದಿಸಿದ್ದರು. ಈ ಮಾರ್ಗ ಹಿಡಿದು ದೇಶ, ಶೀಘ್ರ ಅಭಿವೃದ್ಧಿಯ ಅವಕಾಶ ಕಳೆದುಕೊಂಡ ಮೊದಲೆರಡು ದಶಕಗಳ ಬಗ್ಗೆ ಇವರು ವಿಷಣ್ಣರಾಗುತ್ತಾರೆ. ಪಿ. ಆರ್.ಬಿ. ಅದಕ್ಕೆ ಪರ್ಯಾಯವಾಗಿ ಸಲಹೆ ಮಾಡಿದ್ದು ಕೂಲಿ-ವೇತನ ಪಡೆದು ಜೀವನ ಸಾಗಿಸುವ ಕಾರ್ಮಿಕರಿಗೆ, ವೃತ್ತಿಪರರಿಗೆ, ಅಗತ್ಯವಾದ ದಿನನಿತ್ಯದ ಬಳಕೆಯ ಎಲ್ಲ ವಸ್ತುವಿಶೇಷಗಳನ್ನು ಉತ್ಪಾದಿಸಲು ಆದ್ಯತೆ ನೀಡಬೇಕು, ಆಗ ಈ ಉತ್ಪಾದನೆಯ ಕ್ಷೇತ್ರ ಬಲು ವೇಗದಲ್ಲಿ ವಿಕಾಸವಾಗಿ ಉದ್ಯೋಗವನ್ನು ನಿರ್ಮಿಸುವುದು, ಅಲ್ಲದೆ ಮೂಲಭೂತ ಬಂಡವಾಳ ಹೂಡಿಕೆಗೆ ಬೇಕಾದ ಮಿಗುತಾಯ ನಿಧಿಯನ್ನೂ ಆಂತರಿಕವಾಗಿಯೇ ಸೃಷ್ಟಿಸುತ್ತದೆ. ಇಂಥ ಬೆಳವಣಿಗೆಯು ಒಂದು ದಶಕದಲ್ಲೇ ಜನಸಾಮಾನ್ಯರಿಗೆ ಹೆಚ್ಚು ನೋವು, ಮುಗ್ಗಟ್ಟು ಉಂಟು ಮಾಡದೆಯೇ, ನಿರಂತರ ವಿಕಾಸದ ಹಾದಿಯನ್ನು ಹಿಡಿಯಬಹುದು. ಬೃಹತ್ ಕೈಗಾರಿಕೆಗಳು ಹಿರಿಯ ಬಂಡವಾಳವನ್ನು ಅಪೇಕ್ಷಿಸುವ ಉದ್ಯಮಗಳನ್ನು ನಮ್ಮಂಥ ವ್ಯವಸ್ಥೆಯಲ್ಲಿ ಪ್ರಾರಂಭದಲ್ಲೇ ಆರಂಭಿಸುವುದು ಸಲ್ಲ. ಪರ್ಯಾಯ ಮಾರ್ಗದಲ್ಲಿ ವಿಕಾಸ ಸಣ್ಣ, ಮಧ್ಯಮ ಕೈಗಾರಿಕೆ ಹಾಗೂ ಕೃಷಿ ಕ್ಷೇತ್ರದಲ್ಲಿ ಮೊದಲು ಉಂಟಾಗಿ, ಇಲ್ಲಿ ಉತ್ಪತ್ತಿಯಾಗುವ ಆದಾಯ, ಮುಂದೆ ಬೃಹತ್ ಉದ್ಯಮಗಳಿಗೂ ಬೇಕಾದ ಬಂಡವಾಳ ದೊರಕಿಸಬಲ್ಲದು. ವಿದೇಶೀ ಬಂಡವಾಳದ ವಿಪರೀತ ಅಗತ್ಯದಿಂದ ತಪ್ಪಿಸಿಕೊಳ್ಳಬಹುದು. ಇತ್ತೀಚಿನ ಆರ್ಥಿಕ ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆ ಇವರಿಗೆ ಒಂದು ಹಂತದಲ್ಲಿ ತಮ್ಮ ಅಂದಿನ ಚಿಂತನೆ ಸರಿಯೆಂಬ ತಾತ್ವಿಕ ತೃಪ್ತಿಯನ್ನು ತಂದುಕೊಟ್ಟಿದೆಯಾದರೂ ಜಾಗತೀಕರಣದ ಹುಯ್ಲು, ಹೆಚ್ಚುತ್ತಿರುವ ವಿದೇಶೀ ವಾಣಿಜ್ಯದ ಆಂತರಿಕ ಆಕ್ರಮಣ, ಅವರಿಗೆ ಆತಂಕವನ್ನು ಉಂಟುಮಾಡಿದೆ. ಷಂಪೀಟರ್‌ನ 'ಚಿಕ್ಕದು ಸುಂದರ' ಎಂಬ ತತ್ವ ಹಾಗೂ ಕನಿಷ್ಠ ವ್ಯಕ್ತಿಯನ್ನು ಕೇಂದ್ರವಾಗುಳ್ಳ ಗಾಂಧೀವಾದ ನಮ್ಮ ಸಮಸ್ಯೆಗೆ ಪರಿಹಾರವೇ ಹೊರತು ಪಾಶ್ಚಿಮಾತ್ಯ ಬಂಡವಾಳವಾದದ ಮಾರ್ಗವಲ್ಲ ಎಂದು ಹೇಳುತ್ತಾರೆ. ಇದು ಕೇವಲ ಜಿಡಿಪಿ (ರಾಷ್ಟ್ರೀಯ ಒಟ್ಟು ಉತ್ಪಾದನೆ)ಯ ವಿಷಯವಲ್ಲ, ಕನಿಷ್ಠ ವ್ಯಕ್ತಿಯೂ ಸಾಧಾರಣ ನೆಮ್ಮದಿಯ ಜೀವನ ಮಾಡುವ ಅವಕಾಶದ ವಿಷಯ ಎಂದು ಗುರುತಿಸುತ್ತಾರೆ. ಸಮಾನತೆ ಅನ್ನುವುದು ಅವರಿಗೆ ಕನಿಷ್ಠ ಮಟ್ಟದಲ್ಲಿ ಅವಕಾಶದ ಸಮಾನತೆಯಾಗಿ ತೋರುತ್ತದೆ.

೧೯೭೧ರಷ್ಟು ಹಿಂದೆಯೇ ಶ್ರೀ. ಬ್ರಹ್ಮಾನಂದರು 'ಹೊಸ ಮಾರ್ಕ್ಸ್‌ವಾದಿ ಅರ್ಥ ಸಿದ್ಧಾಂತ' ಎಂಬ ತಮ್ಮ ಪ್ರಬಂಧದಲ್ಲಿ ತಾಂತ್ರಿಕ ಬದಲಾವಣೆಗಳು ಶ್ರಮದ ಬಳಕೆಯನ್ನು ಕಡಿಮೆ ಮಾಡುತ್ತಾ, ಆದರೂ ಹೂಡಿಕೆ-ಉತ್ಪಾದನೆಯ ಪ್ರಮಾಣವನ್ನು ವೃದ್ಧಿಸುತ್ತಾ ಹೋಗುವ ಇಂದಿನ ಬೆಳವಣಿಗೆಯನ್ನು ಪ್ರತಿಪಾದಿಸುತ್ತಾ, ಏರುತ್ತಲೇ ಹೋಗುವ ನಿರುದ್ಯೋಗದ ಗತಿಯನ್ನು ಗುರುತಿಸಿದ್ದರು. ಈ ನಿರುದ್ಯೋಗ ಕೀನ್ಸನ ಮಾರ್ಗವನ್ನು ಅನುಸರಿಸಿ ಸರಿಪಡಿಸಲಾಗದ ಆರ್ಥಿಕ ಸಂಬಂಧಗಳ ರಚನೆಯ ವಿನ್ಯಾಸದ ಪರಿಣಾಮ. ನಿರುದ್ಯೋಗ ಹೆಚ್ಚುತ್ತಿರುವಾಗ ಕೀನ್ಸನ ಪರಿಹಾರ ಸೂತ್ರ ಮತ್ತಷ್ಟು ಹಣದುಬ್ಬರವನ್ನುಂಟುಮಾಡುತ್ತದೆ ಎನ್ನುತ್ತಾರೆ. ಇದು ಪಾಶ್ಚಿಮಾತ್ಯ ಅರ್ಥವ್ಯವಸ್ಥೆಯ ಅಂತರ್ಗತ ವಿರೋಧಾಭಾಸ ಪರಿಸ್ಥಿತಿ ಎಂದು ವಿಶ್ಲೇಷಿಸುತ್ತಾರೆ. ಇಂದಿನ ಸಮಸ್ಯೆಗೆ ಕೀನ್ಸ್ ಮಾರ್ಗವನ್ನು ಅನುಸರಿಸಿ, ಹಾಗೆಯೇ ಒಂದಿಷ್ಟು ಹಣದುಬ್ಬರವನ್ನು ಸೃಷ್ಟಿಸಿದರೂ ಅಡ್ಡಿಯಿಲ್ಲ ಎಂಬ ವಾದ ಮಂಡಿಸುವವರು ಬ್ರಹ್ಮಾನಂದರ ಈ ವಿಶ್ಲೇಷಣೆಯನ್ನು ಆಸಕ್ತಿಯಿಂದ ಗಮನಿಸಿಯಾರು. ಒಂದು ಮಿತಿಯಲ್ಲಿ ಹಣದುಬ್ಬರವನ್ನು ಕೃತಕವಾಗಿ ಸೃಷ್ಟಿಸಿದರೂ ಅಡ್ಡಿಯಿಲ್ಲ, ಹಾಗೆ ಸೃಷ್ಟಿಸಿದ ಹಣವನ್ನು ಮೂಲಭೂತ ಸೌಕರ್ಯದ ವಿಕಾಸಕ್ಕೆ ಬಂಡವಾಳವಾಗಿ ಉಪಯೋಗಿಸಬೇಕು ಎಂಬುದು ಕೀನ್ಸ್ ಪರಿಹಾರದ ಸರಳ ಪ್ರತಿಪಾದನೆ.

ಬ್ರಹ್ಮಾನಂದರಿಗೆ ವಿಜ್ಞಾನದ ಪ್ರಗತಿಯು ತಂತ್ರ ಮತ್ತು ಕಲ್ಪನೆಗಳ ಬೆಳವಣಿಗೆಯಾಗಿ ಕಾಣುತ್ತದೆ. ಪ್ರಗತಿ ಎಂಬುದು ನಿಂತಲ್ಲೇ ನಿಲ್ಲುವ, ಸಹಜ ಪ್ರವೃತ್ತಿಯಿಂದ ತಪ್ಪಿಸಿಕೊಳ್ಳುವ ಸಂತತ ಚಾಲನ ಪ್ರವೃತ್ತಿ. ಮಂದಗತಿಯದೇ ಆದರೂ ನಿಖರವಾದ ಅಭಿವೃದ್ಧಿ ಮಾರ್ಗವನ್ನು ಅರಸಬೇಕು. ಅಭಿವೃದ್ಧಿಶೀಲ ಸಮಾಜದ ಲಕ್ಷಣ ಮೂಲಭೂತ ಬದಲಾವಣೆಯನ್ನು ಹುಡುಕುವುದು. ವ್ಯಕ್ತಿಯ ಚಿಂತನೆಯೂ ಸಾಮೂಹಿಕ ಪರಿಕಲ್ಪನೆಗೆ ಸಂಬಂಧಿಸಿರಬೇಕು. ಅಂಥವರು ಒಟ್ಟಾರೆ ಪರಿಸ್ಥಿತಿಯ ಬಗ್ಗೆ ಮತ್ತು ಭವಿಷ್ಯದ ಬಗ್ಗೆ ಸದಾ ಚಿಂತಿಸುತ್ತಿರುತ್ತಾರೆ. ಸದ್ಯದಲ್ಲಿ ಇದು ಬ್ರಹ್ಮಾನಂದರ ಸ್ವಂತ ವ್ಯಕ್ತಿತ್ವವೇ ಆಗಿಬಿಟ್ಟಿದೆ ಎನ್ನಬಹುದು. ಇನ್ನೊಂದು ರೀತಿಯಲ್ಲಿ ಇದನ್ನೇ ಹೇಳುವುದಾದರೆ ವ್ಯಕ್ತಿಯ ಚಿಂತನೆ ಒಂದಿಷ್ಟು ವೈಯಕ್ತಿಕ, ಒಂದಿಷ್ಟು ಸಮಷ್ಟಿಯದು. ಅದು ಪಾಶ್ಚಿಮಾತ್ಯರ ಚಿಂತನೆಯಂತೆ ಕೇವಲ ವೈಯಕ್ತಿಕ ಸ್ವಾರ್ಥಕ್ಕೆ ಸಂಬಂಧಪಟ್ಟದ್ದಲ್ಲ. ಬ್ರಹ್ಮಾನಂದರ ಆರ್ಥಿಕ ಕ್ಷೇಮ ಸಿದ್ಧಾಂತ ಈ ಪೌರ್ವಾತ್ಯ ಚಿಂತನೆಯನ್ನು ಆಧರಿಸಿದೆ. ಈ ನಿಟ್ಟಿನಲ್ಲಿ ವ್ಯಕ್ತಿಯಿಂದ ವ್ಯಷ್ಟಿಯ ಹಿತಕ್ಕಾಗಿ ಸ್ವಲ್ಪಮಟ್ಟಿಗಾದರೂ ತ್ಯಾಗವನ್ನು ನಿರೀಕ್ಷಿಸಬಹುದು. ಇದು ವ್ಯಕ್ತಿ ತಾನೂ ಬದುಕಿ, ತನ್ನ ಸಮಾಜವನ್ನೂ ಬದುಕಿಸುವ ಹಾದಿ. ವ್ಯಕ್ತಿಯ ಮನಃಪಟಲದಲ್ಲಿ ಭೂತ ಭವಿಷ್ಯಗಳೆರಡೂ ವರ್ತಮಾನದೊಡನೆ ಮೇಳೈಸಿ, ಪೀಳಿಗೆಯಿಂದ ಪೀಳಿಗೆಗೆ ವ್ಯಕ್ತಿಯನ್ನು ಮೀರಿ, ಸಮಾಜ ಮುಂದುವರಿಯುತ್ತಾ ಹೋಗುವ ಪ್ರಕ್ರಿಯೆ ಉಂಟಾಗುತ್ತದೆ. ಮಾರ್ಕ್ಸ್ ಮತ್ತು ಗಾಂಧಿ ಚಿಂತನೆಯ ಕಸಿ ಇಲ್ಲಿ ಇಂಗಿತವಾಗುತ್ತದೆ.



ಬ್ರಹ್ಮಾನಂದ ಅವರನ್ನು ಸಂದರ್ಶಿಸುತ್ತಿರುವ ಸುರೇಂದ್ರ, ಪಾರ್ಥಸಾರಥಿ ಮತ್ತು ಜಿ. ಆರ್.

ಸರ್ಕಾರ ವಾಣಿಜ್ಯ ಲೋಕದಿಂದ ನಿವೃತ್ತನಾಗಬೇಕು ಎಂಬ ಮಾತು ಇಂದು ಪದೇ ಪದೇ ಕೇಳಿಬರುತ್ತಿದೆ. ಬ್ರಹ್ಮಾನಂದರು ಈ ಕುರಿತು "ನಾವು ದಶಕಗಳ ಹಿಂದೆಯೇ ಹೇಳಿದ್ದು, ಬಹಳ ಮುಖ್ಯವಾದ ಒಂದು ವ್ಯತ್ಯಾಸದಿಂದ ಸರ್ಕಾರ ಅನವಶ್ಯಕ ಕ್ಷೇತ್ರಗಳಿಂದ ಹೊರಬರಬೇಕು. ಅದರ ಇನ್ನೊಂದು ಮುಖ ಸರ್ಕಾರ ಅವಶ್ಯಕವಾದ ಕ್ಷೇತ್ರಗಳಲ್ಲಿ ಸಮರ್ಥವಾಗಿ ಕೆಲಸ ನಿರ್ವಹಿಸಬೇಕು. ಸಾರ್ವಜನಿಕ ಶಿಕ್ಷಣ, ಆರೋಗ್ಯ, ಸಾರಿಗೆ ಮುಂತಾದವು ಬಡಜನರ ಸಾಮೂಹಿಕ ಅಗತ್ಯಗಳು; ಇವನ್ನು ಸರ್ಕಾರ ನಿರ್ವಹಿಸಲೇಬೇಕು" ಎನ್ನುತ್ತಾರೆ. ಅವರ ಅಭಿಪ್ರಾಯದಲ್ಲಿ ಸರ್ಕಾರ ಅಥವಾ ಪ್ರಭುತ್ವ ಸಾಮಾಜಿಕ ಬದಲಾವಣೆಯನ್ನು ತರಬಲ್ಲ ಸಲಕರಣೆಯಲ್ಲ. ಸರ್ಕಾರದ ಸಾಮಾಜಿಕ ಪಾತ್ರವನ್ನು ವೈಭವೀಕರಿಸುವ ಸಮಾಜದಲ್ಲಿ ಭ್ರಷ್ಟಾಚಾರ ಹೆಚ್ಚುತ್ತದೆ. ಎಲ್ಲಕ್ಕೂ ಕಾನೂನಿನಿಂದ

ಪರಿಹಾರ, ಎಲ್ಲಕ್ಕೂ ಸರ್ಕಾರವನ್ನು ಎದುರು ನೋಡುವುದು ಆರೋಗ್ಯಕರ ಸಮಾಜವಾಗುವುದಿಲ್ಲ. ವ್ಯಕ್ತಿ ಸ್ವಯಂ ಇಚ್ಛೆಯಿಂದ ನಿರ್ವಹಿಸುವ ಸಮಾಜ ಪರಿವರ್ತಕ ಚಾಲನೆಗಳು ಬಹಳ ಮುಖ್ಯವಾದುವು. ಇಂಥ ವೈಯಕ್ತಿಕ ಸ್ವಯಂಪ್ರೇರಿತ ಸೃಜನಶೀಲ ಪ್ರವೃತ್ತಿಗಳೆಲ್ಲವುಗಳ ಒಟ್ಟಾರೆ ಪರಿಮಾಣ ಹೆಚ್ಚಿದಷ್ಟೂ ಸಾಮೂಹಿಕ ಅಭಿವೃದ್ಧಿಶೀಲ ಪರಿಣಾಮಗಳು ಪ್ರಭಾವಪೂರ್ಣವೂ ವ್ಯಾಪಕವೂ ಆಗುತ್ತವೆ. ಇದು ಸಮಾಜ ಪರಿವರ್ತನೆಯ ಮೂಲಮಂತ್ರ, ಪ್ರಜಾಪ್ರಭುತ್ವ ಮಾರ್ಗ. ಹೀಗಾಗದೇ ಪ್ರಭುತ್ವವನ್ನೇ ಎಲ್ಲಕ್ಕೂ ಆಧಾರ ಮಾಡಿಕೊಂಡಿದ್ದೇ ಸೋವಿಯೆತ್ ಒಕ್ಕೂಟದ ಪತನಕ್ಕೆ ಕಾರಣವೆನ್ನುತ್ತಾರೆ. ಅವರು ಹಳ್ಳಿಯನ್ನು ಸಣ್ಣ ವ್ಯಕ್ತಿಯನ್ನು ಅನಾದರಿಸಿದರು. ತನ್ನ ತತ್ವ ಮಾರ್ಕ್ಸ್ ದೃಷ್ಟಿಕೋನದಿಂದ ತೀರ ಭಿನ್ನವಲ್ಲ. ಅದರಲ್ಲಿ ಸ್ವಲ್ಪಮಟ್ಟಿಗೆ ಗಾಂಧಿಯವರ ಪ್ರಭಾವವಿದೆ ಅಷ್ಟೇ ಎಂದು ಹೇಳುತ್ತಾರೆ. ಅದೇ ಧೋರಣೆಯನ್ನು ವ್ಯಾಖ್ಯಾನಿಸುತ್ತಾ ಭಾರತೀಯ ಸಮಾಜದ ಶ್ರೇಣೀಕೃತ ವ್ಯವಸ್ಥೆ ಹೇಗೆ ಅಭಿವೃದ್ಧಿಶೀಲತೆಗೆ ವಿರೋಧವಾಯ್ತೆಂಬುದನ್ನು ವಿವರಿಸುತ್ತಾರೆ. ಧರ್ಮಸೂತ್ರಗಳು ಸಮಾಜದ ಕ್ಲುಪ್ತ ನಿರ್ವಹಣೆಗೆ ನಿರ್ಧಾರವಾದವು. ಆದರೆ ಕಾಲ ಬದಲಾಯಿಸಿದಂತೆ ಅವನ್ನು ಪರಿಷ್ಕರಿಸಬೇಕಾಗಿತ್ತು. ಸಾಯಣ ವ್ಯಾಖ್ಯಾನದ ಸಂದರ್ಭದಲ್ಲಿ ಕೆಲವೊಮ್ಮೆ ಪ್ರಸಕ್ತ ಕಾಲಕ್ಕೆ ಅಸಂಗತವೆನಿಸುವುದನ್ನು ಕಲಿವರ್ಜ್ಯವೆಂದು ಕೈಬಿಟ್ಟು ಮುಂದೆ ಹೋಗುವ ಕ್ರಮ ಇದು. "ಯಾರೋ ಸಾಯುತ್ತಿರುವುದನ್ನು ನೋಡುತ್ತಲೇ ನಾವು ಮಜಾ ಮಾಡುವುದಕ್ಕಾಗುತ್ತದೆಯೇ ?" ಎಂದು ಉದ್ಗಾರ ತೆಗೆದಾಗ ಉಪಭೋಕ್ತ ಸಂಸ್ಕೃತಿಯನ್ನು ಅವರು ಝಾಡಿಸುವುದು ಸ್ಪಷ್ಟವಾಗುತ್ತದೆ. ಹಿಂದುಳಿದವರ ಬಗೆಗಿನ ಮರುಕ ಹೊರಸೂಸುತ್ತದೆ.

"ನಾವಾಗೇ ಜವಾಬ್ದಾರಿಯುತವಾಗಿ ವರ್ತಿಸಬೇಕು, ಒತ್ತಾಯದಿಂದಲ್ಲ. ಈಗ ನೋಡಿ, ಮೇಷ್ಟ್ರುಗಳು ಈಗಂತೂ ಅಷ್ಟೊಂದು ಸಂಬಳ ಬರುತ್ತೆ. ಸುಖದಿಂದಿರಲು ಸಾಕಷ್ಟು, ಆದರೂ ನೋಡಿ ಓದೊಲ್ಲ, ಲೈಬ್ರರಿಗೆ ಹೋಗೊಲ್ಲ, ಪಾಠ ಮಾಡೊಲ್ಲ, ಇದೇನು ನ್ಯಾಯವೇ?" ಬಹುಶಃ ಅವರಿಗೆ ಪ್ರಚೋದಕ ಪ್ರೇರಣೆ ಸಾಲದೇ ಅಂದರೆ "ನಮ್ಮದು ಬಡದೇಶ. ಎಷ್ಟು ಸಂಬಳ ಜಾಸ್ತಿ ಮಾಡೋಕೆ ಆಗುತ್ತೆ ಹೇಳಿ! ಅವರೇ ಪ್ರೇರೇಪಿಸ್ಕೋಬೇಕು. ಅದು ಹೇಗೆ ಮಾಡಬೇಕೋ ನನಗೆ ತಿಳಿಯದು"



ಎಂದು ಮರುಗುತ್ತಾರೆ. ತಕ್ಷಣ ಏನೋ ಹೊಳೆದಂತೆ, "ನೋಡಿ ಇದೆಂಥ ಅನ್ಯಾಯ ! ಎಲೆಕ್ಷನ್‌ಗೆ ನಿಲ್ಲೋನು ತನ್ನ ಎಲ್ಲ ವಿವರಾನೂ ಹೊರಗೆಡಹಬೇಕು ಅಂದರೆ ಎಲ್ಲ ಒಟ್ಟಾಗಿ ಒಲ್ಲೇ ಅಂತಾರಲ್ಲಾ! ಓಟು ಮಾಡುವವನಿಗೆ ಉಮೇದುವಾರನ ವಿಷಯ ತಿಳಿಯುವ ಹಕ್ಕಿಲ್ಲವೇ ?... ಅದ್ಹೇಗೆ ಮಾಡ್ಬೇಕೋ ನನಗೆ ತಿಳಿಯದು...." ಹೀಗೆ ಪದೇ ಪದೇ ಅಸಹಾಯಕತೆಯ ಮಾತುಗಳನ್ನು ಉದ್ಗರಿಸುತ್ತಾ ಹೋಗುತ್ತಾರೆ. ಇನ್ನೊಂದು ಸ್ತರದಲ್ಲಿ ಸಮಸ್ಯೆಯ ಪರಿಹಾರದ ಪರ್ಯಾಯಗಳನ್ನೆಲ್ಲಾ ನಮ್ಮ ಮುಂದಿಟ್ಟು ಆರಿಸಿಕೊಳ್ಳುವ ಸ್ವಾತಂತ್ರ್ಯ ನಮಗೇ ಬಿಡುವ ಉದಾರವ್ಯಕ್ತಿಯ ಝಲಕೂ ಆಗಿರುತ್ತದೆ ಈ ವೈಖರಿ. "ಅವರಿಗೆ ಹಾಗೆ ತಮ್ಮ ವಿಷಯಗಳನ್ನೆಲ್ಲಾ ಬಹಿರಂಗ ಪಡಿಸಲು ಹೆದರಿಕೆ. ನಮ್ಮಲ್ಲಿ ಬಹಳ ಕೆಟ್ಟ ಪ್ರಾಣಿಗಳಿವೆ. ಅವರು ಇವರ ಮೇಲೆ ಕೇಸ್ ಹಾಕಿ ಸಿಕ್ಕಿಸಿಬಿಟ್ರೆ ಅಂತ ಹೆದರಿಕೆ" ಜಿ. ಆರ್. "ಅದು ನಿಜ ತಾನೆ ?" ಎಂದರೆ ಹೌದು, ಆದರೂ ಅದಕ್ಕೆ ಬೇರೆ ಮಾರ್ಗ ಹುಡುಕಿ ಪರಿಹಾರ ಕಂಡುಕೊಳ್ಳಬೇಕು ಅಲ್ಲವೇ, ಅನ್ನುತ್ತಾರೆ.

ತುರ್ತು ಪರಿಸ್ಥಿತಿ ಬಂದಾಗ ಮುಂಬಯಿ ವಿಶ್ವವಿದ್ಯಾಲಯದ ಕೆಲವು ಜನ ಧೈರ್ಯವಾಗಿ ವಿರೋಧ ವ್ಯಕ್ತಪಡಿಸಿದ್ದನ್ನು ಸ್ಮರಿಸಿಕೊಂಡು ವಾರ್ಧಾದಲ್ಲಿ ವಿನೋಬಾ ಭಾವೆಯವರೊಡನೆ ತಾವೂ ಭಾಗವಹಿಸಿದ ಸಭೆ ಅವರ ನೆನಪಿಗೆ ಬರುತ್ತದೆ. ನಮ್ಮಲ್ಲೂ ಸಾಮಾಜಿಕ ಸಾಮೂಹಿಕ ಶಿಸ್ತು ಕಡಿಮೆಯಾಗಿರುವುದು ನಿಜವೇ ಎನ್ನುವ ವಿನೋಬಾ ತುರ್ತು ಪರಿಸ್ಥಿತಿಯನ್ನು ಅನುಶಾಸನ ಪರ್ವ ಎಂದು ಬಣ್ಣಿಸಿದ್ದು ಅವರಿಗಿನ್ನೂ ನೆನಪಿದೆ. ಆದರೆ ಅನುಶಾಸನವೆಂಬುದು ಸರ್ಕಾರದ ಶಾಸನವಲ್ಲ, ಅದು ಸ್ವಂತ ತೀರ್ಮಾನದ ಸ್ವೇಚ್ಛೆಯ ಶಿಸ್ತು ಪಾಲನೆ ಎಂದು ವ್ಯಾಖ್ಯಾನಿಸುತ್ತಾರೆ. ವಿನೋಬಾರವರ ಇಂಗಿತದ ಠರಾವನ್ನು ಬ್ರಹ್ಮಾನಂದರು ಜೆ.ಪಿ.ಯವರಿಗೆ ತಲಪಿಸಿದರಂತೆ. ಜೆ. ಪಿ. ಅದನ್ನು ಓದಿ ನಸುನಕ್ಕು "ಯಾವುದೇ ವಿಷಯದಲ್ಲಿ ಜನರೇ ಮುಖ್ಯ ಅಲ್ಲವೇ ?" ಎಂದು ಕೇಳಿದರಂತೆ. ಅಧಿಕಾರ ಕೆಡಿಸುತ್ತದೆ, ಜನರೇ ಆಖೈರು ಎಂಬ ಲಾರ್ಡ್ ಆಕ್ಟನ್ ವಾದ ಇವರಿಗೆ ತುಂಬಾ ಪ್ರಿಯ. ಕೆಲವೇ ಒಳ್ಳೆಯ ಜನ ಸಮಾಜದ ಹಿತಕ್ಕಾಗಿ ಆಳುವ ಸಂಭವ ಆಕಸ್ಮಿಕವಾಗಿದ್ದರೂ, ಜಿ. ಆರ್. "ಅದು ಮುಂದುವರೆದು ಹಿತಕರವೆನಿಸುವ ಸರ್ವಾಧಿಕಾರದತ್ತ ಎಳೆದೊಯ್ಯುತ್ತದೆ ಅಲ್ಲವೇ" ಎನ್ನುತ್ತಾರೆ. "ಹೌದು, ಹೌದು, ನಿಜವೇ...." ಎಂದು ತಕ್ಷಣವೇ ಉದ್ಗಾರ ತೆಗೆಯುತ್ತಾ ಚಿಂತಕರನ್ನು ಕಾಡುವ ವಿಷಯ ಇದೇ ಎನ್ನುತ್ತಾರೆ. ಕಾನೂನು ಮಾಡಿಬಿಡಬಹುದು. ಆದರೆ ಅದರ ಕಾವು ತಟ್ಟುವುದು ಸಾಧಾರಣ ಜನರನ್ನು ಮಾತ್ರ. ಆಳುವ ಜನರನ್ನೆಲ್ಲಾ "ಇದು ಅನುಭವದ ಮಾತೂSSSSS...." ಎನ್ನುತ್ತಾರೆ.

ಬ್ರಹ್ಮಾನಂದರೊಡನೆ ಸಂವಾದ ಒಂದು ಸುಂದರ ಬೌದ್ಧಿಕ ಕಸರತ್ತು. ಮಹಾಭಾರತದ ಯಕ್ಷಪ್ರಶ್ನೆಯ "ಕಿಂ ಪಾಂಡಿತ್ಯಂ ?" ಪ್ರಶ್ನೆಯ ಉತ್ತರ "ಪರಿಚ್ಛೇದಃ" ಎಂಬ ಮಾತು ಇಲ್ಲಿ ಅನ್ವಯವಾಗುತ್ತದೆ. ವಿವರವಾಗಿ ವಿಶ್ಲೇಷಿಸುತ್ತಲೇ, ಸೂಕ್ಷ್ಮಾತಿಸೂಕ್ಷ್ಮ ಎಳೆಗಳನ್ನು ನೆನಪಿನಾಳದಿಂದ ಕರಾರುವಾಕ್ಕಾಗಿ ಹಿಡಿಯುತ್ತಾರೆ. ಇದು ಕೇವಲ ಪ್ರಶ್ನೆ-ಉತ್ತರಗಳ ಯಾಂತ್ರಿಕ ಪ್ರಕ್ರಿಯೆಯಲ್ಲ. ಅದೊಂದು ರೀತಿ ಸಂಪೂರ್ಣ ವಾಕ್ಯಗಳಿಲ್ಲದ ಕುಂಚದ ಬೀಸಿನಂಥ ವರಸೆಗಳು. ದಿಕ್ಕು ಸ್ಪಷ್ಟವಿಲ್ಲದ ಗೊಂದಲದ ಇಂದಿನ ಸಾಮಾಜಿಕ ಆರ್ಥಿಕ ಸಂದರ್ಭದಲ್ಲಿ ಇವರೊಡನೆ ಚರ್ಚಿಸಿದರೆ ಮಾರ್ಗ ಸೂಚಿಸುವ ಮಿಂಚುಗಳು ಗೋಚರಿಸುತ್ತಾ ಕೋರೈಸುತ್ತಾ ಹೋಗುತ್ತವೆ. ಅದೇ ಇವರ ಪ್ರಸ್ತುತತೆ. ಇವರು ಶತಾಯುಷಿಯಾಗಿ ತಮ್ಮ ಚಿಂತನೆಗಳನ್ನು ಎಲ್ಲರೊಡನೆ ಹಂಚಿಕೊಳ್ಳುತ್ತಲಿರಲಿ ಎಂದು 'ಹೊಸತು' ಹಾರೈಸುತ್ತದೆ.

**ಕೆ. ಎಸ್. ಪಾರ್ಥಸಾರಥಿ**
೩-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್
೧ನೇ ಘಟ್ಟ, ಜೆ.ಪಿ. ನಗರ, ಬೆಂಗಳೂರು-೫೬೦ ೦೭೮

ಸುದ್ದಿಚಿತ್ರ



ಬೆಂಗಳೂರಿನಲ್ಲಿ ಅಕ್ಟೋಬರ್ 8 ಮತ್ತು 9ರಂದು ಎನ್. ಎಸ್. ವೆಂಕಟರಾಂ ನಾಟಕೋತ್ಸವ ಜರುಗಿತು. ■ ಸಂದರ್ಭದಲ್ಲಿ 'ಪಾಪಣ್ಣಿ ಲೋಕ' ಪುಸ್ತಕ ಬಿಡುಗಡೆ ಮಾಡಲಾಯಿತು. ವಿಚಾರ ಸಂಕಿರಣ ನಡೆಸಲಾಯಿತು. ವೆಂಕಟರಾಂ ಅವರ ನಾಟಕಗಳನ್ನು ಪ್ರದರ್ಶಿಸಲಾಯಿತು. ಹಲವು ಗಣ್ಯರನ್ನು ಗೌರವಿಸಲಾಯಿತು. ನವಕರ್ನಾಟಕ ಪ್ರಕಾಶನಕ್ಕೆ ಪ್ರಕಾಶನ ಕ್ಷೇತ್ರದ ಪ್ರಶಸ್ತಿ ನೀಡಲಾಯಿತು. ನವಕರ್ನಾಟಕದ ಪರವಾಗಿ ಹಿರಿಯ ಸಂಪಾದಕ ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್, ವಿಮಲ ರಂಗಾಚಾರ್ ಅವರಿಂದ ಪ್ರಶಸ್ತಿ ಸ್ವೀಕರಿಸಿದರು. ವೆಂಕಟರಾಂ ಅವರ ಮೇರುಕೃತಿ 'ನವಕರ್ನಾಟಕ ಕೈಪಿಡಿ – ರಂಗಭೂಮಿ'ಯನ್ನು ನವಕರ್ನಾಟಕ ಪ್ರಕಟಿಸಿದೆ.

# ಬರ-ನೆಲದಿಂದ ಮುಗಿಲಿಗೆ



**ಕ**ಳೆದ ತಿಂಗಳು ಸಂಜೆ ದಿನದಿನಕ್ಕೆ ದಿಗಂತದಂಚಿಗೆ ಸರಿದು ಮಾಯವಾದ ಶುಕ್ರ ಈಗ ಬೆಳಗಿನ ಸುಪ್ರಭಾತ ಹೇಳುತ್ತಿದೆ. ತಿಂಗಳ ಆರಂಭದ ದಿನಗಳಲ್ಲಿ ಸೂರ್ಯೋದಯಕ್ಕೆ ಅರ್ಧಮುಕ್ಕಾಲು ಗಂಟೆ ಮುಂಚೆ ಉದಯಿಸುವುದು. ಪೂರ್ವದಿಗಂತದ ಅರುಣರಾಗದಲ್ಲೂ ಹೊಳೆಯುವ ಪ್ರಕಾಶ ಇದರದ್ದು. ದುರ್ಬೀನು ದೂರದರ್ಶಕಗಳಿಂದ ನೋಡಿದಲ್ಲಿ ತೆಳ್ಳನೆಯ ಗೆರೆಯಂತೆ ಬಾಲಚಂದ್ರನ ಆಕಾರದಲ್ಲಿ ಕಾಣುವುದನ್ನು ನೋಡಬಹುದು. ತಿಂಗಳ ಕೊನೆಯ ಹೊತ್ತಿಗೆ ಈ ತೆಳ್ಳನೆಯ ಗೆರೆ ''ಬೆಳೆದು'' ದಪ್ಪಗಾಗುವುದನ್ನು ಕಾಣಬಹುದು. ದಿನದಿಂದ ದಿನಕ್ಕೆ ಈ ಬದಲಾವಣೆಯನ್ನು ಚಿತ್ರ ಬರೆದು ಅಥವಾ ಛಾಯಾಚಿತ್ರ ತೆಗೆದು ದಾಖಲಿಸಿದಲ್ಲಿ ಒಳ್ಳೆಯ ಸಂಗ್ರಹವಾಗುವುದು.

ಬೆಳಗಿನ ಜಾವ ಶುಕ್ರವನ್ನು ಗಮನಿಸುವಾಗ ಅದರ ಆಸುಪಾಸಿನಲ್ಲೇ ಮಂಗಳ ಗ್ರಹವನ್ನು ಕಾಣಬಹುದು. ಆದರೆ ಶುಕ್ರದಷ್ಟು ಪ್ರಕಾಶ ಇದಕ್ಕಿಲ್ಲ. ಸೂರ್ಯೋದಯಕ್ಕೆ ಸುಮಾರು ಎರಡು ಗಂಟೆ ಮೊದಲು ಉದಯಿಸುತ್ತದೆ. ಆಕಾಶದ ಆ ಭಾಗದಲ್ಲಿ ಪ್ರಕಾಶಮಾನ ನಕ್ಷತ್ರಗಳು ಹೆಚ್ಚಾಗಿಲ್ಲ. ೨೦-೨೧ರಂದು ಮಂಗಳದ ಮೂರು ಡಿಗ್ರಿಯಷ್ಟು ಅಂತರದಲ್ಲಿ ಸ್ಪಿಕಾ (ಚಿತ್ರಾ) ಏಳು ಡಿಗ್ರಿಯಷ್ಟು ಅಂತರದಲ್ಲಿ ಶುಕ್ರ ಕಾಣುವುದು. ಈ ವರ್ಷದುದ್ದಕ್ಕೂ ಕಾಣದಿದ್ದ ಮಂಗಳ ಇನ್ನು ಮುಂದೆ ಸ್ಫುಟವಾಗಿ ಕಾಣತೊಡಗುತ್ತದೆ.

ಸಂಜೆಯ ಆಕಾಶದಲ್ಲಿ ಗ್ರಹಗಳೇ ಇಲ್ಲದಂತಾಯಿತಲ್ಲ ಎಂದು ಪೇಚಾಡದಿರಿ. ಬುಧ ಗ್ರಹ ತಿಂಗಳ ಕೊನೆಯ ಹೊತ್ತಿಗೆ ಪಶ್ಚಿಮ ದಿಗಂತದ ಅಂಚಿನಲ್ಲಿ ಹಾಜರಿ ಹಾಕುತ್ತದೆ. ಅಷ್ಟೇ ಅಲ್ಲ; ಸೂರ್ಯಾಸ್ತವಾದ ಸುಮಾರು ಎರಡು ಗಂಟೆಗಳ ನಂತರ ಶನಿಗ್ರಹ ಪೂರ್ವದಲ್ಲಿ ಉದಯಿಸುತ್ತದೆ. ವೃಷಭ ಮಿಥುನ ರಾಶಿಗಳ ನಡುವೆ



ಈ ತಿಂಗಳ ಯಾವುದೇ ಸಂಜೆ ದಕ್ಷಿಣ ದಿಕ್ಕಿನಲ್ಲಿ ಕಾಣುವ ನೋಟ

ಕಾಣುವ ಇದು ಸಾಕಷ್ಟು ಪ್ರಕಾಶಮಾನವಾಗಿರುವುದರಿಂದ ಗ್ರಹ ಎಂದು ಸುಲಭವಾಗಿ ಗುರುತಿಸಬಹುದು.

ಗುರುಗ್ರಹ ರಾತ್ರಿ ಸುಮಾರು ೧೧ ಗಂಟೆಗೆ ಉದಯಿಸುವುದು. ಅತಿ ಪ್ರಕಾಶಮಾನವಾದ ನಕ್ಷತ್ರ ಸಿರಿಯಸ್‌ಗಿಂತ ಹೆಚ್ಚಿನ ಪ್ರಕಾಶ ಇದರದ್ದು. ಮಧ್ಯರಾತ್ರಿಯ ನಂತರ




ಪೂರ್ವದತ್ತ ನೋಡಿದಿರಾದರೆ ಅಥವಾ ಬೆಳಗಿನ ಜಾವ ನೆತ್ತಿಯತ್ತ ದೃಷ್ಟಿ ಹರಿಸಿದಿರಾದರೆ ಗುರು ಮತ್ತು ಸಿರಿಯಸ್ ನಡುವೆ ಪ್ರಕಾಶದ ಸ್ಪರ್ಧೆ ನಡೆಯುತ್ತಿದೆಯೋ ಎನ್ನಿಸುತ್ತದೆ.

ನಮ್ಮ ಮಾರ್ಗದರ್ಶಿ ಚಂದ್ರ ಯಾವ ದಿನ ಯಾವ ಗ್ರಹದ ಪಕ್ಕ ಕಾಣುತ್ತದೆ ಎಂದು ಪಟ್ಟಿಯಲ್ಲಿ ಕೊಟ್ಟಿದೆ. ಇದರ ಸಹಾಯದಿಂದ ಗ್ರಹಗಳನ್ನು ಗುರುತಿಸಬಹುದು. ಹುಣ್ಣಿಮೆ (೨೦ರಂದು)ಯ ಚಂದ್ರ ಕೃತ್ತಿಕಾ ನಕ್ಷತ್ರ ಗುಚ್ಛದ ಸಮೀಪವೇ ಕಾಣುತ್ತದೆ. ಅಂದು ಪಾರ್ಶ್ವ ಛಾಯಾ ಗ್ರಹಣವಿದೆ. ಅಂದರೆ ಚಂದ್ರ ಭೂಮಿಯ ನೆರಳಿನ ಹೊರವಲಯವನ್ನು ಮಾತ್ರ ಹಾದುಹೋಗುತ್ತದೆ. ಒಳವಲಯದ ಪೂರ್ಣ ಛಾಯಾ ಪ್ರದೇಶ (ಅಂಬ್ರಾ)ವನ್ನು ಹಾಯುವುದಿಲ್ಲವಾದ್ದರಿಂದ ಅದರ ಪ್ರಕಾಶ ಕುಂದುವುದು ಬರಿಗಣ್ಣಿಗೆ ತಿಳಿಯುವುದಿಲ್ಲ. (೨೦ರ ಬೆಳಿಗ್ಗೆ ೫ ಗಂಟೆಯಿಂದ ಸುಮಾರು ೯:೩೦ರವರೆಗೆ ಈ ಗ್ರಹಣವಿದೆ).

ಸಂಜೆ ಕಾಣುವ ನಕ್ಷತ್ರ ಪುಂಜಗಳನ್ನು ಗುರುತಿಸಲು ನಕ್ಷೆ ಬಳಸಬಹುದು. ಅಭಿಜಿತ್, ಶ್ರವಣ ಮತ್ತು ಹಂಸಾಕ್ಷಿ ಇವುಗಳು ಮೂಡಿಸುವ ಬೇಸಿಗೆಯ ತ್ರಿಕೋಣ ಪಶ್ಚಿಮಕ್ಕೆ ಸರಿದಿದೆ. ಉತ್ತರದಲ್ಲಿ ಮಹಾರಾಣಿ ಕಾಸಿಯೋಪಿಯಾ, ಮಹಾರಾಜ ಸಿಫಿಯಸ್, ರಾಜಕುಮಾರಿ ಆಂಡ್ರೋಮಿಡಾ ಇವರುಗಳಾಗಲೇ ರಂಗ ಪ್ರವೇಶಿಸಿದ್ದಾರೆ. (ಇವುಗಳಿಗೆ ಕ್ರಮವಾಗಿ ಕುಂತಿ, ಯುಧಿಷ್ಠಿರ ಮತ್ತು ದ್ರೌಪದಿ ಎಂಬ ಹೆಸರುಗಳಿವೆ.) ರಾಜಕುಮಾರಿಯನ್ನು ಭಯಂಕರ ಜಲಚರದಿಂದ ರಕ್ಷಿಸಿದ ನಾಯಕ ಪರ್ಸಿಯಸ್ (ಅರ್ಜುನ) ಈಶಾನ್ಯ ದಿಕ್ಕಿನಲ್ಲಿ ಉದಯಿಸುತ್ತಿದೆ. ನೆತ್ತಿಯ ಮೇಲೆ ಕಾಣುವ ಚೌಕ (ನಕುಲ) ಪೆಗಸಸ್ - ರೆಕ್ಕೆಯಿರುವ ಕುದುರೆ. ದಕ್ಷಿಣದಲ್ಲಿ ಬೆಳಗುವ ಮಕರ, ಕುಂಭ ರಾಶಿಗಳನ್ನು ಹುಡುಕುವುದು ಕಷ್ಟವೇ. ಏಕಾಂಗಿಯಾಗಿ ಹೊಳೆಯುವ ಫಾಮಲ್ ಹೌಟ್ (ಮೀನಾಕ್ಷಿ) ಎದ್ದು ಕಾಣುವುದು. ಅದಕ್ಕೂ ದಕ್ಷಿಣ ದಿಗಂತಕ್ಕೂ ಮಧ್ಯೆ ಎರಡು ಕಣ್ಣುಗಳಂತೆ ಹೊಳೆಯುವ ಇನ್ನೆರಡು ನಕ್ಷತ್ರಗಳು ನಿಮ್ಮನ್ನು ಆಕರ್ಷಿಸುವುವು. ಇವು GRUS ಅಂದರೆ ಬಕ ಎಂಬ ಪುಂಜಕ್ಕೆ ಸೇರಿದವು. ೧೬೦೩ರಲ್ಲಿ ದಕ್ಷಿಣದ ಪುಂಜಗಳನ್ನು ಗುರುತಿಸಿ ಹಕ್ಕಿಗಳ ಹೆಸರನ್ನಿರಿಸಿದ ಖಗೋಳ ವಿಜ್ಞಾನಿ - ಜೋಹಾನ್ಸ್ ಬಾಯರ್. ಬಕದ ಕೆಳಗಿರುವ ಇನ್ನೊಂದು ಪುಂಜದ ಹೆಸರು ಮಯೂರ. ಮತ್ತೊಂದು ಚಿತೆಯಿಂದೇಳುವ ಪಕ್ಷಿ ಫೀನಿಕ್ಸ್. ಪೆಸಿಫಿಕ್ ಸಾಗರದ ದ್ವೀಪವೊಂದರ ಜನ ಬಕ ನಕ್ಷತ್ರಪುಂಜದಲ್ಲಿ ಮೀನು ಹಿಡಿಯುವ ಗಾಳವನ್ನು ಕಲ್ಪಿಸಿಕೊಂಡಿದ್ದರು.

ದೂರದರ್ಶಕ ಇರುವವರು ಬಕದ ಈ ಎರಡು ನಕ್ಷತ್ರಗಳನ್ನು ಮತ್ತು ದಕ್ಷಿಣ ಮೀನದ ಮೀನಾಕ್ಷಿ (ಫಾಮಲ್ ಹೌಟ್) ಅನ್ನು ಗಮನಿಸಬಹುದು. ಅವುಗಳಲ್ಲಿ ಎರಡರ ಪಕ್ಕ ಕ್ಷೀಣ ಸಂಗಾತಿಗಳಿರುವುದೂ ಕಾಣುವುದು. ಬಕದಿಂದ ದಕ್ಷಿಣ ಮೀನದ ನಡುವೆ ಎಂಟು ಹತ್ತು ಗ್ಯಾಲಕ್ಸಿಗಳು - ದೂರದರ್ಶಕದಿಂದ ಮಾತ್ರ ಕಾಣುವಂತಹವು - ಇವೆ. ಛಾಯಾಚಿತ್ರಗಳಲ್ಲಿ ಇವನ್ನು ಮೂಡಿಸಲು ಕ್ಯಾಮರಾವನ್ನು ಹೆಚ್ಚು ಹೊತ್ತು ತೆರೆದಿಡಬೇಕಾಗುವುದು.

ಆಕಾಶ ಶುಭ್ರವಾಗಿದ್ದರೆ ಒದಗುವ ನೋಟಗಳಿವು - ಹಾಗಾದರೆ ''ಬರ'' ತಲೆಬರಹದಲ್ಲೇಕೆ? ಬರದಿಂದ ಮುಗಿಲಿಲ್ಲ - ಮುಗಿಲಿಲ್ಲದ್ದರಿಂದ ನಭಾವಲೋಕನ ಯಶಸ್ವಿ- ಈ ತರ್ಕದಿಂದ ಬರೆದಿದ್ದಲ್ಲ ಈ ತಲೆ ಬರಹ.

ಕಳೆದ ಕೆಲವು ವರ್ಷಗಳಿಂದ ನವೆಂಬರ್ ಎಂದರೆ ಉಲ್ಕೆಗಳು ಎಂಬ ಭಾವನೆ ಬೇರೂರಿಬಿಟ್ಟಿದೆ. ಉಲ್ಕೆಗಳು ಅಲ್ಲ - ಉಲ್ಕಾವೃಷ್ಟಿ. ಲಿಯೋನಿಡ್ ಉಲ್ಕಾವೃಷ್ಟಿಯ ಬಗ್ಗೆ 'ಹೊಸತು' ಆರಂಭವಾದಾಗಿನಿಂದಲೂ ಪ್ರತಿ ನವೆಂಬರ್‌ನಲ್ಲೂ ಬರೆದಿದ್ದೇನೆ. ೯೯-೨೦೦೦ದಲ್ಲಿ ನಮಗೆ ವೃಷ್ಟಿಯ ನೋಟ ದೊರಕಿತ್ತು. ೨೦೦೧ರಲ್ಲಿ

೧೧ನೇ ಪುಟಕ್ಕೆ

ಡಾ|| ಬಿ. ಎಸ್. ಶೈಲಜಾ

# ಸಾಹಿತ್ಯ ಸಂವೇದನೆ ಕಲಾವಿದರ ನಿಲುವೇನು?

ರಾಜಶೇಖರ ರಾಮಣ್ಣ ಬಿಲ್ವಪತ್ರಿ

ಕರ್ನಾಟಕದಲ್ಲಿ ಆಧುನಿಕ ಸಾಹಿತ್ಯವು ಎಷ್ಟು ತೀವ್ರಗತಿಯ ಬೆಳವಣಿಗೆ ಮತ್ತು ಬದಲಾವಣೆಗಳನ್ನು ಮೈಗೂಡಿಸಿಕೊಂಡು ಬೆಳೆಯಿತೋ ಅಷ್ಟೇ ತೀವ್ರಗತಿಯಲ್ಲಿ ಕಲೆ ಬೆಳೆದುಬರಲಿಲ್ಲ. ಅಲ್ಲದೆ ಸೈದ್ಧಾಂತಿಕವಾಗಿಯೂ ನಮ್ಮ ಕಲೆ ಮತ್ತು ಸಾಹಿತ್ಯಗಳ ಸಮಾನಾಂತರ ಬೆಳವಣಿಗೆಯನ್ನು ಕಾಣಲಾಗುವುದಿಲ್ಲ. ಎಂದರೆ, ಆಧುನಿಕ ಸಾಹಿತ್ಯದ ಪ್ರಮುಖ ಘಟ್ಟಗಳು ಪಡೆದುಕೊಂಡ ಪ್ರೇರಣೆಗಳೂ, ಸೈದ್ಧಾಂತಿಕ ಮೂಲವೂ ಅದೇ ಅರ್ಥ, ಹಿನ್ನೆಲೆಯಲ್ಲಿ ಕಲೆಯಲ್ಲಿ ಪ್ರಮುಖವೆಂದು ಗುರುತಿಸಲಾಗುವ ಸಂದರ್ಭಗಳಲ್ಲಿ ಕಂಡುಬರುವುದಿಲ್ಲ. ಇದರರ್ಥ ಕಲೆಯು ಸಾಹಿತ್ಯವನ್ನೇ ಅನುಸರಿಸಬೇಕಿತ್ತೆಂದು, ಅದರ ನೆರಳಲ್ಲೇ ಬೆಳೆಯಬೇಕಿತ್ತೆಂದೂ ಅಲ್ಲ. ಇವೆರಡರ ಬೆಳವಣಿಗೆಯ ರೀತಿಯನ್ನೂ, ಸ್ವರೂಪವನ್ನೂ ನಿರ್ಧರಿಸಿದ ಅಂಶಗಳೆಂದರೆ ಇವುಗಳ ಹುಟ್ಟಿನ ಹಿನ್ನೆಲೆಗಳು ಮತ್ತು ಅಗತ್ಯಗಳೇ. ಅಲ್ಲದೆ ಅವರವರ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಾಹಿತಿ ಮತ್ತು ಕಲಾವಿದರ ಧೋರಣೆಯಲ್ಲಿನ ವ್ಯತ್ಯಾಸವೂ ಕಲೆ ಮತ್ತು ಸಾಹಿತ್ಯಗಳ ಮಧ್ಯೆ ವಿಷಮತೆಯನ್ನು ಸೃಷ್ಟಿಸಿದೆ. ಆದ್ದರಿಂದ ಕರ್ನಾಟಕದ ಆಧುನಿಕ ಕಲೆಯನ್ನು, ಅದರ ಪ್ರಗತಿಯನ್ನು ಅದೇ ಕಾಲದ ಸಾಹಿತ್ಯದ ಬೆಳವಣಿಗೆಯೊಂದಿಗೆ ತುಲನೆ ಮಾಡಿ ಸಾಮಾಜಿಕ ಹಿನ್ನೆಲೆಯಿಂದ ಪರಿಶೀಲಿಸುವಲ್ಲಿ ಸಾಹಿತಿ, ಕಲಾವಿದರ ಧೋರಣೆಗಳೂ, ಅಭಿರುಚಿ-ಆಸಕ್ತಿಗಳೂ ಮತ್ತು ಮುಖ್ಯವಾಗಿ ಸಾಮಾಜಿಕ ಪ್ರಜ್ಞೆ ಮತ್ತು ಕಾಳಜಿಯ ತೀವ್ರತೆ ಏನಾಗಿದ್ದವೆಂಬ ಅಂಶ ಪ್ರಮುಖವಾಗುತ್ತದೆ.

ಒಂದೇ ಸಾಮಾಜಿಕ ಹಿನ್ನೆಲೆ ಮತ್ತು ಪರಿಸರದಲ್ಲಿ ಕನ್ನಡ ಸಾಹಿತ್ಯ ಮತ್ತು ಕಲೆ ಬೆಳೆದು ಬಂದಿದ್ದರೂ ಅವುಗಳ ಹುಟ್ಟು-ಬೆಳವಣಿಗೆಗಳ ಸೈದ್ಧಾಂತಿಕ ಮೂಲ ಮತ್ತು ಪ್ರೇರಣೆಗಳು ಒಂದೇ ಆಗಿರಲಿಲ್ಲ. ಹಾಗೆಯೇ ಅವುಗಳ ಗುರಿಯೂ ಒಂದೇ ಆಗಿರಲಿಲ್ಲ. ಕನ್ನಡ ಸಾಹಿತ್ಯದ ಕ್ರಾಂತಿಕಾರೀ ಬೆಳವಣಿಗೆಯಲ್ಲಿ ಭೂತ-ವರ್ತಮಾನಗಳ ವಾಸ್ತವದ ಅರಿವೂ, ಸಾಮಾಜಿಕ ಕಳಕಳಿ-ಜನಪರ ನಿಲುವೂ ಮತ್ತು ಸ್ಥಾಪಿತ ವ್ಯವಸ್ಥೆಯ ಬದಲಾವಣೆಯ ತೀವ್ರತೆಯೂ ಪ್ರಮುಖವಾಗಿದ್ದವು. ಇದರ ಫಲವಾಗಿ ನವೋದಯ, ಪ್ರಗತಿಶೀಲ, ನವ್ಯ ಮತ್ತು ಮುಖ್ಯವಾಗಿ ಬಂಡಾಯ ಮತ್ತು ದಲಿತದಂತಹ ಪ್ರಮುಖ ಚಳುವಳಿಗಳನ್ನು ನಾವು ನೋಡುತ್ತೇವೆ. ಆದರೆ ಕಲೆಯಲ್ಲಿ ಈ ಬಗೆಯ ಚಳುವಳಿಗಳಿರಲಿ, ಅವುಗಳ ಮೂಲ ಕಲ್ಪನೆಯೂ ಕಂಡುಬರುವುದಿಲ್ಲ. ಈ ಬಗೆಯ ಹಣೆಪಟ್ಟಿಗಳನ್ನು ಹೊತ್ತು ಇಂತಹ ಪರಿಕಲ್ಪನೆಗಳಡಿಯಲ್ಲೇ ಕಲೆ ಸಾಗಬೇಕಿತ್ತೆಂಬ ಆಗ್ರಹವಿದಲ್ಲದಿದ್ದರೂ ಅದೇ ಸಾಮಾಜಿಕ ವ್ಯವಸ್ಥೆ, ಹಿನ್ನೆಲೆ, ಪರಿಸರದಿಂದ ಬಂದ ಕಲಾವಿದರಿಗೆ ಅದರ ಪ್ರಜ್ಞೆಯಾದರೂ ಹೇಗೆ ಉಂಟಾಗಲಿಲ್ಲ ಎಂಬ ಪ್ರಶ್ನೆಯುಂಟಾಗದಿರದು.

ಕಲೆಯಲ್ಲಿಯೂ ನವೋದಯ, ನವ್ಯ, ನವ್ಯೋತ್ತರವೆಂಬ ಘಟ್ಟಗಳಿವೆಯಾದರೂ ಸಾಹಿತ್ಯದೊಂದಿಗೆ ಇವುಗಳ ನೆಂಟು ಕೇವಲ ಹೆಸರಿನಿಂದಿದೆಯೇ ಹೊರತು ಸೈದ್ಧಾಂತಿಕತೆಯಿಂದಲ್ಲ. ಅವುಗಳನ್ನು ಹಾಗೆ ಕರೆದಿರುವುದೂ ಕೇವಲ ಕಾಲಕಾಲಕ್ಕೆ ಕಲೆ ಪಡೆದುಕೊಂಡ ರೂಪದ ಭಿನ್ನ ಆಯಾಮಗಳ ಮತ್ತು ಅಭಿವ್ಯಕ್ತಿಯ ಭಿನ್ನ ಮಜಲುಗಳ ಕಾರಣದಿಂದಾಗಿ ಮಾತ್ರ.

ಕನ್ನಡ ಸಾಹಿತ್ಯದ ಈ ಉಜ್ವಲ ಸಂದರ್ಭದಲ್ಲಿಯೇ ಕನ್ನಡದ ಕಲಾವಿದನಿಗೆ (ಇದೇ ಹೊತ್ತಲ್ಲಿ ಭಾರತೀಯ ಕಲಾವಿದನಿಗೂ) ಪ್ರಸ್ತುತ ಬದುಕಿನ ವಾಸ್ತವ ಕಾಣದಿರುವುದಕ್ಕೂ, ಸಾಮಾಜಿಕ ಸನ್ನಿವೇಶಗಳಿಗೆ, ಅನಿಷ್ಟಗಳಿಗೆ ಅವನ ಹೃದಯ ಮಿಡಿಯದಿರುವುದಕ್ಕೂ ಕಾರಣವೆಂದರೆ ಕಲೆಗಾಗಿ ಕಲೆ ಎಂಬ ಪೂರ್ವಗ್ರಹ ಪೀಡೆ ಹತ್ತಿಕೊಂಡದ್ದೇ ಆಗಿದೆ. ಮತ್ತು ಬದುಕಿನ ಕ್ರೂರ ವಾಸ್ತವವನ್ನು ನೋಡಬಯಸದ ಸ್ಥಾಪಿತ ವ್ಯವಸ್ಥೆಯ ರಕ್ಷಣೆ, ಜನಪರವಲ್ಲದ ನಿಲುವು, ಸ್ವಾರ್ಥ – ಇವುಗಳನ್ನೇ ಗುರಿಯಾಗಿಸಿಕೊಂಡ ಕಲಾವಿದ ಉಚ್ಚವರ್ಗದ ಪೋಷಣೆಯಲ್ಲಿ ಅದರ ಅಗತ್ಯಗಳನ್ನು ಪೂರೈಸುವಲ್ಲಿ ಆಸ್ಥೆ ಹೊಂದಿ ವಣಕನಂತೆ ವರ್ತಿಸುವಂತಹ ಈ ಸಂದರ್ಭದಲ್ಲಿ ಸಾಹಿತ್ಯಕ ಚಳುವಳಿಗಳಂತಹ ಮಹತ್ವದ ಚಳುವಳಿಗಳನ್ನು ಕಲೆಯಲ್ಲಿ ನಿರೀಕ್ಷಿಸುವುದು, ಇನ್ನೂ ವಿಶಿಷ್ಟವಾಗಿ ಜನಪರತೆಯೇ ಇಲ್ಲದಲ್ಲಿ ದಲಿತ ಪ್ರಜ್ಞೆಯನ್ನು ಅರಸುವುದೆಂದರೆ ಕಲೆಯ ಕುರಿತಾಡುವ ವ್ಯಂಗ್ಯವೇ !

**ಜನಪರತೆಯ ಹುಡುಕಾಟ**

ಕರ್ನಾಟಕದ ಆಧುನಿಕ ಕಲಾ ಸಂದರ್ಭದಲ್ಲಿ ಕಳೆದ ಶತಮಾನದ ಬಹುಭಾಗವೆಲ್ಲ ಕಲೆ ಸೌಂದರ್ಯದ ಆರಾಧನೆಯಾಗಿಯೇ ಕಳೆದಿದೆ. ಜನರ ಮುಖಚಿತ್ರಗಳನ್ನೂ, ನಿಸರ್ಗ ಚಿತ್ರವೆಂದು ಕಲ್ಲು, ಮಣ್ಣು, ಮರವನ್ನೂ, ವಿಕೃತ ಕಾಮನೆಗಳನ್ನೂ ಕೊನೆ ಕೊನೆಗೆ ರೂಪವೇ ಮೌಲ್ಯವೆಂದು, ಅದ್ಭುತ ಪರಿಕಲ್ಪನೆಯೆಂದು ಬದುಕಿನಿಂದ ದೂರವೇ ಉಳಿದ ಕಲ್ಪನೆಗಳನ್ನು, ಅನರ್ಥಗಳನ್ನು ಸೃಷ್ಟಿಸುವುದೇ ಕಲೆಯೆಂಬ ಭ್ರಮೆ ವಿಜೃಂಭಿಸಿತು. ಆದರೆ ಕಲೆ ಈ ರೀತಿ ನಮ್ಮ ಸಮಾಜದ ಚಲನಶೀಲ ಬದುಕಿಗೆ, ಅದರ ನಗ್ನ ವಾಸ್ತವ-ಕುರೂಪಗಳಿಗೆ, ಜನರ ಆಶೋತ್ತರಗಳಿಗೆ ಬೆನ್ನು ಮಾಡಿದ ಸಂದರ್ಭದಲ್ಲಿಯೇ ಕೆಲವರಾದರೂ ಪ್ರಜ್ಞಾವಂತ ಕಲಾವಿದರು ಸಮಕಾಲೀನ ಸಾಮಾಜಿಕ ವಾಸ್ತವಕ್ಕೆ ಸ್ಪಂದಿಸಿ ತಮ್ಮ ಜನಪರ ನಿಲುವುಗಳನ್ನು, ಕಾಳಜಿಗಳನ್ನು ಪ್ರಕಟಪಡಿಸಿದ್ದಾರೆ. ಅಂಥವರಲ್ಲಿ, ಆರ್. ಎಸ್. ನಾಯ್ಡು, ಆರ್. ಎಂ. ಹಡಪದ್, ಕೆ. ಟಿ. ಶಿವಪ್ರಸಾದ್, ಸಿ. ಚಂದ್ರಶೇಖರ, ಯು. ರಮೇಶ್ ರಾವ್, ಜಾನ್ ದೇವರಾಜ್ ಪ್ರಮುಖರು. ಪ್ರಗತಿಶೀಲರಿಂದೀಚಿನ ಎಲ್ಲ ಚಳುವಳಿಯ ಸಾಹಿತಿಗಳಂತೆಯೇ ಕಲಾವಿದರಿಗೂ ಎಡಪಂಥೀಯ ವಿಚಾರಗಳೇ ಪ್ರಮುಖ ಪ್ರೇರಣೆಗಳಾಗಿವೆ.

ಆದರೆ ಸಾಹಿತಿಗಳಲ್ಲಿದ್ದ ತೀವ್ರ ತುಡಿತ, ಕ್ರಾಂತಿಕಾರೀ ಮನೋಭಾವ, ವ್ಯವಸ್ಥೆಯ ಪರಿವರ್ತನೆ ಬಗೆಗಿನ ತೀವ್ರ ಹಂಬಲ, ಇವು ಯಾವುವೂ ಈ ಕಲಾವಿದರಲ್ಲಿ ಅಷ್ಟು ಗಾಢವಾಗಿ ಕಾಣದೆ ಘಟನೆಯ ಮೂಕ ಸಾಕ್ಷಿಗಳೆಂಬಂತೆ ಸೌಮ್ಯವಾಗಿ ವ್ಯಕ್ತವಾಗಿವೆ. ನೇರ ಜೀವನಾನುಭವ ಮತ್ತು ಅಭಿವ್ಯಕ್ತಿಯ ಉತ್ಕಟತೆಯಿಂದಲ್ಲದೆ ಕೇವಲ ಸಿದ್ಧಾಂತಕ್ಕಾಗಿಯೇ ಕೃತಿ ರಚಿಸಿದರೆಂದೆನಿಸುವ, ತೀವ್ರ ಸಂವೇದನೆಯಿರದ ಇಲ್ಲಿಯ ಕೆಲವರ ಕೃತಿಗಳಲ್ಲಿ ನೆವಮಾತ್ರವಾಗಿ ಸೌಂದರ್ಯ ದೃಷ್ಟಿಯೇ ಪ್ರಧಾನವಾಗುವುದರಿಂದ ವಸ್ತು ಎಷ್ಟೇ ಪ್ರಮುಖವಾಗಿದ್ದರೂ ಜನರ ಮೇಲೆ ಬೀರಬಹುದಾದ ಪ್ರಭಾವ ಪರಿಣಾಮಗಳನ್ನು ಕಳೆದುಕೊಂಡು ಕೇವಲ ಆಸ್ವಾದನಾ ರೂಪವಾಗಿ ಪರಿಣಮಿಸಿದೆ. ಈ ಕಲಾವಿದರು ಜನಪರ ಸಂವೇದನೆಗಳನ್ನು ಪ್ರಕಟಿಸಿದ್ದಾರಾದರೂ ಅವನ್ನು ಸಾಹಿತ್ಯದ ಬಂಡಾಯ



*'ಏ ದಲಿತನಾರು ?' (ಕಲಾವಿದ- ಪಿ. ಬಿ. ಹರಸೂರ್)*



*'ರುದ್ರನಾದ' (ಕಲಾವಿದ - ಪಿ. ಬಿ. ಹರಸೂರ್)*

ಅಥವಾ ದಲಿತ ಪ್ರಜ್ಞೆಗಳಿಗೆ ಹೋಲಿಸಲಾಗದು. ಒಟ್ಟಾರೆ, ನಮ್ಮ ಆಧುನಿಕ ಕಲೆಯ ಸಂದರ್ಭದಲ್ಲಿ ಜನಪರ ದೃಷ್ಟಿಯೇ ಗೌಣವಾಗಿರುವಾಗ 'ದಲಿತ'ದಂತಹ ವಿಶಿಷ್ಟ ಪರಿಕಲ್ಪನೆಯನ್ನು, ಸಂವೇದನೆಯನ್ನು ಕೇವಲ ಒಂದಿಬ್ಬರು ಕಲಾವಿದರಲ್ಲಿ ಮಾತ್ರ ಕಾಣಬಹುದು. ಆ ಕಲಾವಿದರನ್ನು ಕುರಿತು ಚರ್ಚಿಸುವ ಮುನ್ನ ಕೆಳಗಣ ವಿಷಯವನ್ನು ಸ್ಪಷ್ಟಪಡಿಸಿಕೊಳ್ಳುವುದು ಅನಿವಾರ್ಯವೆನಿಸುತ್ತದೆ.

**'ದಲಿತ'– ಅರ್ಥ-ವ್ಯಾಪ್ತಿಯ ಗೊಂದಲ**

ದಲಿತ ಸಾಹಿತ್ಯದ ಸಂದರ್ಭದಲ್ಲಿ 'ದಲಿತ' ಎಂಬ ಪದವು ತುಂಬ ಚರ್ಚೆಗೊಳಗಾಗಿದೆ. ಅದರ ಅರ್ಥ ಮತ್ತು ವ್ಯಾಪ್ತಿಯನ್ನು ಕುರಿತು ಹಲವಾರು ಚರ್ಚೆಗಳು ನಡೆದು, ಅಂಬೇಡ್ಕರ್ ವಾದ ಆಧಾರಿತವಾದ, ಸಮಾಜದ ಅತ್ಯಂತ ಕೆಳಸ್ತರದ ಜನಸಮೂಹ ಎಂದರೆ ಅಸ್ಪೃಶ್ಯರು ಮಾತ್ರ ದಲಿತರೆಂದು ಮತ್ತು ಇಂತಹ ದಲಿತರು ಬರೆದ ಜನಪರ ಸಾಹಿತ್ಯ ಮಾತ್ರ ದಲಿತ ಸಾಹಿತ್ಯವೆಂಬ ನಿರ್ಣಯಕ್ಕೆ ಬರಲಾಗಿದೆ. (ವಿವರಕ್ಕೆ ಡಾ॥ ಪುರುಷೋತ್ತಮ ಬಿಳಿಮಲೆಯವರ 'ಬಂಡಾಯ-ದಲಿತ ಸಾಹಿತ್ಯ'ದ ಎರಡನೇ ಅಧ್ಯಾಯ ನೋಡಿ. ಸಾಹಿತ್ಯ ಅಕಾಡೆಮಿ, ಮೂರನೇ ಮುದ್ರಣ ೧೯೯೯).

ಈ ಕುರಿತ ಮೂಲ ನಿಲುವುಗಳನ್ನೇ ಪ್ರಸ್ತಾಪಿಸುವುದಾದರೆ, ''ಕೃತಿಯೊಂದರ ಅನುಭವಪ್ರಾಮಾಣ್ಯದ ಆಧಾರದಿಂದ, ಹುಟ್ಟಿನಿಂದ ದಲಿತರಾದವರು ಸೃಷ್ಟಿಸಿದ ಪ್ರಗತಿಪರ ಸಾಹಿತ್ಯವನ್ನು ದಲಿತ ಸಾಹಿತ್ಯವೆನ್ನಬಹುದೆ''ನ್ನುವ ಬರಗೂರು ರಾಮಚಂದ್ರಪ್ಪನವರ ಮಾತನ್ನೂ (ಬಂಡಾಯ-ದಲಿತ ಸಾಹಿತ್ಯ, ಪು. ೨೦ರಲ್ಲಿ ಉದ್ಧೃತ) ಮತ್ತು ''ಅಸ್ಪೃಶ್ಯರು ಜನಪರ ಸಾಹಿತ್ಯವನ್ನು ಸೃಷ್ಟಿಸಿದಾಗ ಮಾತ್ರ ಅದು ದಲಿತ ಸಾಹಿತ್ಯವಾಗುತ್ತದೆ''ನ್ನುವ ಪುರುಷೋತ್ತಮ ಬಿಳಿಮಲೆಯವರ ಮಾತನ್ನೂ (ಬಂಡಾಯ-ದಲಿತ ಸಾಹಿತ್ಯ, ಪು. ೧೭) ಗಮನಿಸಬಹುದು. ಅಲ್ಲದೆ ''ದಲಿತರ ಬಗೆಗೆ ಇತರರು ಬರೆದುದು ಅಥವಾ ದಲಿತರೇ ಸಾರ್ವಜನಿಕ ವಿಷಯಗಳ ಬಗ್ಗೆ ಬರೆದುದು ದಲಿತ ಸಾಹಿತ್ಯವಲ್ಲ''ವೆಂಬ ರಹಮತ್ ತರೀಕೆರೆಯವರ ಮಾತು (ಬ-ದ ಸಾಹಿತ್ಯ ಪು. ೨೦ರಲ್ಲಿ ಉದ್ಧೃತ) ಮತ್ತು ''ಉಚ್ಚ ವರ್ಗದ ಆದರ್ಶಗಳನ್ನು ಪಾಲಿಸಬಯಸುವ, ಇಲ್ಲವೆ ಮೀಸಲಾತಿಯೇ ಮೊದಲಾದ ಸಾಧನಗಳಿಂದ ಉಚ್ಚವರ್ಗಕ್ಕೆ ಏರಿದ ದಲಿತರು ತಮ್ಮ ಬೂರ್ಜ್ವಾ ಜೀವನ ಶೈಲಿಯನ್ನು ರಕ್ಷಿಸಿಕೊಳ್ಳಲು ಬರೆದ ಸಾಹಿತ್ಯವನ್ನು ದಲಿತ ಸಾಹಿತ್ಯವೆಂದು ಕರೆಯಲಾಗದೆ''ಂಬ ಬಿಳಿಮಲೆಯವರ ಮಾತೂ (ಬ-ದ ಸಾಹಿತ್ಯ ಪು. ೧೬) ಬಹಳ ಮುಖ್ಯವಾದವುಗಳೇ.

ದಲಿತ ಪ್ರಜ್ಞೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಕಲೆಯನ್ನು ಅವಲೋಕಿಸುವಲ್ಲಿಯೂ ಈ ಮೇಲಿನ ನಿಲುವುಗಳನ್ನೇ ಮಾನದಂಡವಾಗಿಟ್ಟುಕೊಳ್ಳುವುದು ಅವುಗಳ ತಾತ್ವಿಕತೆಯ ದೃಷ್ಟಿಯಿಂದಾಗಿ ತುಂಬ ಅನಿವಾರ್ಯವೇ ಆಗಿದೆ. ಅವುಗಳ ಪ್ರಕಾರ 'ದಲಿತ'ದ ಅಡಿಯಲ್ಲಿ ಕಾಣಬರುವ ಕಲಾವಿದರೆಂದರೆ ಸಿ. ಚಂದ್ರಶೇಖರ ಮತ್ತು ಪಿ. ಬಿ. ಹರಸೂರ್ ಮಾತ್ರ. ಇನ್ನುಳಿದಂತೆ ಹಲವಾರು ಜನ ದಲಿತ ಕಲಾವಿದರಿದ್ದರೂ ಅವರ ಅಭಿವ್ಯಕ್ತಿ ಈ ಮೇಲಿನ ಅರ್ಥವ್ಯಾಪ್ತಿಯಿಂದ ಹೊರಗೇ ಉಳಿದಿರುವುದರಿಂದ ಚರ್ಚೆಗೆ ಇಲ್ಲಿ ಅಪ್ರಸ್ತುತ.

**ದಲಿತ ಸಂವೇದನೆ**

ನಮ್ಮ ಆಧುನಿಕ ಕಲಾ ಸಂದರ್ಭದಲ್ಲಿ ಸಮಾಜವಾದೀ ಅಥವಾ ಜನಪರ ಆಶಯಗಳಿಗೆ ಅಭಿವ್ಯಕ್ತಿ ನೀಡಿದ ಕೆಲವೇ ಜನ ಪ್ರಮುಖ ಕಲಾವಿದರಲ್ಲಿ ಸಿ. ಚಂದ್ರಶೇಖರ ಕೂಡ ಒಬ್ಬರು. ಇನ್ನೂ ವಿಶಿಷ್ಟವಾಗಿ ದಲಿತ ಸಂವೇದನೆಯ ದೃಷ್ಟಿಯಿಂದ ಸಿ. ಚಂದ್ರಶೇಖರ ಕರ್ನಾಟಕದ ಕಲೆಯ ಸಂದರ್ಭದಲ್ಲಿ ಸ್ಥಾಯಿಯಾಗಿ ನಿಲ್ಲುವ ಕಲಾವಿದ.

ಚಂದ್ರಶೇಖರ ಅವರ ಯಾವುದೇ ಮಾಧ್ಯಮದ ಯಾವುದೇ ಶೈಲಿಯ ಕೃತಿಯೂ ಶೋಷಿತರ ತುಳಿತಕ್ಕೊಳಗಾದವರ ಚಿತ್ರಣವನ್ನು ಕೊಡುತ್ತ ಮಾನವ ಸಮಾಜದ ಅಮಾನವೀಯ ನಡವಳಿಕೆಗಳ, ಕ್ರೂರ ವ್ಯವಸ್ಥೆಯ ಬರ್ಬರತೆಯನ್ನು ತೆರೆದಿಡುತ್ತದೆ. ಶೋಷಿತರ ನೋವನ್ನೂ, ದಾಸ್ಯದ ನಿರ್ಬಂಧಿತ ಜೀವನವನ್ನೂ, ಗಾಢ ಖಿನ್ನತೆಯನ್ನೂ ಸೌಮ್ಯವಾದ ಅಭಿವ್ಯಕ್ತಿ ಹಿಡಿದಿಡುತ್ತದೆ.

ಕೃತಿಯಲ್ಲಿ ಒಂಟಿಯಾಗಿ ಕಾಣಿಸಿಕೊಳ್ಳುವ, ಬಾಯಿಗೆ ಪಟ್ಟಿ ಹಾಕಿದ ಆಕೃತಿ ತನ್ನ ಆಶೋತ್ತರಗಳಿಗೆ, ಅನಿಸಿಕೆಗಳಿಗೆ ಅಭಿವ್ಯಕ್ತಿಯನ್ನೇ ನೀಡಲಾಗದಂತಹ ಇಡೀ ಒಂದು ವರ್ಗದ ಸ್ಥಿತಿಯನ್ನೇ ಧ್ವನಿ ಗಟ್ಟಿಯಾಗಿ ಪ್ರಕಟಿಸುತ್ತದೆ.

ಮೂಗು ಕಟ್ಟಿದ, ಕೈಯಲ್ಲಿ ಹೂ ಹಿಡಿದ ಮನುಷ್ಯ ಇಡೀ ಒಂದು ಜನವರ್ಗ ಐಂದ್ರಿಕ ಭೋಗದಿಂದ ಮತ್ತು ಮುಖ್ಯವಾಗಿ ಸುಖ-ಸಂತೋಷ ಹಾಗೂ ಜೀವನ ಸೌಂದರ್ಯದಿಂದ ವಂಚಿತವಾದದ್ದನ್ನೇ ಪ್ರತಿನಿಧಿಸುತ್ತಾನೆ. ಸಾಮಾನ್ಯವಾಗಿ ಎಲ್ಲ ಕೃತಿಗಳಲ್ಲೂ ಅವನತವಾಗಿಯೇ ಇರುವ ತಲೆ ಅವನ ದೈನ್ಯತೆಯನ್ನು, ಆತ್ಮಾಭಿಮಾನ ನಷ್ಟಗೊಂಡುದನ್ನೂ ಸಂಕೇತಿಸುತ್ತದೆ. ಒಟ್ಟಾರೆ ಚಂದ್ರಶೇಖರ ಅವರ ಇಂಥ ಕೃತಿಗಳು ದಲಿತರ ಶೋಷಿತರ ಜೀವನದ ಮಾರ್ಮಿಕ ನೋಟಗಳನ್ನು ಕೊಡುತ್ತವೆ. ಈ ಕೃತಿಗಳಲ್ಲೆಲ್ಲ ನೋವಿನ ಧ್ವನಿಯೇ ಪ್ರಧಾನವಾಗಿದ್ದು, ಬಂಡೇಳುವ, ತಿರುಗಿ ಬೀಳುವ ಕೆಚ್ಚು, ಪ್ರವೃತ್ತಿಗಳು ಕಂಡುಬರುವುದಿಲ್ಲ. ಬದಲಾಗಿ ನಿರಂತರ ತುಳಿತಕ್ಕೆ ಸಿಕ್ಕು ಮೇಲೇಳಲಾಗದ ದೌರ್ಬಲ್ಯದ ಕಟು ವಾಸ್ತವವೇ ಸಹಜವಾಗಿ ಪ್ರಕಟವಾಗಿದೆ.

ರೂಪಕ ವಿಧಾನ (Allegory)ದಿಂದ ಅಭಿವ್ಯಕ್ತವಾದ ಇವರ ಮತ್ತೊಂದು ಪ್ರಮುಖ ಕೃತಿಯಲ್ಲಿ ಅನ್ನ ಮತ್ತು ಜ್ಞಾನದ ಕುರಿತ ವಸ್ತುವಿದೆ. (ಈ ಕೃತಿಯಲ್ಲಿ ನೆಲದ ಅಂಚೆಂಬಂತೆ ಕಾಣುವ ಬೆಟ್ಟದ ಇಳುಕಲಿನ ವಿಶಾಲ ಬಯಲೊಂದರಲ್ಲಿ ಇಟ್ಟಂತೆ ಚಿತ್ರಿಸಿದ ಎರಡು ಬೃಹತ್ ಗ್ರಂಥಗಳ ಮೇಲೆ ದೊಡ್ಡದಾದ ಆಹಾರ ಬೇಯಿಸುವ ಪಾತ್ರೆಯನ್ನು ಚಿತ್ರಿಸಲಾಗಿದೆ. ಪಾತ್ರೆಯ ಮೇಲೆ ಮತ್ತು ಸುತ್ತಮುತ್ತ ಕೆಲವು ಕಾಗೆಗಳು ಕುಳಿತು ಕೂಗುತ್ತಿವೆ. 'ಕಾಗೆಯೊಂದಗುಳ ಕಂಡರೆ ಕೂಗಿ ಕರೆಯದೇ ತನ್ನ ಬಳಗವ' ಎಂಬ



*'ಸ್ಥಿರ ಚಿತ್ರ' (ಕಲಾವಿದ- ಸಿ. ಚಂದ್ರಶೇಖರ)*

ಬಸವಣ್ಣನವರ ವಚನದ ದೃಶ್ಯ ರೂಪದಂತಿರುವ ಈ ಕೃತಿ ಭಾರತದ ಪ್ರಸ್ತುತ ಅಗತ್ಯಗಳೇನೆಂಬುದನ್ನೇ ಕಲಾತ್ಮಕವಾಗಿ ಒತ್ತಿಹೇಳುತ್ತದೆ. ಭಾರತ ಸ್ವತಂತ್ರವಾದ ಮೇಲೂ ನಿವಾರಣೆಯಾಗದ ಅನ್ನ ಮತ್ತು ಅವಿದ್ಯೆಯ ಸಮಸ್ಯೆಗಳೇ ಕೃತಿಯ ಮೂಲ ಪ್ರೇರಣೆಯಾದಂತಿವೆ. ಈ ಹಿನ್ನೆಲೆಯಲ್ಲಿ ಬಡ ಭಾರತಕ್ಕೆ ಚೈತನ್ಯ ತುಂಬಲು, ಅಶಕ್ತರನ್ನು ಶಕ್ತರನ್ನಾಗಿ ಮಾಡಲು ಬೇಕಾದ ಅತ್ಯಂತ ಪ್ರಾಥಮಿಕ ಅಗತ್ಯಗಳಾದ ಅನ್ನ ಮತ್ತು ಅರಿವುಗಳೇ ಈ ಕೃತಿಯ ಮೂಲಧಾತುವಾಗಿ, ಅದು ಎಲ್ಲರಿಗೂ ಸಮಾನವಾಗಿ ಸಿಗಬೇಕೆಂಬ ಅಂಶವನ್ನೇ ಕಾಗೆಗಳ ಹಂಚಿಕೊಂಡು ತಿನ್ನುವ ಗುಣದಿಂದ ವ್ಯಕ್ತಪಡಿಸಲಾಗಿದೆ. ಕಟ್ಟು ಹರಿದ ಪುಸ್ತಕಕ್ಕೆ ಮತ್ತು ಸೀಳಿಕೊಂಡಿರುವ ಪಾತ್ರೆಗೆ ಹಾಕಿರುವ ಹೊಲಿಗೆ, ಇರುವುದನ್ನು ಕಾಯ್ದುಕೊಳ್ಳುವುದಕ್ಕೆ ಸೂಚನೆಯಾಗಿದೆ. ನೆಲದ ಹಸಿರು ಮತ್ತು ಹಿನ್ನೆಲೆಯ ಕೆಂಪಡರಿದ ನೀಲಾಕಾಶ ಆಶಾವಾದಕ್ಕೆ ಪೂರಕವಾಗಿದೆ.

ಶೋಷಿತರ, ನಿರ್ಬಂಧಿತ ಬದುಕನ್ನೂ, ನೋವನ್ನೂ ಸಮಾನತೆಯ ಸುಂದರ ಬದುಕಿನ ಕನಸನ್ನೂ, ಆಶಾವಾದವನ್ನೂ, ಕಲಾಕೃತಿಗಳ ಮೂಲಕ ಪ್ರಕಟಿಸುವ ಚಂದ್ರಶೇಖರ ತಮ್ಮ 'ಹೊಲಿಗೆ' ಸರಣಿಯ (stitch series) ಕೃತಿಗಳಲ್ಲಿ ಹೊಲಿಗೆಯನ್ನು ಸಾಂಕೇತಿಕವಾಗಿ ಬಳಸಿಕೊಂಡಿದ್ದಾರೆ. ಮನುಷ್ಯ ಮನುಷ್ಯನ ನಡುವಿನ ಯಾವುದೇ ಬಗೆಯ ಅಂತರವನ್ನು ಕಳೆದು ಮನ-ಮನಗಳನ್ನು ಬೆಸೆಯುವ ಕಲ್ಪನೆ ಕೊಡುವ ಈ ಕೃತಿ ಸರಣಿ ಆದರ್ಶವಾದವನ್ನು ನೆಮ್ಮಿಕೊಂಡಿದೆ.

ದಲಿತ ಸಂವೇದನೆಯ ದೃಷ್ಟಿಯಿಂದ ನೋಡುವುದಾದರೆ ನಮಗೆ ಸಿಗುವುದು ಇನ್ನೊಬ್ಬ ಮಹತ್ವದ ಕಲಾವಿದ ಪಿ. ಬಿ. ಹರಸೂರ್. ಕರ್ನಾಟಕದ ಕಲಾ ಸಂದರ್ಭದಲ್ಲಿಯೇ ಇಲ್ಲಿಯವರೆಗೆ ಕಂಡರಿಯದಂತಹ ಬದುಕಿನ ನೇರ ಅನುಭವಗಳ ದಿಟ್ಟ ಅಭಿವ್ಯಕ್ತಿಯನ್ನು ಇವರ ಕೃತಿಗಳು ಹಿಡಿದಿಟ್ಟಿವೆ. ಸಮಾಜದ ಅತ್ಯಂತ ಕೆಳಸ್ತರದ ಜೀವನಾನುಭವಗಳನ್ನು ಉಡಿಯಲ್ಲಿ ಕಟ್ಟಿಕೊಂಡೇ ಬೆಳೆದ ಹರಸೂರರ ಬಹುತೇಕ ಕೃತಿಗಳ ಉಸಿರೇ ದಲಿತ ಪ್ರಜ್ಞೆ.



ದಲಿತರ ಬದುಕಿನ ಬಹುಮುಖೀ ಅನುಭವವನ್ನು ಕೊಡುವ ಹರಸೂರರ ಕೃತಿಗಳು ಶೋಷಣೆ, ಕ್ರೌರ್ಯ, ವೃತ್ತಿ, ಕೆಳವರ್ಗಗಳ ಆಚರಣೆ-ನಂಬಿಕೆಗಳಂತಹ ವಸ್ತುವಿನ ಕಸುವನ್ನು ತುಂಬಿಕೊಂಡು ಬೆಳೆದಿವೆ. ಕೆಚ್ಚು, ಪ್ರತಿರೋಧಗಳು ಎಲ್ಲೂ ನೇರವಾಗಿ ಮತ್ತು ಪ್ರಧಾನವಾಗಿ ಪ್ರಕಟವಾಗದಿದ್ದರೂ ಕೆಲವೊಂದು ಕೃತಿಗಳಲ್ಲಿನ ಅಂತರ್ಗತ ಶಕ್ತಿಯೇ ಅದಾಗಿದೆ; (ಅಥವಾ ಬೇರೊಂದು ಪ್ರಧಾನ ರೂಪ-ಸನ್ನಿವೇಶಗಳನ್ನು ಮುಂದೆ ಮಾಡಿ ಹಿನ್ನೆಲೆಯಲ್ಲಿ ಅದು ಪ್ರಕಟವಾಗಿದೆ. ವೈವಿಧ್ಯಮಯ ವಸ್ತು, ಸಂಕೀರ್ಣ ಭಾವಗಳೂ-ವಿಚಾರಗಳೂ, ಅವುಗಳ ಅರ್ಥಪೂರ್ಣ ಮತ್ತು ಪರಿಣಾಮಕಾರೀ ನಿರೂಪಣೆ ಹರಸೂರರ ಕಲಾವಂತಿಕೆಗೆ ಅನನ್ಯತೆಯನ್ನು ನೀಡಿವೆ).

ಯಾವುದೇ ಕೆಳವರ್ಗದ ವ್ಯಕ್ತಿ ತನ್ನ ವೃತ್ತಿಯ ಕೀಳರಿಮೆಯ ಕಾರಣದಿಂದಲೇ ಕುಗ್ಗಿಹೋದ ಸಂದರ್ಭದಲ್ಲಿ ದುಡಿಮೆಯ ಘನತೆಯನ್ನು ತಿಳಿಸಿ ಕಾಯಕ ಗೌರವವನ್ನು ನೆಲೆಗೊಳಿಸಿದ ಬಸವಣ್ಣನವರ ಕಾಲದ ಸಮಾಜ ವ್ಯವಸ್ಥೆಗಿಂತ ಇಂದಿನ ಸಂದರ್ಭವೂ ಅಷ್ಟೇನೂ ಭಿನ್ನವಾಗಿಲ್ಲ. ಇಂಥ ಸಂದರ್ಭದಲ್ಲೂ ಹರಸೂರರು ವಿಶಿಷ್ಟ ವೃತ್ತಿ ಪರಿಸರವನ್ನು ಬಳಸಿಕೊಂಡೇ ವಸ್ತುವನ್ನು ಬೆಳೆಸುವುದೆಂದರೆ ಅದು ನಿಜವಾಗಿಯೂ ಶರಣರು ನಿರೂಪಿಸಿದ ಪ್ರತಿಪಾದಿಸಿದ ಕಾಯಕ ಗೌರವ ಮತ್ತು ಘನತೆಯೇ. ವಿವಿಧ ಶರಣರು ತಮ್ಮ ವಿವಿಧ ವೃತ್ತಿ ಸೂಚಕಗಳನ್ನೇ ಉಪಮೆ, ಪ್ರತಿಮೆಗಳಾಗಿ ಬಳಸಿಕೊಂಡು ವಚನ ರಚನೆಗೈದಂತೆ ಹರಸೂರರೂ ವೃತ್ತಿ ಸೂಚಕ ವಸ್ತು-ರೂಪಕಗಳನ್ನೇ ಬಳಸಿಕೊಂಡು ಕೃತಿಗೊಂದು ವೃತ್ತಿ ಪರಿಸರವನ್ನು ಆರೋಪಿಸುವ ಕ್ರಿಯೆ ಶರಣ ಸಂಪ್ರದಾಯದ ಮುಂದುವರಿಕೆಯಂತೆಯೇ ಇದೆ. ಆದರೆ ಅವುಗಳನ್ನು ಬಳಸಿಕೊಂಡು ಶರಣರು ಸಾಧಿಸುವ ಗುರಿ ತತ್ತ್ವ ಮತ್ತು ಆಧ್ಯಾತ್ಮಗಳಾದರೆ ಹರಸೂರರ ಗುರಿ ಅಪ್ಪಟ ಲೌಕಿಕ ಮತ್ತು ವಾಸ್ತವಗಳೇ. ಅವರು ಕೃತಿಗಳಿಗೆ ಕೊಡುವ 'ಕಾಯಕದ ವ್ಯಕ್ತಿ', 'ನನ್ನ ವೃತ್ತಿ ನನ್ನ ದೇವರು', 'ಕಾಯಕವೇ ನನ್ನ ದೇವರೆಂದ ಹರಳಯ್ಯ' ಮುಂತಾದ ಶೀರ್ಷಿಕೆಗಳೂ ಶರಣ ಸಂಪ್ರದಾಯದ ಪ್ರಭಾವಳಿಗೆ ಸೇರಿದವುಗಳಾಗಿವೆ. ಈ ಕೃತಿಗಳು ಶರಣರ ತತ್ತ್ವವೊಂದರ ಕೇವಲ ದೃಶ್ಯರೂಪಗಳೆಂದೋ, ಪೂರ್ವಾಗ್ರಹಿತ ವಿಚಾರಗಳೆಂದೋ ಭಾವಿಸುವಂತಿಲ್ಲ. ಇದು ಸಮಕಾಲೀನ ವ್ಯವಸ್ಥೆಗೆ, ಸಮಸ್ಯೆಗೆ ಐತಿಹಾಸಿಕ ಸಂದರ್ಭ-ಪರಂಪರೆಯೊಂದು ನೀಡಿದ ಪರಿಹಾರ. ಸಮಕಾಲೀನ ಸಂಕೀರ್ಣತೆಯಲ್ಲೂ ಪ್ರಸ್ತುತವಾದ ಐತಿಹಾಸಿಕ ಮೌಲ್ಯವೊಂದರ ಹೊಸ ಅರಿವಿನ ಫಲವಾದ ಸ್ವಾಭಿಮಾನದ ಸಂಕೇತವೇ, ಮೂರ್ತರೂಪವೇ ಈ ಕಾಯಕ ಘನತೆಯನ್ನು ಎತ್ತಿಹಿಡಿಯುವ ಕೃತಿಗಳು.

ಇಂಥ ಕೃತಿಗಳಲ್ಲಿ ಚಿತ್ರಿಸುವ ಚಪ್ಪಲಿಗಳು, ದಾರ, ಉಳಿ, ಮೊಳೆ, ತೊಗಲು ಕತ್ತರಿಸುವ ಮತ್ತು ಹದ ಮಾಡುವ ಮುಂತಾದ ಸಲಕರಣೆಗಳು ಕೃತಿಯಲ್ಲಿನ ಅರ್ಥಪೂರ್ಣ ಮತ್ತು ಅವಿಭಾಜ್ಯ ಅಂಶಗಳಾಗಿವೆ. ಅವುಗಳ ವಿಶೇಷ ರೀತಿಯ ಬಳಕೆಯಿಂದ ವಿಶಿಷ್ಟ ಅರ್ಥಗಳನ್ನು ಹೊರಡಿಸುವ ಪ್ರಯತ್ನವನ್ನು ಹರಸೂರರು ಮಾಡಿದ್ದಾರೆ. ಅದಕ್ಕೆ ಉತ್ತಮ ಉದಾಹರಣೆಗಳೆಂದರೆ 'ಏ ! ದಲಿತನಾರು ?' ಎಂಬ ಮತ್ತು 'ಕಪ್ಪು ವ್ಯಕ್ತಿಯ ಬಿಳಿಯ ಪ್ರತಿಬಿಂಬ' ಎಂಬ ಕೃತಿಗಳು.

ಈ ಎರಡೂ ಕೃತಿಗಳಲ್ಲಿ ಬಳಸಿಕೊಂಡ ನಿರೂಪಣಾ ಪರಿಕರ- ರೂಪಕಗಳು ಹೆಚ್ಚು ಕಡಿಮೆ ಒಂದೇ ಬಗೆಯಾಗಿದ್ದರೂ ಅವುಗಳ ಅಲ್ಪ- ಸ್ವಲ್ಪ ವ್ಯತ್ಯಾಸದ ಮೂಲಕವೇ ಭಿನ್ನ ಅರ್ಥಗಳನ್ನು ಹೊರಡಿಸಲಾಗಿದೆ. 'ಕಪ್ಪು ವ್ಯಕ್ತಿಯ ಬಿಳಿಯ ಪ್ರತಿಬಿಂಬ'ದಲ್ಲಿ ಶೀರ್ಷಿಕೆಯೇ ಸೂಚಿಸುವಂತೆ ಪ್ರತಿಬಿಂಬಿತ ಮುಖವು ಬಿಳುಪು ಎಂದರೆ ವರ್ಣರಹಿತವಾಗಿರುವುದೂ, ಪ್ರತಿಬಿಂಬದ ತಲೆಗೆ ಮಾತ್ರ ಮೊಳೆಗಳನ್ನು ಹೊಡೆದಿರುವುದೂ ಮತ್ತು ದಾರಕ್ಕೆ ಸೇರಿಸಿ ಚೌಕಟ್ಟಿನ ಆಕಾರ ನೀಡಿದ್ದೂ ವಿಶೇಷವಾಗಿದೆ. ಕೆಳಜಾತಿಯ ವ್ಯಕ್ತಿಯೊಬ್ಬ ಜಾತಿ ಸಮಾಜದ ಹಿನ್ನೆಲೆಯಲ್ಲಿ ತನ್ನ ಅಸ್ತಿತ್ವದ, ವ್ಯಕ್ತಿತ್ವದ ಶೋಧನೆಗೆ, ಸ್ವಚಿಂತನೆಗೆ ತೊಡಗಿ ಕಂಡುಕೊಂಡ ವಿಕೃತ ವಾಸ್ತವವನ್ನೇ ಪ್ರತಿಬಿಂಬದ ರೂಪಕ ವ್ಯಕ್ತಪಡಿಸುತ್ತದೆ. ಅಲ್ಲದೆ ಕಪ್ಪು ವ್ಯಕ್ತಿಯ ಹಿನ್ನೆಲೆಯಲ್ಲಿ ದಾರದಿಂದ ತೂಗುಹಾಕಿದಂತಿರುವ ಮುಖದ ರೂಪಿಕೆಗಳು ನಿರ್ಜೀವದ - ವ್ಯಕ್ತಿತ್ವಹೀನ, ಪರತಂತ್ರದ, ದಾಸ್ಯದ ಕ್ರೂರ ದಮನಕ್ಕೆ ಈಡಾಗಿ ನಿರ್ಜೀವವಾದ ಕಲ್ಪನೆಯನ್ನು ಕೊಡುತ್ತವೆ.

'ದಲಿತನಾರು ?' ಕೃತಿಯಲ್ಲೂ ಇಂತಹುದೇ ರೂಪಿಕೆಗಳು ಭಿನ್ನ ಅರ್ಥದಲ್ಲಿ ಬಂದಿವೆ. ಅಂಬೇಡ್ಕರ್ ಪ್ರತಿಮೆಯ ಮುಂಚಾಚಿದ ಬಲಗೈಯ ಚಿತ್ರಣವು ಅಂಬೇಡ್ಕರರನ್ನೂ, ಅಂಬೇಡ್ಕರ್ ವಾದವನ್ನೂ ಪ್ರತಿನಿಧಿಸುತ್ತದೆ. ಹಿಂದಿನ ಕೃತಿಯಂತೆ ಇಲ್ಲೂ ಕೆಲವು ಮುಖದ ರೂಪಿಕೆಗಳನ್ನು ಚಿತ್ರಿಸಲಾಗಿದೆ. ದಾರದಿಂದ ನೇರ ಅಂಬೇಡ್ಕರ್ ಕೋಟಿನ ತೋಳಿಗೆ ತೂಗುಹಾಕಲಾದ ತಲೆಗಳಿಗೆ ಜುಟ್ಟಿರುವುದು ಇಲ್ಲಿನ ವಿಶೇಷ.

ಅಲ್ಲದೆ ಅವು ನೈಜಮುಖಗಳಂತಲ್ಲದೆ ತೊಗಲಿನ ಮುಖವಾಡಗಳಂತಿರುವುದು ಅರ್ಥಗ್ರಹಿಕೆಗೆ ಬೇರೆಯದೇ ಆಯಾಮವನ್ನು ಕೊಡುತ್ತದೆ. ತೂಗುಹಾಕಲಾದ ತೊಗಲಿನ ಈ ಮುಖಗಳು ಸುಲಿದ ಪ್ರಾಣಿಗಳ ಚರ್ಮ ಒಣಗಲು ತೂಗುಹಾಕಿದ ಕಲ್ಪನೆ ಕೊಡುತ್ತವೆ. ಕೆಳಭಾಗದಲ್ಲಿನ ತಲೆಗೆ, ಮೆಟ್ಟಿಗೆ ಹೊಡೆದಂತಹ ಮೊಳೆಗಳನ್ನು ಹೊಡೆಯಲಾಗಿದೆ. ಇಲ್ಲಿ ಬರುವ ದಾರ, ಮೊಳೆ ತೂಗುಹಾಕಿದ ಚರ್ಮದ ಕಲ್ಪನೆ – ಇವೆಲ್ಲ ಚರ್ಮಕಾರನ ವೃತ್ತಿ ಸೂಚನೆಗಳಾಗುವುದರ ಜೊತೆಗೆ ರೂಪಕಗಳಾಗಿ ಮಹತ್ವಪೂರ್ಣ ಪಾತ್ರವಹಿಸಿದೆ. ಸತ್ತ ಪ್ರಾಣಿಯ ಚರ್ಮ ಸುಲಿಯುವಂತೆ ಬ್ರಾಹ್ಮಣತ್ವವನ್ನೂ ಸಿಗಿದು ಹಾಕುವ ಆಶಯ ಇಲ್ಲಿ ವ್ಯಕ್ತವಾಗಿದೆ. ಸಾಂಕೇತಿಕವಾಗಿ ಹರಸೂರರು ಅದನ್ನು ಸಾಧಿಸಿಯೂ ಇದ್ದಾರೆ. ಅಂಬೇಡ್ಕರ್ ವಾದ ಅಥವಾ ದಲಿತ ಹೋರಾಟ ಮತ್ತು ವೈದಿಕ ಶಾಹಿಯನ್ನು ಮುಖಾಮುಖಿಯಾಗಿಸಿ ದಲಿತ ಹೋರಾಟದ ಗೆಲುವನ್ನು ಕೃತಿ ಧ್ವನಿಸುತ್ತದೆ. 'ಕಪ್ಪು ವ್ಯಕ್ತಿಯ ಬಿಳಿಯ ಪ್ರತಿಬಿಂಬ'ದಲ್ಲಿ ದಲಿತನ ಸಾಮಾಜಿಕ ಸ್ಥಾನ; ವ್ಯಕ್ತಿತ್ವ, ಸ್ಥಿತಿಗತಿಯನ್ನು, ನೋವು-ವಿಷಾದವನ್ನು ಪ್ರಕಟಿಸಿದರೆ, 'ದಲಿತನಾರು ?' ಕೃತಿಯಲ್ಲಿ ಜಾಗ್ರತವಾದ ಸ್ವಾಭಿಮಾನ, ಕೆಚ್ಚು, ಪ್ರತಿರೋಧಗಳ ಕಾವು ಕಂಡು ಬರುತ್ತದೆ. ಇವೆಲ್ಲವುಗಳ ನಿರೂಪಣೆಗೆ ಹರಸೂರರು ತಮ್ಮ ಜನಾಂಗದ ವೃತ್ತಿ ಸೂಚಕಗಳನ್ನೇ ದುಡಿಸಿಕೊಳ್ಳುವುದು ಅವರ ಕಲೆಗಾರಿಕೆಯ ಹೆಚ್ಚಳವಾಗಿದೆ.

ತಡೆಹಿಡಿಯಲಾದ ಆಕ್ರೋಶ ತಾಳ್ಮೆಯೊಡೆದು ಆವೇಶಭರಿತವಾದ ಡೊಳ್ಳು

ವಾದನದ ರೂಪದಲ್ಲಿ ಪ್ರಕಟವಾಗುತ್ತಿರುವ 'ರುದ್ರನಾದ' ಕೃತಿಯೂ ವ್ಯವಸ್ಥೆಯ ವಿರುದ್ಧದ ಕ್ರಾಂತಿ ತೀವ್ರಗೊಳ್ಳುತ್ತ ಆಸ್ಫೋಟಗೊಳ್ಳಲಿರುವ ಅಂತಿಮ ಕ್ಷಣದ ಸೂಚನೆಯಾಗಿದೆ. 'ಹೋರಾಟದ ಬದುಕು,' 'ನೀರಾ ಚಳುವಳಿ' ಮತ್ತು ಕೆಳ ವರ್ಗದ ಧಾರ್ಮಿಕಾಚರಣೆಗಳಿಗೆ ಸಂಬಂಧಿಸಿದ ಕೆಲವು ಕೃತಿಗಳಲ್ಲಿ ಹರಸೂರರ ಜನಪರ ನಿಲುವು, ಸಾಮಾಜಿಕ ಮತ್ತು ದಲಿತ ಪ್ರಜ್ಞೆಗಳು ಹಾಸುಹೊಕ್ಕಾಗಿವೆ. ಈ ಇಬ್ಬರು ಕಲಾವಿದರನ್ನು ಹೊರತುಪಡಿಸಿ ಇನ್ನುಳಿದ ದಲಿತ ಕಲಾವಿದರಲ್ಲಿ ಈ ಸಂವೇದನೆಯನ್ನು ಕುರಿತಂತೆ ಕಂಡು ಬರುವುದು ಕೇವಲ ಪ್ರಜ್ಞಾಶೂನ್ಯತೆಯೇ ಆಗಿದೆ.

**ಪ್ರಜ್ಞಾಶೂನ್ಯತೆಗೆ ಕಾರಣವೇನು ?**

ಸಾಮಾನ್ಯವಾಗಿ ಕಲಾವಿದರಿಗೆ ಬದುಕಿನ, ಸಮಾಜದ ವಾಸ್ತವ ಪ್ರಜ್ಞೆಯ ವಿಕಲತೆಯೇಕಿರುವುದೆಂಬ ರಸಪ್ರಶ್ನೆಗೆ ಕಲೆಗಾಗಿ ಕಲೆಯೆಂಬ ಅಮಲು, ತಲೆಯೆಲ್ಲ ತುಂಬಿರುವುದರಿಂದ ಎಂದು ರಸವತ್ತಾಗಿ ಹೇಳಬಹುದು. ಎಲ್ಲ ಸುಖ-ಸೌಲಭ್ಯಗಳನ್ನು ಹೊಂದಿ ಐಷಾರಾಮವಾಗಿ ಬದುಕುವ, ಬದುಕಿನ ಯಾವ ಕ್ರೂರ ಹಿಡಿತಕ್ಕೂ ಸಿಕ್ಕು ನಲುಗದ, ಸಾಮಾಜಿಕ ವ್ಯವಸ್ಥೆಯ ದುರ್ನೀತಿ, ದಮನಗಳಿಗೆ ತುತ್ತಾಗಿ ಬಳಲಿದ ಸಮಯ ಕಳೆಯುವುದೇ ಒಂದು ಸಮಸ್ಯೆಯಾಗಿರುವ, ದುಡ್ಡಿದ್ದವರನ್ನು ಓಲೈಸುವ, ಮೇಲ್ವರ್ಗದ, ಮೇಲ್ಜಾತಿಯ ಮನಸ್ಥಿತಿಯೇ ಅರ್ಥಹೀನ ಕ್ರಿಯೆ-ರಚನೆಯಲ್ಲಿ ತೊಡಗಿ ಅದನ್ನು ಕಲೆಯೆಂದು ಕರೆಯುವುದಾದರೆ ಅದು ಅಂಥವರಿಗೇ ಸೀಮಿತವಾದ ವ್ಯಾಖ್ಯಾನವಾಗಿದೆ. ಆದರೆ ಕೆಳವರ್ಗ, ಕೆಳಜಾತಿಯಿಂದ ಬಂದ ಕಲಾವಿದ ಏನೆಲ್ಲಾ ಕಷ್ಟ ಅವಮಾನಗಳನ್ನೆದುರಿಸಿಯೂ ಆ ಒಂದು ಅನುಭವ-ಭಾವನೆಯೂ ಅವನ ಅಭಿವ್ಯಕ್ತಿಯಲ್ಲಿ ಮೂಡಿಬರದಿರಬೇಕಾದರೆ ಇರುವ ಕಾರಣಗಳಾದರೂ ಏನು ? ಅದಕ್ಕೆ ಕಾರಣಗಳೆಂದರೆ ಮುಖ್ಯವಾಗಿ ತಮ್ಮ ಬದುಕಿನ ವಾಸ್ತವಾನುಭವಗಳೇ ಕೃತಿಯ ವಸ್ತುವಾಗಬಲ್ಲವೆಂಬ – ಆಗಬೇಕೆಂಬ ಅರಿವಿಲ್ಲದಿರುವುದು. ತಾನು ಬದುಕುತ್ತಿರುವ ಸಮಾಜದ ವ್ಯವಸ್ಥೆಯಲ್ಲಿ ತಾನೇನಾಗಿದ್ದೇನೆನ್ನುವ ಪ್ರಜ್ಞೆಯಿಲ್ಲದಿರುವುದು. ಕಲೆಯಲ್ಲಿ ಎಲ್ಲೂ ಜನಪರವಾದ, ಸಾಮಾಜಿಕ ಚಳುವಳಿ-ಬಂಡಾಯಗಳ ಪರಂಪರೆಯಿಲ್ಲದಿರುವುದು. ಇದ್ದಿದ್ದರೆ ಅವುಗಳಿಂದಾದರೂ ಪ್ರೇರಣೆ ದೊರೆಯುತ್ತಿತ್ತೇನೋ ?



ಮೂಡುಬಿದಿರೆಯ ಶಿವರಾಮಕಾರಂತ ಪ್ರತಿಷ್ಠಾನವು ೮-೧೦-೨೦೦೨ ರಂದು ನಡೆದ ಸಮಾರಂಭದಲ್ಲಿ ನಾಡು-ನುಡಿಗೆ ಸೇವೆ ಸಲ್ಲಿಸಿರುವ ಗಣ್ಯರನ್ನು ಸನ್ಮಾನಿಸಿತು. ನವಕರ್ನಾಟಕ ಪ್ರಕಾಶನದ ಅಧ್ಯಕ್ಷರಾದ ಬಿ. ವಿ. ಕಕ್ಕಿಲ್ಲಾಯರು ಸಂಸ್ಥೆಯ ಪರವಾಗಿ ಶಿವರಾಮಕಾರಂತ ಗೌರವ ಪ್ರಶಸ್ತಿಯನ್ನು ಸ್ವೀಕರಿಸಿದರು.

ಕಲೆಯೆಂದರೆ ಕೇವಲ ಸೌಂದರ್ಯಾನುಭವವೆಂಬ ವಿಚಾರ. ಹೀಗಾಗಿ ಮೇಲ್ವರ್ಗದ ಆದರ್ಶ, ಮಾರ್ಗವನ್ನೇ ಒಪ್ಪಿಕೊಂಡು ಮೇಲ್ಜಾತಿ-ವರ್ಗದ ವ್ಯಾಖ್ಯಾನಕ್ಕೇ ಒಳಗಾಗಿ ಅಂಥ ಪರಂಪರೆಯನ್ನೇ ಅನುಸರಿಸುವುದು. ಇದರಿಂದ ತನ್ನತನವನ್ನೇ ಮರೆತು ವೈಚಾರಿಕವಾಗಿಯೂ ಪರಕೀಯವಾಗುವುದು. ಇದರಿಂದ ತನ್ನ ಬದುಕಿನ ಸತ್ವಪೂರ್ಣ ಅನುಭವಗಳನ್ನು ಮರೆತು ಇತರ ಪೇಲವ ಅನುಭವಗಳನ್ನೇ ವಿಶಿಷ್ಟವೆಂಬಂತೆ ಅಭಿವ್ಯಕ್ತಿಸುವುದು. ಅಲ್ಲದೆ ಸಾಹಿತ್ಯ ವಲಯದಲ್ಲಾದಂತಹ ಜಾಗೃತಿ, ವರ್ಗ-ವರ್ಣಪ್ರಜ್ಞೆಗಳು ಕಲಾವಲಯದಲ್ಲಿ ಕೆಲವು ಕಾರಣಗಳಿಂದ ಉದಯಿಸಲಿಲ್ಲ. ಅಂಥ ಸಾಹಿತ್ಯದಿಂದಲೂ ಪ್ರೇರಿತರಾಗದಿರುವುದು ನಮ್ಮ ಕಲಾವಿದರಿಗೆ ಇತರ ಯಾವ ಪ್ರಕಾರಗಳ ಕುರಿತ ಆಸಕ್ತಿ, ಅರಿವುಗಳ ಅಗತ್ಯವಿಲ್ಲವೆಂಬಂತಹ ಅಸಡ್ಡೆ ಮತ್ತು ಅಜ್ಞಾನ. ಜೊತೆಗೆ ಕಲಾ ಶಿಕ್ಷಣದ ನ್ಯೂನತೆಗಳು:– ಇಲ್ಲಿ ಕೇವಲ ಕಲಾ ಪರಂಪರೆಯ ಕುರಿತು ವಿವರಿಸಲಾಗುತ್ತದೆಯೇ ವಿನಃ ನಾಡಿನ ಇತಿಹಾಸ-ವರ್ತಮಾನಗಳಲ್ಲಿನ ಸಾಮಾಜಿಕ ವ್ಯವಸ್ಥೆ, ಜೀವನಕ್ರಮ, ಧರ್ಮ, ರಾಜಕೀಯ ಮುಂತಾದವುಗಳು ಆಯಾ ಕಾಲದ ವ್ಯಕ್ತಿಯ, ಜನಾಂಗದ ಬದುಕಿನಲ್ಲಿ ವಹಿಸಿದ ಪಾತ್ರವೇನೆಂಬುದರ ಅರಿವು ನೀಡದಿರುವುದು ಮತ್ತು ಕಲೆ-ಸಾಹಿತ್ಯ ಇತ್ಯಾದಿ ಸಂಸ್ಕೃತಿಯ ಸಮಾಜವಾದಿ ಹಿನ್ನೆಲೆಯ ಅಧ್ಯಯನವಿಲ್ಲದಿರುವುದು. ಅಲ್ಲದೆ ಕಲಾ ಮಾರುಕಟ್ಟೆಯ ಆಕರ್ಷಣೆ. ಇದರಿಂದ ಕಲಾವಿದ ಮಾರುಕಟ್ಟೆಯ ಅವಶ್ಯಕತೆಗಳನ್ನು ಪೂರೈಸುವ ನಿಟ್ಟಿನಲ್ಲಿ ತೊಡಗುತ್ತಾನೆಯೇ ಹೊರತು ತನ್ನ ಜೀವನದ, ಪರಿಸರದ ಆಗುಹೋಗುಗಳನ್ನು ಅಲಕ್ಷಿಸಿದ್ದಾನೆ. ಇದರಿಂದ ದಲಿತನೂ ಸೇರಿದಂತೆ ಎಲ್ಲ ಕಲಾವಿದರ ಜೀವಪರ, ಜನಪರ ಸಂವೇದನೆಗಳು ಸತ್ತಿವೆಯೆಂದೇ ಹೇಳಬೇಕಾಗಿದೆ.


**ರಾಜಶೇಖರ ರಾಮಣ್ಣ ಬಿಲ್ವಪತ್ರಿ**
ಕೆನ್ ಕಲಾಶಾಲೆ, ಶೇಷಾದ್ರಿಪುರಂ, ಬೆಂಗಳೂರು-೨೦


---


*೩೭ನೇ ಪುಟದಿಂದ*


ನಮಗೆ ಅನಾವೃಷ್ಟಿ, ಅಮೇರಿಕಕ್ಕೆ, ಯುರೋಪಿಗೆ ಸುರಿಮಳೆ. ಗಂಟೆಗೆ ೧೦೦೦ ಉಲ್ಕೆಗಳನ್ನು ಆನಂದಿಸಿದರು ಅವರು.

ಈ ವರ್ಷವೂ ನಮಗೆ ಬರಗಾಲವೇ. ಉಲ್ಕಾವೃಷ್ಟಿಯ ಸುರಿಮಳೆಗೆ ಇದೇ ಕೊನೆಯ ಅವಕಾಶ ಎಂದು ತಜ್ಞರ ಲೆಕ್ಕ. ಆದ್ದರಿಂದ ಹೆಚ್ಚೆಂದರೆ ಗಂಟೆಗೆ ೫೦ ಉಲ್ಕೆಗಳ ತುಂತುರು ವೃಷ್ಟಿಯಷ್ಟೇ ನಮಗೆ ಲಭ್ಯ. ಈ ವರ್ಷವೂ ಅಮೇರಿಕದವರಿಗೆ ೧೯ರ ಬೆಳಗಿನ ಜಾವ ಗಂಟೆಗೆ ೧೦೦೦-೨೦೦೦ ಉಲ್ಕೆಗಳ ಸುರಿಮಳೆಯ ನೋಟ ಸಿಗುವುದೆಂದು ತಜ್ಞರು ಲೆಕ್ಕಹಾಕಿದ್ದಾರೆ. ಆಕಸ್ಮಾತ್ ಲೆಕ್ಕ ತಪ್ಪಿದ್ದರೆ ನಮಗೂ ಉಲ್ಕಾವೃಷ್ಟಿ ಉಂಟು. ಜಾಗಿಂಗ್ ಮಾಡುವವರು ೧೯-೨೦ರಂದು ಕತ್ತೆತ್ತಿ ಐದು ನಿಮಿಷ ಗಮನಿಸಬಹುದು. ಒಂದೆರಡಾದರೂ ಉಲ್ಕೆಗಳು (ಚಂದ್ರನ ಬೆಳಕನ್ನು ಮೀರಿ ಪ್ರಕಾಶಿಸುವಂತಹುವು) ಕಂಡರೆ ತುಂತುರು ಎನ್ನಬಹುದು.

ಮುಗಿಲಿನ ಈ ಬರಕ್ಕೆ ಪರಿಹಾರವಿಲ್ಲ. ಈ ವೃಷ್ಟಿಯಿಲ್ಲದಿದ್ದರೆ ನಷ್ಟ ನಭಾವಲೋಕನಕ್ಕೆ ಮಾತ್ರ.

**ಖಗೋಳ ದಿನಚರಿ**

- ೨ ಚಂದ್ರ - ಮಂಗಳಗಳ ಅಂತರ ನಾಲ್ಕು ಡಿಗ್ರಿ
- ೩ ಬುಧ - ಶುಕ್ರಗಳ ಅಂತರ ಏಳು ಡಿಗ್ರಿ
- ೪ ಚಂದ್ರ - ಭೂಮಿ ಅಂತರ ಕನಿಷ್ಠ
  ಚಂದ್ರ - ಬುಧಗಳ ಅಂತರ ಎರಡು ಡಿಗ್ರಿ (ನೋಡುವುದು ಸಾಧ್ಯವಿಲ್ಲ)
- ೫ ಅಮಾವಾಸ್ಯೆ (ಬೆಳಿಗ್ಗೆ ೨ ಗಂಟೆ ೪ ನಿಮಿಷ)
- ೧೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)
- ೧೬ ಚಂದ್ರ - ಭೂಮಿಗಳ ಅಂತರ ಗರಿಷ್ಠ
- ೧೯ ಶುಕ್ರದ ಹಿಮ್ಮುಖ ಚಲನೆ ಮುಕ್ತಾಯ. ನೇರ ನಡೆ ಆರಂಭ
- ೨೦ ಹುಣ್ಣಿಮೆ (ಬೆಳಿಗ್ಗೆ ೭ ಗಂಟೆ ೪ ನಿಮಿಷ)
  ಪಾರ್ಶ್ವ ಛಾಯಾಗ್ರಹಣ ೫ ಗಂಟೆ ೨ ನಿಮಿಷದಿಂದ ೯ ಗಂಟೆ ೩೫ ನಿಮಿಷಗಳವರೆಗೆ
  ಕೃತ್ತಿಕಾ ನಕ್ಷತ್ರ ಗುಚ್ಛದ ಸಮೀಪವೇ ಚಂದ್ರನ ಸ್ಥಾನ
  ಮಂಗಳ - ಚಿತ್ರಾ ನಕ್ಷತ್ರಗಳ ಅಂತರ ಮೂರು ಡಿಗ್ರಿ
- ೨೨ ಚಂದ್ರ ಮತ್ತು ಶನಿ ಗ್ರಹದ ಅಂತರ ಮೂರು ಡಿಗ್ರಿ
- ೨೬ ಚಂದ್ರ ಮತ್ತು ಗುರುಗ್ರಹದ ಅಂತರ ಐದು ಡಿಗ್ರಿ
- ೨೭ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಬಿ.ಟಿ. ಹತ್ತಿ ಬಿಟ್ಟು ಕೊಟ್ಟರೂ ಬೇಡ

ಎನ್. ಎಂ. ನಟರಾಜ ನಾಗಸಂದ್ರ

ಮಾನ್ಸಾಂಟೋ ಕಂಪೆನಿಯವರ ಬಿ.ಟಿ. ಹತ್ತಿ ಬೀಜದ ಬಗ್ಗೆ ಈಗಾಗಲೇ ವಿಶ್ವದಾದ್ಯಂತ ವ್ಯಾಪಕವಾಗಿ ಚರ್ಚೆಯಾಗಿದೆ. ಹಾಗೆಯೇ ವಿರೋಧವೂ ವ್ಯಕ್ತವಾಗುತ್ತಿದೆ. ಈ ಎಲ್ಲಾ ವಿರೋಧದ ಅರಿವಿರುವ ಮಾನ್ಸಾಂಟೋ ಕಂಪೆನಿಯು ಈ ಹಿಂದೆ ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯು ಅನುಸರಿಸಿದ ಸಂಪ್ರದಾಯವನ್ನೇ ಮತ್ತೊಮ್ಮೆ ಮುಂದುವರಿಸುತ್ತಿದೆ. ಮಾನ್ಸಾಂಟೋದವರು ಕೆಲ ರೈತರಿಗೆ ಆಮಿಷ ಒಡ್ಡಿ ತಮ್ಮ ಕಂಪೆನಿಯ ಹೊಗಳು ಭಟ್ಟರನ್ನಾಗಿಸಿಕೊಂಡಿರುವುದು ಎಲ್ಲಾ ಪ್ರಜ್ಞಾವಂತರಿಗೂ ಅರ್ಥವಾಗುತ್ತಿದೆ, ಇದಕ್ಕೇನೂ ಯಾವ ಪಾಂಡಿತ್ಯವೂ ಬೇಕಿಲ್ಲ.

ನಮ್ಮಲ್ಲಿ ಹತ್ತಿ ಬೆಳೆಯುವ ಪ್ರದೇಶ ಕಡಿಮೆಯಾಗಿದ್ದು ಕ್ರಿಮಿನಾಶಕದ ಖರ್ಚು ದುಬಾರಿಯಾಗಲು ಕಾರಣವಾಗಿದ್ದು ನಮ್ಮಲ್ಲಿನ ಕೆಲ ವಿಜ್ಞಾನಿಗಳ ಅವಿವೇಕಿತನದಿಂದ ಮತ್ತು ಇವರ ಮಾತನ್ನು ಶಿರಸಾವಹಿಸಿ ಪಾಲಿಸಿದ ರೈತರ ದಡ್ಡತನದಿಂದಲೇ ಅನ್ನುವುದು ಎಲ್ಲರಿಗೂ ತಿಳಿದಿರುವ ಸತ್ಯಸಂಗತಿಯಾಗಿದೆ. ಯಾಕೆಂದರೆ, ಅರವತ್ತರ ದಶಕದಲ್ಲಿನ ಹಸಿರುಕ್ರಾಂತಿಯ ಕೊಡುಗೆಯಾಗಿ ಬಂದ ಏಕರೂಪದ ಬೆಳೆ ಪದ್ಧತಿಯಿಂದಾಗಿಯೇ ರೋಗ ಹಾಗೂ ಕೀಟಗಳ ಹಾವಳಿ ಹೆಚ್ಚಾಗಿದ್ದು. ಉತ್ತರ ಕರ್ನಾಟಕದ ಗುಲ್ಬರ್ಗಾ, ಬೀದರ್ ಮುಂತಾದ ಜಿಲ್ಲೆಗಳಲ್ಲಿ ತೊಗರಿ ಕಾಯಿಗೆ ಕಾಯಿ ಕೊರಕದ ಹಾವಳಿ ಹೆಚ್ಚಾಗಲೂ ಸಹ ಅಲ್ಲಿನ ಎಲ್ಲಾ ರೈತರು ಏಕರೂಪದ ಬೆಳೆಯಾಗಿ ತೊಗರಿಯನ್ನೇ ಅತಿಯಾಗಿ ಬೆಳೆದಿದ್ದರಿಂದ. ಕಾಯಿ ಕೊರಕದ ಹುಳುಗಳಿಗೆ ತಿನ್ನಲು ಬೇರೆ ಯಾವುದೇ ರೀತಿಯ ಆಹಾರ ಇಲ್ಲದಾಗಿ ತೊಗರಿಕಾಯಿಗೆ ಅಮರಿಕೊಂಡವು. ಇದೇ ಪದ್ಧತಿಯಿಂದಾಗಿಯೇ ಹತ್ತಿಗೂ ರೋಗ ಅಂಟಿಕೊಂಡು ಕೀಟಗಳ ಬಾಧೆಯೂ ಹೆಚ್ಚಾಗಿ ಔಷಧಿಯ ಖರ್ಚು ದುಬಾರಿಯಾದದ್ದು. ಇದನ್ನು ಹೇಳಲು ಕಾರಣ, ನಮ್ಮಲ್ಲಿ ಇಂದಿಗೂ ಸಹ ರಾಗಿಯ ಮಧ್ಯೆ ಹಕ್ಕಡಿಯ ಸಾಲುಗಳನ್ನು ಹಾಕುವ ವೈಜ್ಞಾನಿಕ ಪದ್ಧತಿ ಕೆಲವು ಕಡೆಗಳಲ್ಲಿ ರೂಢಿಯಲ್ಲಿದ್ದೆ. ರಾಗಿಯ ಮಧ್ಯೆ ಮಿಶ್ರ ಬೆಳೆಯಾಗಿ ಅವರೆ, ಜೋಳ, ಅಲಸಂದಿ, ಸಾಸಿವೆ, ಉದ್ದು, ಹೆಸರು, ಹುರಳು, ಹುಚ್ಚೆಳ್ಳುಗಳನ್ನು ಸಾಲುಗಳಾಗಿ ಹಾಕುತ್ತಿದ್ದರು. ಇದರಿಂದಾಗಿ ಒಂದು ಕುಟುಂಬಕ್ಕೆ ಬೇಕಾದ ಎಲ್ಲಾ ರೀತಿಯ ಧಾನ್ಯಗಳೂ ದೊರೆಯುತ್ತವೆ ಹಾಗೂ ಕೀಟಗಳ ನಿಯಂತ್ರಣವೂ ತನಗೆ ತಾನೆ ಆಗುತ್ತದೆ. ಹಾಗೇ ಎಲೆ ಕೋಸು, ಟೊಮ್ಯಾಟೋದಂತಹ ತರಕಾರಿ ಬೆಳೆಗಳನ್ನು ಮುಖ್ಯ ಬೆಳೆಯಾಗಿ ಬೆಳೆಯುವಾಗ ಅದರ ಸುತ್ತಲೂ ಸಾಸಿವೆ, ಚೆಂಡು ಹೂವಿನಂತಹ ಸಸಿಗಳನ್ನು ಒಂದೊಂದು ಸಾಲು ನೆಡುತ್ತಾರೆ. ಇದರಿಂದ ಮುಖ್ಯ ಬೆಳೆಗೆ ಬರುವ ಹುಳುಗಳು ಈ ಗಿಡಗಳಿಗೇ ಹೆಚ್ಚು ಆಕರ್ಷಿತವಾಗುತ್ತವೆ. ಆಗ ಈ ಗಿಡಗಳಲ್ಲಿನ ಹುಳುಗಳನ್ನು ಕೈಯಿಂದ ಹಿಡಿದು ಇಲ್ಲವೆ ಇತರ ವಿಧಾನಗಳಿಂದ ಕೊಲ್ಲುತ್ತಾರೆ. ಇದೊಂದು ಸುಸ್ಥಿರ ಕೃಷಿ ಪದ್ಧತಿ.

ಇನ್ನು ಕಳೆದ ಬಾರಿ ದಾವಣಗೆರೆಯ ಕೆಲವು ಹೊಲಗಳಲ್ಲಿ ಬೆಳೆಯಲಾಗಿದ್ದ ಬಿ.ಟಿ. ಹತ್ತಿಯನ್ನು ರಾಜ್ಯ ರೈತ ಸಂಘದವರು ಕಿತ್ತು ಸುಟ್ಟುಹಾಕಿದ ಕ್ರಮವು ಸಮರ್ಥನೀಯವಾದುದು ಎನ್ನಬಹುದು. ಯಾಕೆಂದರೆ ರೈತ ಸಂಘದವರು ಹೇಳುತ್ತಿದ್ದ ಮಾತನ್ನು ಕೇಳಿದ್ದರೆ ಇವತ್ತು ತೆಂಗಿನ ಮರಗಳು ವಿಷ ಕುಡಿದು ಸಾಯುತ್ತಿರಲೂ ಇಲ್ಲ, ಸಾರ್ವಜನಿಕರಿಂದ ಸಂಗ್ರಹಿಸಿದ ಕೋಟಿಗಟ್ಟಲೆ ತೆರಿಗೆ ಹಣ ಕಳಪೆ ಔಷಧಿ ಖರೀದಿಯ ನೆಪದಲ್ಲಿ ಯಾರೋ ಒಬ್ಬರ ಜೇಬು ಸೇರುತ್ತಲೂ ಇರಲಿಲ್ಲ.

ತೆಂಗು ಬೆಳೆಯುವ ಬೇರೆ ದೇಶಗಳಲ್ಲಿ ನುಸಿರೋಗ ಅರವತ್ತು ವರ್ಷಗಳಿಂದಲೂ ಇದೆ. ಇದನ್ನು ನಿವಾರಿಸಲು ಔಷಧಿಯಿಂದ ಸಾಧ್ಯವಿಲ್ಲ. ಸಹಕಾರಿ ಸಂಘಗಳ ಮೂಲಕ ನೀರಾ ಇಳಿಸಿ ಮಾರಾಟ ಮಾಡಲು ಅನುಮತಿ ನೀಡಿದ್ದರೆ ತೆಂಗು ಬೆಳೆಗಾರರ ಜೀವನಕ್ಕೊಂದು ದಾರಿಯೂ ಆಗುತ್ತಿತ್ತು. ಅಲ್ಪಸ್ವಲ್ಪ ನುಸಿರೋಗವೂ ನಿಯಂತ್ರಣವಾಗುತ್ತಿತ್ತು ಎಂದು ರೈತ ಸಂಘದವರು ಹೇಳುತ್ತಿದ್ದುದನ್ನು ನಿರ್ಲಕ್ಷ್ಯ ಮಾಡಿ, ಹೆಬ್ಬಾಳದಲ್ಲಿನ ಬಹುರಾಷ್ಟ್ರೀಯ ಔಷಧಿ ಕಂಪೆನಿಗಳ ಏಜೆಂಟರಾದ ಕೆಲ ನುಸಿರೋಗದ ವಿಜ್ಞಾನಿಗಳು ಹೇಳಿದ ಬಣ್ಣದ ಮಾತಿಗೆ ಮರುಳಾಗಿ ನಮ್ಮ ರೈತರು ಕಲ್ಪವೃಕ್ಷಕ್ಕೆ ವಿಷ ಪೋಷಣೆ ಮಾಡಿದ್ದರ ಪರಿಣಾಮವನ್ನು ಈಗ ಅನುಭವಿಸುತ್ತಿದ್ದಾರೆ. ಈಗ ಬಿ.ಟಿ. ಹತ್ತಿಯ ಬಗ್ಗೆಯೂ ಅಷ್ಟೇ. ಧಾರವಾಡದ ಕೆಲ ರೈತರ ಮತ್ತು ಕೃಷಿ ವಿಜ್ಞಾನಿಗಳ ಮಾತನ್ನು ನಂಬಿದರೆ ಆಗುವ ಪರಿಣಾಮ ಇನ್ನೂ ಭೀಕರವಾಗಿರುತ್ತದೆ.

ಬಿ.ಟಿ. ಹತ್ತಿಯ ಬಗ್ಗೆ ರೈತ ಸಂಘದವರು ತಮ್ಮ ವೈಯಕ್ತಿಕ ಲಾಭಕ್ಕಾಗಿ ಮಾತ್ರ ವಿರೋಧಿಸುತ್ತಿಲ್ಲ. ಇದರಲ್ಲಿ ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯೂ ಇದೆ ಎಂಬುವುದನ್ನು ನಾವು ಮರೆಯುವಂತೆ ಇಲ್ಲ. ಅಲ್ಲದೆ ಬಿ.ಟಿ. ಹತ್ತಿಯ ಬಗ್ಗೆ ಪ್ರಪಂಚದಾದ್ಯಂತ ಕಡುವಿರೋಧ ವ್ಯಕ್ತವಾಗುತ್ತಿದೆ. ಇನ್ನೂ ಕೆಲ ಅವಿವೇಕಿಗಳು ತಮ್ಮ ಸಮರ್ಥನೆಗೆ ಚೀನಾದಲ್ಲಿನ ಬಿ.ಟಿ. ಹತ್ತಿಯ ಸಾಧನೆಯನ್ನು ಉದಾಹರಣೆಯಾಗಿ ಹೇಳುತ್ತಿದ್ದುದುಂಟು. ಆದರೆ ಚೀನಾದ ವಿಜ್ಞಾನಿಗಳು ಒಂದು ತಿಂಗಳ ಹಿಂದಷ್ಟೇ ನೀಡಿರುವ ವರದಿಯ ಪ್ರಕಾರ; ಚೀನಾದಲ್ಲಿ ಸಂಪೂರ್ಣ ಪರಿಸರ ನಾಶವಾಗುತ್ತಿದೆ. ಆ ಕಾರಣ ಬಿ.ಟಿ. ತಂತ್ರಜ್ಞಾನವನ್ನು ಕೈಬಿಡುವುದೇ ಒಳ್ಳೆಯದು ಎಂದು ಹೇಳಿದ್ದಾರೆ.

ಸ್ವಿಡ್ಜರ್‌ಲ್ಯಾಂಡ್ ಸರ್ಕಾರವೂ ಸಹ ಈ ಪ್ರಯೋಗಗಳನ್ನು ಇನ್ನೂ ಹತ್ತು ವರ್ಷ ಮುಂದೂಡಿದೆ. ಯುರೋಪಿಯನ್ ಒಕ್ಕೂಟದಲ್ಲಿಯೂ ಸಹ ಸರ್ವಸಮ್ಮತವಾಗಿ ತೀರ್ಮಾನಿಸಿ ಮುಂದೂಡಿಕೆಯನ್ನು ಈಗಾಗಲೇ ಜಾರಿಗೆ ತಂದದ್ದಾಗಿದೆ. ಇದೆಲ್ಲವನ್ನೂ ಮೀರಿದ ಸಂಗತಿಯೆಂದರೆ ಆಫ್ರಿಕಾದಲ್ಲಿರುವ ಸಣ್ಣ-ಪುಟ್ಟ ದೇಶಗಳಲ್ಲಿ ಆಹಾರದ ಕೊರತೆ ಇದೆ, ಕ್ಷಾಮವಿದೆ. ಈ ಪರಿಸ್ಥಿತಿಯನ್ನೇ ನಿರೀಕ್ಷಿಸಿದ್ದ ಅಮೆರಿಕಾ ತನ್ನಲ್ಲಿರುವ ಕುಲಾಂತರಿ ತಂತ್ರಜ್ಞಾನದಿಂದ ತಯಾರಾದ ಆಹಾರವನ್ನು ಕಳುಹಿಸುತ್ತಿದ್ದುದನ್ನು ಜಾಂಬಿಯ, ಜಿಂಬಾಬ್ವೆ ದೇಶಗಳು ತಿರಸ್ಕರಿಸಿವೆ. ಇಂಡೋನೇಷಿಯಾದಲ್ಲಿ ಮಾನ್ಸಾಂಟೋ ಕಂಪೆನಿಯ ಬಿ.ಟಿ. ಹತ್ತಿಗಿಂತ ಅಲ್ಲಿನ ದೇಶೀಯ ಹತ್ತಿ ತಳಿಯೇ ಹೆಚ್ಚು ಇಳುವರಿ ತಂದ ಕಾರಣ ಬಿ.ಟಿ. ಹತ್ತಿಯನ್ನು ಸುಟ್ಟು ಹಾಕಿದ್ದಾರೆ. ಹಾಗೇ ಚೀನಾದಲ್ಲಿ ವಿದೇಶಿ ರಫ್ತುದಾರರು ಸುರಕ್ಷತ ಅರ್ಹತಾ ಪತ್ರ ಪಡೆದು ಕೊಂಡ ನಂತರವೇ ಜೈವಿಕವಾಗಿ ಮಾರ್ಪಾಡಾದ ಆಹಾರದ ಪದಾರ್ಥಗಳ ಆಮದಿಗೆ ಅನುಮತಿ ಕೊಡುವುದಾಗಿ ಅಲ್ಲಿನ ಸರ್ಕಾರ ಆದೇಶಿಸಿದೆ.

ಈ ಎಲ್ಲಾ ದೇಶಗಳು ಎಚ್ಚರಗೊಂಡಿದ್ದರ ಪರಿಣಾಮ: ಜೈವಿಕವಾಗಿ ಮಾರ್ಪಡಿಸಲಾದ ಕುಲಾಂತರಿ ಧಾನ್ಯಗಳ ಅಮೆರಿಕಾ ರಫ್ತು ಮಾರುಕಟ್ಟೆ ಸರ್ವನಾಶವಾಗಿದೆ. ೧೯೯೫-೯೬ರಲ್ಲಿ ೨.೮ ಮಿಲಿಯನ್ ಅಷ್ಟು ಧಾನ್ಯವನ್ನು ಅಮೆರಿಕಾ ಯುರೋಪಿಯನ್ ಒಕ್ಕೂಟಕ್ಕೆ ರಫ್ತು ಮಾಡುತ್ತಿದ್ದುದು, ೨೦೦೦-೦೧ರಲ್ಲಿ ಅದು ಕೇವಲ ೬೩೦೦ ಮೆಟ್ರಿಕ್ ಟನ್‌ಗೆ ಇಳಿದಿದೆ. ಅಲ್ಲದೆ ಪ್ರಸ್ತುತ ಮಾರುಕಟ್ಟೆ ವರ್ಷದಲ್ಲಿಯೂ ಜನವರಿ ೪ರವರೆಗೆ ಒಂದೇ ಒಂದು ಕಾಳು ಅಮೆರಿಕನ್ ಧಾನ್ಯವನ್ನು ಕೂಡ ರಫ್ತು ಮಾಡಲು ಸಾಧ್ಯವಾಗಿಲ್ಲ. ಆದರೆ ಜೈವಿಕವಾಗಿ ಮಾರ್ಪಾಡಾಗಿರದ ರಫ್ತುದಾರರಿಂದ ಯುರೋಪಿಯನ್ ಒಕ್ಕೂಟ ಈಗಲೂ ೨.೫ ಮೆಟ್ರಿಕ್ ಟನ್ ಧಾನ್ಯವನ್ನು ಆಮದು ಮಾಡಿಕೊಳ್ಳುತ್ತಿದೆ. ಜಪಾನ್ ಸಹ ಹಿಂದಿನ ವರ್ಷಕ್ಕಿಂತಲೂ ೨೦೦೦-೦೧ರಲ್ಲಿ ೧.೩ ಮಿಲಿಯನ್ ಟನ್ನಿನಷ್ಟು ಕಡಿಮೆ ಧಾನ್ಯವನ್ನು ಆಮದು ಮಾಡಿಕೊಂಡಿದೆ.

ನಮ್ಮಲ್ಲಿ ಹಾಗೂ ವಿದೇಶಗಳಲ್ಲಿ ಈ ಟ್ರಾನ್ಸ್‌ಜೆನಿಕ್ ಬೀಜಗಳ ಬಗ್ಗೆ ಇಷ್ಟೆಲ್ಲಾ ವಿರೋಧ ವ್ಯಕ್ತವಾಗುತ್ತಿರುವುದಕ್ಕೆ ಕಾರಣ ನಮ್ಮ ರೈತರು ಮೊದಲ ಬಾರಿ ತಮ್ಮ ಹೊಲಗಳಲ್ಲಿ ಬೆಳೆದ ಬಿ.ಟಿ. ಹತ್ತಿಯ ಗಿಡದಿಂದ ಬಂದಿರುವ ಬೀಜಗಳು ಮೊಳಕೆ ಬಂದಿರಬಹುದೇನೋ ನಿಜ. ಆದರೆ ಮಾನ್ಸಾಂಟೋ ಕಂಪೆನಿಗೆ ಬೀಜಗಳು ಮೊಳಕೆ ಬರುವಂತೆ ಮಾಡಿ ರೈತರನ್ನು ಮೋಸಗೊಳಿಸುವುದೂ ತಿಳಿದಿದೆ, ಹಾಗೆ ಮೊಳಕೆಯನ್ನು ಚಿವುಟುವುದಂತೂ ಇನ್ನೂ ಚೆನ್ನಾಗಿ ತಿಳಿದಿದೆ. ಇಷ್ಟಕ್ಕೂ ರೈತರೇ ತಮ್ಮ ಹೊಲಗಳಲ್ಲಿಯೇ ಬಿ.ಟಿ. ಹತ್ತಿ ಬೀಜಗಳ ಉತ್ಪಾದನೆಯನ್ನು ಮಾಡಿಕೊಳ್ಳುವಂತಿಲ್ಲ. ಕಾರಣ ಮಾನ್ಸಾಂಟೋ ಕಂಪೆನಿಯು ಟ್ರಾನ್ಸ್‌ಜನಿಕ್ ಬೀಜಗಳ ಮೇಲೆ ಪೇಟೆಂಟ್ ಪಡೆದಿದೆ. ಈ ಪೇಟೆಂಟ್ ಕಾನೂನಿನ ಪ್ರಕಾರ ಬಿ.ಟಿ. ಹತ್ತಿಯ ಬೀಜಗಳು ಅಕಸ್ಮಾತ್ ಮೊಳಕೆಯೊಡೆಯುವಂತಿದ್ದರೂ ಅವುಗಳನ್ನು ನಾವು ನಾಟಿ ಮಾಡುವಂತಿಲ್ಲ ಹಾಗೂ ನಾವು ನಾಟಿ ಮಾಡಿದ್ದೇ ಆದಲ್ಲಿ ಕಂಪೆನಿಯು ಕಾನೂನು ರೀತಿಯ ಕ್ರಮ ಕೈಗೊಂಡು ರೈತರಿಂದ ದಂಡ ವಸೂಲಿ ಮಾಡುವ ಅಧಿಕಾರವಿದೆ.

ಇನ್ನು ಪ್ರಾಣಿಗಳಲ್ಲಿನ ಜೀನ್ ಅನ್ನು ಸಸ್ಯಗಳಿಗೆ ಬೆರಕೆ ಮಾಡಿದ ತಳಿಗಳಿಂದ ಬೆಳೆದ ಬಿ.ಟಿ. ಹತ್ತಿಯಾಗಿರಬಹುದು ಅಥವಾ ಆಹಾರವಾಗಿರಬಹುದು, ಅದನ್ನು ತಿಂದಾಗ (ಹತ್ತಿಯ ಕಾಳಿನ ಎಣ್ಣೆಯನ್ನು ಹೋಟೆಲ್‌ಗಳಲ್ಲಿ ಉಪಯೋಗಿಸುತ್ತಾರೆ ಹಾಗೆ ಹತ್ತಿಯ ಹಿಂಡಿಯನ್ನು ಹಸುಗಳಿಗೆ ಹಾಕುತ್ತಾರೆ. ಈ ಹಸುಗಳ ಹಾಲನ್ನು ಮನುಷ್ಯರೇ ತಾನೇ ಕುಡಿಯುವುದು) ಆ ಪ್ರಾಣಿಗಳ ಡಿ.ಎನ್.ಎ.ಯನ್ನು ಜೀರ್ಣ ಮಾಡಿಕೊಳ್ಳುವ ಶಕ್ತಿ ನಮ್ಮ ಕರುಳಿಗೆ ಇಲ್ಲ. ಅಂದಮೇಲೆ ಆ ಡಿ.ಎನ್.ಎ. ಕಣಗಳು ನಮ್ಮ ರಕ್ತ ಪ್ರವೇಶ ಮಾಡಿ ಬಿಳಿ ರಕ್ತಕಣಗಳನ್ನು ನಾಶಪಡಿಸುತ್ತವೆ.

ಒಬ್ಬ ಮನುಷ್ಯನ ಅಥವಾ ಜಾನುವಾರಿನ ದೇಹದಲ್ಲಿ ರೋಗ ನಿರೋಧಕ ಶಕ್ತಿಯನ್ನು ಉಂಟುಮಾಡುವಂಥ ಬಿಳಿ ರಕ್ತಕಣಗಳು ನಾಶವಾದಾಗಲೇ ಏಡ್ಸ್ ರೋಗ ಬರುವುದು ಎನ್ನುವುದು ಎಲ್ಲರಿಗೂ ತಿಳಿದಿದೆ. ಆ ಕಾರಣ ಇನ್ನು ಮುಂದೆ ಲೈಂಗಿಕವಾಗಿಯೇ ಏನು ಏಡ್ಸ್ ರೋಗವನ್ನು ಪಡೆಯಬೇಕಿಲ್ಲ...... ಸುಮ್ಮನೆ ಬಿ.ಟಿ. ಆಹಾರವನ್ನು ತಿನ್ನುತ್ತಾ ಇದ್ರೆ, ತನಗೆ ತಾನೇ ಏಡ್ಸ್ ಬರುತ್ತೆ. ಬಿ.ಟಿ. ತಳಿಯ ವಿಚಾರ ಬರೀ ರೈತರ ಬಿತ್ತನೆ, ಬೀಜ, ಗೊಬ್ಬರಕ್ಕಷ್ಟೇ ಸಂಬಂಧಿಸಿದ್ದಲ್ಲ. ಯಾಕೆಂದರೆ ರೈತ ಬೆಳೆದ ಧಾನ್ಯವನ್ನು ಆತನೊಬ್ಬನೇ ಏನು ತಿನ್ನುವುದಿಲ್ಲ. ಆ ಕಾರಣ ಬಿ.ಟಿ. ತಂತ್ರಜ್ಞಾನವನ್ನು ಮುಖ್ಯವಾಗಿ ವಿರೋಧಿಸಬೇಕಾಗಿರುವುದು ಬಳಕೆದಾರರು. ಯಾಕೆಂದರೆ ಯುರೋಪಿನ ದೇಶಗಳಲ್ಲಿ ಜೈವಿಕ ತಂತ್ರಜ್ಞಾನದಿಂದ ತಯಾರಾದ ಆಹಾರ ಪದಾರ್ಥಗಳನ್ನು ಅಂಗಡಿಗಳಲ್ಲಿ ಪ್ರತ್ಯೇಕವಾಗಿ ಮಾರಾಟ ಮಾಡಬೇಕು. ಅಲ್ಲಿ ತಮಗೆ ಇಷ್ಟವಿದ್ದವರು ತಮಗೆ ಬೇಕಾದ ಆಹಾರವನ್ನು ಕೊಂಡುಕೊಳ್ಳಬಹುದು. ಆದರೆ ನಮ್ಮಲ್ಲಿ ಇನ್ನೂ ಆ ರೀತಿಯ ಮಾರಾಟ ವ್ಯವಸ್ಥೆಯಿಲ್ಲದಿರುವುದರಿಂದ ಬಳಕೆದಾರರು ಬಿ.ಟಿ. ತಂತ್ರಜ್ಞಾನದ ಆಹಾರದ ಬಗ್ಗೆ ಎಚ್ಚರಗೊಳ್ಳುವುದು ಅತ್ಯವಶ್ಯಕ.

ಇನ್ನು ನಮ್ಮ ವಿಜ್ಞಾನಿಗಳನ್ನು ಬಿ.ಟಿ. ತಂತ್ರಜ್ಞಾನದ ಬಗ್ಗೆ ಏನೂ ಕೇಳುವಂತೆಯೇ ಇಲ್ಲ. ಕಾರಣ ಇಂದು ನಮ್ಮ ಸಾಮಾಜಿಕ ಸಂಶೋಧನಾ ಸಂಸ್ಥೆಗಳ ವ್ಯಾಪ್ತಿಯನ್ನು ಖಾಸಗಿ ಕಂಪೆನಿಗಳು ಆಕ್ರಮಣ ಮಾಡಿಕೊಳ್ಳುತ್ತಿರುವ ಸನ್ನಿವೇಶದಲ್ಲಿ ನಮ್ಮ ವಿಜ್ಞಾನಿಗಳು ಜನಪರವಾದ ರಚನಾತ್ಮಕ ಸಂಶೋಧನೆ ಕೈಗೊಳ್ಳುವುದು ಬರೀ ಕನಸಿನ ಮಾತಷ್ಟೇ. ಖಾಸಗಿ ಕಂಪೆನಿಗಳಿಗೆ ಬೇಕಿರುವುದು ಜನರ ಆರೋಗ್ಯವಲ್ಲ ತಮ್ಮ ಲಾಭವಷ್ಟೇ ಮುಖ್ಯ ಎನ್ನುವುದು ಮಾನ್ಸಾಂಟೋ ಕಂಪೆನಿಯ ಇತಿಹಾಸವನ್ನು ಬಲ್ಲ ಎಲ್ಲರಿಗೂ ತಿಳಿದಿರುವುದೇ. ▪ ಕಾರಣ ಬಿ.ಟಿ. ಹತ್ತಿಯಿಂದ ಅಧಿಕ ಲಾಭ ಬರುತ್ತದೆ, ಖರ್ಚು ಕಡಿಮೆ, ಔಷಧಿಯ ಸಿಂಪಡಣೆ ಕಡಿಮೆ ಎನ್ನುವ ಅತಿ ಆಸೆಯ ಭ್ರಮೆಯಿಂದಾಗಿ ಪರಿಸರವನ್ನು ಹಾಳು ಮಾಡಿ ನಾವೂ ಹಾಳಾಗುವಂಥ ಹುಚ್ಚು ಸಾಹಸ ಬೇಡ. ನಾವು ಬದುಕಿ ಇತರರನ್ನು ಬದುಕಲು ಬಿಡುವುದೇ ಮಾನವ ಧರ್ಮ. ಆ ಕಾರಣ ಬಿ.ಟಿ. ಹತ್ತಿ ಬಿಟ್ಟಿ ಕೊಟ್ಟರೂ ನಮಗೆ ಬೇಡ. ಅದೇನಿದ್ದರೂ ಅಮೆರಿಕಾದಂತಹ ಭಸ್ಮಾಸುರ ದೇಶಕ್ಕೆ ಸೀಮಿತವಾಗಿರಲಿ. ನಮ್ಮಲ್ಲಿ ಈಗ ಉತ್ಪಾದನೆ ಯಾಗುತ್ತಿರುವ ಆಹಾರ ಧಾನ್ಯವನ್ನೇ ಸರಿಯಾಗಿ ಶೇಖರಿಸಿಡಲಾಗದೆ, ಕೊಳ್ಳುವವರಿಲ್ಲದೆ ರೈತರು ಸಾಲಗಾರರಾಗಿ ಆತ್ಮಹತ್ಯೆಗಳನ್ನು ಮಾಡಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಇನ್ನೂ ಅಧಿಕ ಉತ್ಪಾದನೆ ಮಾಡಿ ಬೆರಳೆಣಿಕೆಯಷ್ಟಿರುವ ಆತ್ಮಹತ್ಯೆಗಳು ಸಾವಿರಗಟ್ಟಲೆ ಆಗುವುದು ಬೇಡ.

ಎನ್. ಎಂ. ನಟರಾಜ ನಾಗಸಂದ್ರ,
ನಾಗಸಂದ್ರ, ಕೊಡಿಗೇಹಳ್ಳಿ (ಅಂಚೆ)
ದೊಡ್ಡಬಳ್ಳಾಪುರ-೫೬೧ ೨೦೩

## ಮಾರ್ಕ್ಸ್-ಅಂಬೇಡ್ಕರ್

ಮರದ ನೆರಳು
ನೆಲವ ಹಾಸಿದಂತೆ
ಮನದಲ್ಲಿ, ಇವರೀರ್ವರ ಬಿಂಬ
ಏನೇ ವೈರುಧ್ಯಗಳಿರಲಿ
ಗಮ್ಯವೊಂದೆ; ಹಸನು
ಬಿಳಲುಗಳೆಲ್ಲ ಬುಡಕ್ಕೆ ಸಂಬಂಧಿಸಿದಂತೆ.

ವಿಶ್ವನಾಥ ಎಲ್. ವೇಮಗಲ್
ಶಿಕ್ಷಕರು, ವೇಮಗಲ್ಲು - ೫೬೩ ೧೫೭

# ಆಗಾಗ



ನೀನೊಂದು ವೇಳೆ ನಿನ್ನ ಊರ ಹೆಸರನು
ನಿನ್ನ ಮನೆ, ನಿನ್ನ ಬದುಕು
ನಿನ್ನೆಲ್ಲ ನಿನ್ನೆ ನಾಳೆಗಳನು
ಮರೆತುಬಿಟ್ಟರೆ
ನೀನೊಂದು ವೇಳೆ ಎಲ್ಲರನು
ಕಳೆದುಕೊಂಡು ಹತಾಶನಾಗಿಬಿಟ್ಟರೆ
''ನಾನಾರು ಎತ್ತ ಸಾಗಿದ್ದೇನೆ'' ಎಂದು
ಕತ್ತಲೆಯ ಕೇಳುವುದೆ ಒಳಿತು.
ಏಕೆನೆ ಬೆಳಕಿನ ಸರಿಯಾದ ವಿಳಾಸವನು
ಕತ್ತಲೆಗಿಂತ ಚೆನ್ನಾಗಿ
ಬೇರಾರು ಬಲ್ಲರು ?
ಆತ್ಮ ಬೇಗುದಿಗೊಂಡಿದ್ದಾಗ
ಹೃದಯ ಬೆಂದಿರುವಾಗ
ಸಂತೈಸಿಕೊಳ್ಳಲು ಸಾಧ್ಯವೇ ಇಲ್ಲದಾಗ
ದುಃಖದ ಭಾರವನು ಹಂಚಿಕೊಳ್ಳಲು
ಬೇರಾರೂ ಇಲ್ಲವೆಂದಾಗ
ದೇವರು, ಅಪ್ಪ ಅಮ್ಮ, ಗೆಳೆಯ
ಪ್ರಿಯ ಪತ್ನಿ, ಮಕ್ಕಳು
ಎಲ್ಲ ಎಲ್ಲರು
ದೂರವೆನಿಸಿದಾಗ
ದೂರದ ನಾಡಿಂದ
ಕತ್ತಲೆಯ ಬೀಡನು ದಾಟಿಕೊಂಡು
ನಿನ್ನ ಬಳಿ ಇರಲೆಂದೆ ಚಂದಿರನು
ಬಂದಿಹನೆಂದೆ ತಿಳಿವೆ ನೀನು.
ಸಹಸ್ರಸಲ ಮೊರೆಯಿಟ್ಟರೂ
ಬೇಡಿಕೊಂಡರು, ಯುಕ್ತವಲ್ಲದ
ಶಬ್ದಗಳು ನಿನ್ನ ಹೃದಯದಾಳದ
ಬಿಕ್ಕನೊಂದನು ಕೂಡ
ಆತ್ಮದ ವೇದನೆಯನು
ಅಭಿವ್ಯಕ್ತಿಸಲಾರವೆನಿಸಿದಾಗ
ಎಲ್ಲವನು ಮೌನದಪಾರ
ಮೃದು ಹಸ್ತಗಳಿಗೆ ಒಪ್ಪಿಸಿಬಿಡು.
ಏಕೆಂದರೆ, ಮೌನದ ಹೊರತು
ಬೇರಿನ್ನಾರು ಬಲ್ಲರು
ಮನುಜನಳಲಿನ
ಸುದೀರ್ಘ ಚರಿತೆಯನು ?

ಮೂಲ ಒರಿಯನ್ : ಡಾ॥ ಸೀತಾಕಾಂತ ಮಹಾಪಾತ್ರ
ಅನುವಾದ : ಪ್ರೊ॥ ಆರ್. ಲಕ್ಷ್ಮೀನಾರಾಯಣ
ಪ್ರಿನ್ಸಿಪಾಲ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು - ೪೦

# ಶರದೃತುವಿನಲ್ಲಿ ನಿಮ್ಮ ಆರೋಗ್ಯ ಪಾಲನೆ

**ಭಾ**ರತೀಯ ಪ್ರಾಚೀನ ವೈದ್ಯಶಾಸ್ತ್ರವಾದ ಆಯುರ್ವೇದವು ರೋಗ ಚಿಕಿತ್ಸೆಯನ್ನು ಮಾಡುವುದರೊಂದಿಗೆ, ಆರೋಗ್ಯ ಸಂರಕ್ಷಣೆ ಅಂದರೆ ಮನುಷ್ಯನಿಗೆ ರೋಗ ಬರದಂತೆ ಮುನ್ನೆಚ್ಚರಿಕೆ ವಹಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದೆ. ಈ ರೀತಿಯ ಸ್ವಾಸ್ಥ್ಯ ಸಂರಕ್ಷಣೆಗೆ ಆಯುರ್ವೇದದಲ್ಲಿ ಹಲವಾರು ಸೂತ್ರಗಳನ್ನು ಗ್ರಂಥಗಳಲ್ಲಿ ನಿರೂಪಿಸಿದ್ದಾರೆ.

ಅವುಗಳಲ್ಲಿ ಋತು ಚರ್ಯೆ ಕೂಡಾ ಒಂದಾಗಿದ್ದು ಕಾಲಕ್ಕನುಸರಿಸಿ ಎಲ್ಲಾ ಋತುವಿನಲ್ಲೂ ಆರೋಗ್ಯದ ರಕ್ಷಣೆಗೋಸುಗ ಪಾಲಿಸುವ ಆಹಾರ-ವಿಹಾರಗಳ ನಿಯಮವನ್ನೇ ''ಋತುಚರ್ಯೆ'' ಎನ್ನುತ್ತಾರೆ.

ಪ್ರತಿ ಸಂವತ್ಸರವನ್ನೂ ಪ್ರಕೃತಿಯನ್ನಾಧರಿಸಿಕೊಂಡು ಎರಡು ಮಾಸಗಳಿಗೊಂದರಂತೆ ಆರು ಋತುಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ವಸಂತ (ಚೈತ್ರ, ವೈಶಾಖ), ಗ್ರೀಷ್ಮ (ಜ್ಯೇಷ್ಠ, ಆಷಾಢ), ವರ್ಷ (ಶ್ರಾವಣ, ಭಾದ್ರಪದ), ಶರತ್ (ಆಶ್ವಯುಜ, ಕಾರ್ತಿಕ), ಹೇಮಂತ (ಮಾರ್ಗಶಿರ, ಪುಷ್ಯ), ಶಿಶಿರ (ಮಾಘ, ಫಾಲ್ಗುಣ). ಈ ಮೂರು ಮೂರು ಋತುಗಳಿಗೆ ಒಂದರಂತೆ ಆದಾನಕಾಲ (ಉತ್ತರಾಯಣ), ವಿಸರ್ಗಕಾಲ (ದಕ್ಷಿಣಾಯನ) ಎಂದು ವಿಂಗಡಿಸಲಾಗಿದೆ.

ಆದಾನಕಾಲ (ಶಿಶಿರ, ವಸಂತ, ಗ್ರೀಷ್ಮ) ಆಗ್ನೇಯವಾಗಿರುತ್ತದೆ. ಇದರಲ್ಲಿ ಸ್ವಭಾವಕ್ಕನುಗುಣವಾಗಿ ಸೂರ್ಯ ಉತ್ತರ ದಿಕ್ಕಿನಲ್ಲಿ ತಿರುಗುವುದರಿಂದ ಮತ್ತು ಅತ್ಯುಷ್ಣ ಕಿರಣದ ಜಾಲದಿಂದ ವ್ಯಾಪಕವಾದ ಕಾರಣ ಅವನ ಸಂಪರ್ಕದಿಂದ ಉಂಟಾಗುವ ಅತ್ಯಂತ ಒಣಗಾಳಿ, ಚಂದ್ರನಿಂದ ಉತ್ಪನ್ನವಾದ ಗುಣವನ್ನು ಒಣಗಿಸುತ್ತಾ ಸ್ಥಾವರ ಜಂಗಮ ಜಗತ್ತಿನ ಸ್ನೇಹವನ್ನು ಗ್ರಹಣ ಮಾಡುತ್ತದೆ ಮತ್ತು ಅದು ಋತುಕ್ರಮದಿಂದ ದಿನದಿಂದ ದಿನಕ್ಕೆ ಅತ್ಯಂತ ರೂಕ್ಷತೆಯಿಂದೊಡಗೂಡಿದ ಗಾಳಿ, ಕಹಿ, ಚೊಗರು, ಖಾರ ರಸಗಳನ್ನು, ರೂಕ್ಷಗುಣವನ್ನು ಪ್ರಬಲ ಮಾಡಿ, ಮನುಷ್ಯನಲ್ಲಿ ದುರ್ಬಲತೆಯನ್ನು ಉತ್ಪನ್ನ ಮಾಡುತ್ತದೆ.

ಅದೇ ವಿಸರ್ಗಕಾಲ (ವರ್ಷ, ಶರತ್, ಹೇಮಂತ) ಸೌಮ್ಯವಾಗಿದ್ದು ಸೂರ್ಯ ದಕ್ಷಿಣ ದಿಕ್ಕಿನಲ್ಲಿ ತಿರುಗುವುದರಿಂದ, ಮೋಡ, ಗಾಳಿ ಮತ್ತು ಮಳೆಯಿಂದ ದಕ್ಷಿಣಾಯನ ಸೂರ್ಯನ ಪ್ರಭಾವ ನಷ್ಟವಾಗುವುದರಿಂದ ಮತ್ತು ಚಂದ್ರನ ಬಲ ಕ್ಷೀಣಿಸದಿರುವುದರಿಂದ, ಶೀತಲಕಿರಣದಿಂದ ನಿರಂತರ ಜಗತ್ತಿನ ಪೋಷಣೆಯಾಗುವ ಕಾರಣ ಮತ್ತು ಆಕಾಶದಿಂದ ಬೀಳುವ ಜಲದಿಂದ ಜಗತ್ತಿನ ಸಂತಾಪ ಶಾಂತವಾಗುತ್ತದೆ. ಇದರಿಂದ ರೂಕ್ಷವಲ್ಲದ ರುಚಿಗಳಾದ ಹುಳಿ-ಉಪ್ಪು-ಸಿಹಿ ರಸಗಳು ಕ್ರಮವಾಗಿ ಹೆಚ್ಚುತ್ತಾ ಹೋಗುತ್ತವೆ ಮತ್ತು ಈ ಕಾಲದಲ್ಲಿ ಮನುಷ್ಯನ ಶಕ್ತಿ ವರ್ಧಿಸುತ್ತದೆ. ಆದ್ದರಿಂದಲೇ ದಕ್ಷಿಣಾಯನ ಬಲಕಾರಿ.

**ಶರತ್ ಋತುವಿನ ಲಕ್ಷಣಗಳು :** ಶರತ್ ಋತುವಿನಲ್ಲಿ ಆಕಾಶ ಬಿಳಿಯ ಮೋಡಗಳಿಂದ ಕೂಡಿದ್ದು ಭೂಮಿ ಸ್ವಲ್ಪ ಕೆಸರಾಗಿರುತ್ತದೆ. ಕಾಶ, ಕುಮುದ, ಸಪ್ತಾಹ್ವಗಳೆಲ್ಲ ಅರಳ ತೊಡಗುತ್ತದೆ. ಶಾಲಿಧಾನ್ಯಗಳಿಂದ ಹೊಲಗಳು ಸುಶೋಭಿತ ವಾಗಿರುತ್ತವೆ. ಮೋಡಗಳ ಸಮೂಹ ಸರಿದುಹೋಗುವ ಕಾರಣದಿಂದ ಸೂರ್ಯನ ತೀಕ್ಷ್ಣ ಕಿರಣಗಳು ಭೂಮಿಗೆ ಬೀಳುತ್ತಿರುತ್ತವೆ ಮತ್ತು ಸೂರ್ಯ ಕೆಂಪುವರ್ಣ ದಿಂದ ಕೂಡಿರುತ್ತಾನೆ. ದಿಕ್ಕುಗಳು ಅತಿ ನಿರ್ಮಲವಾಗಿದ್ದು ಅಲ್ಲಿ ಕ್ರೌಂಚ ಪಕ್ಷಿಗಳು ಮಾಲೆಯಾಕಾರದಲ್ಲಿ ಹಾರುತ್ತಿರುತ್ತವೆ. ಸರೋವರದಲ್ಲಿ ಕಮಲದ ನಡುವೆ ಅಡಗಿ ಕುಳಿತಿರುವ ಮೀನುಗಳು ಮತ್ತು ಹಂಸಗಳ ಭುಜಗಳು ಒಂದಕ್ಕೊಂದು ಆದ ಡಿಕ್ಕಿಯಿಂದ ಉತ್ಪನ್ನವಾದ ತರಂಗಗಳ ಚೂರುಗಳಿಂದ ಎತ್ತರೆತ್ತರವಾದ ತರಂಗಗಳು ಏಳುತ್ತವೆ. ಆದರೂ ನೀರು ನಿರ್ಮಲವಾಗಿರುತ್ತದೆ.

ಶರತ್ ಋತುವು ಮಳೆಗಾಲದ ನಂತರ ಬರುವುದಾದ್ದರಿಂದ ಮನುಷ್ಯನ ದೇಹವು ಮಳೆಗಾಲದ ತಣ್ಣನೆಯ ಹವಾಮಾನಕ್ಕೆ ಹೊಂದಿಕೊಂಡಿದ್ದು, ಈ ಋತುವಿನಲ್ಲಿ ತತ್‌ಕ್ಷಣವೇ ಸೂರ್ಯನ ದಹಿಸುವ ಕಿರಣಗಳಿಗೆ ತೆರೆದಿಡುವುದರಿಂದ ಸಾಮಾನ್ಯವಾಗಿ ಇದು ಪಿತ್ತವನ್ನು ಪ್ರಕುಪಿತಗೊಳಿಸುತ್ತದೆ. ಆಕಾಶದ ಮೇಘಗಳು ವಿರಳವಾಗಿಯೂ, ಕೆಸರು ಒಣಗಿಯೂ ಇರುವ ಶರದೃತುವಿನಲ್ಲಿ ಸೂರ್ಯನ ಕಿರಣಗಳಿಂದ ತೆಳ್ಳಗಾದ ಆ ಪಿತ್ತಸಂಚಯವು ಪಿತ್ತವ್ಯಾಧಿಗಳನ್ನು ಉಂಟುಮಾಡುತ್ತದೆ.

**ಶರತ್ ಋತುವಿನಲ್ಲಿ ಆಹಾರ-ವಿಹಾರ :** ಈ ಋತುವಿನಲ್ಲಿ ಕಹಿ ದ್ರವ್ಯಗಳಿಂದ ತಯಾರಿಸಿದ ತುಪ್ಪವನ್ನು ಸೇವಿಸಬೇಕು. ಪ್ರತಿದಿನ ಶೀತವಾದ ಲಘುವಾಗಿರುವ ಅನ್ನ-ಪಾನಗಳನ್ನು ಮತ್ತು ಒಗರು, ಕಹಿ, ಸಿಹಿ ರುಚಿಗಳನ್ನು ಹೊಂದಿರುವ ಆಹಾರ ಪದಾರ್ಥಗಳನ್ನು ಉಪಯೋಗಿಸುವುದು ಪಥ್ಯವಾಗಿರುತ್ತದೆ. ಹಸಿವಾದಾಗ ಶಾಲಿ ಅಕ್ಕಿಯ ಅನ್ನ, ಷಷ್ಟಿಕ ಅನ್ನ (೬೦ ದಿನಗಳಲ್ಲಿ ಬೆಳೆದ ಭತ್ತದಿಂದ ತಯಾರಿಸಲಾದ ಅಕ್ಕಿಯ ಅನ್ನ) ಗೋಧಿ, ಜೋಳ, ಹೆಸರುಕಾಳು, ಸಕ್ಕರೆ, ಜೇನುತುಪ್ಪ, ನೆಲ್ಲಿಕಾಯಿ, ದ್ರಾಕ್ಷಿ ಮತ್ತು ಕಾಡುಪ್ರಾಣಿಗಳ (ಲಾವ, ಕಪಿಂಜಲ ಪಕ್ಷಿಗಳು, ಏಣ ಎಂಬ ಜಿಂಕೆ, ಕುರಿ, ಶರಭ, ಮೊಲ ಇತ್ಯಾದಿ) ಮಾಂಸವನ್ನು ಸೇವಿಸಬೇಕು.

*ದಿವಾ ಸೂರ್ಯಾಂಶು ಸಂತಪ್ತಂ ನಿಶಿ ಚಂದ್ರಾಂಶು ಶೀತಲಮ್।*
*ಕಾಲೇನ ಪಕ್ವಂ ನಿರ್ದೋಷಮಗಸ್ತ್ಯೇನಾವಿಷೀಕೃತಮ್ ॥*
*ಹಂಸೋದಕ ಮಿತಿ ಖ್ಯಾತಂ ಶಾರದಂ ವಿಮಲಂ ಶುಚಿ ।*
*ಸ್ನಾನಪಾನಾವಗಾಹೇಷು ಹಿತಮಂಬು ಯಥಾಽಮೃತಮ್॥*

*ಚರಕಸಂಹಿತ ಸೂತ್ರಸ್ಥಾನ ೬/೪೬-೪೭*

ಶರದೃತುವಿನಲ್ಲಿ ನೀರು ಹಗಲಿನಲ್ಲಿ ಸೂರ್ಯನ ಕಿರಣ ಗಳಿಗೆ ತೆರವಾಗಿ, ರಾತ್ರಿಯಲ್ಲಿ ಚಂದ್ರನ ಕಿರಣಗಳಿಂದ ಶೀತಲ ವಾಗಿ, ಅಗಸ್ತ್ಯನಕ್ಷತ್ರದಿಂದ ನಿರ್ವಿಷವಾಗಿ, ನಿರ್ಮಲ, ಪವಿತ್ರ ವಾದ, ಕಾಲಪ್ರಭಾವದಿಂದ ಶುದ್ಧವಾಗಿರುವ, ಅಮೃತ ಸಮಾನ ವಾಗಿರುವ ಇದನ್ನು ''ಹಂಸೋದಕ'' ಎಂದು ಕರೆಯುತ್ತಾರೆ.

ಹಂಸೋದಕವನ್ನು ಸ್ನಾನ ಮಾಡಲು, ಕುಡಿಯಲು, ಈಜಲು ಉಪಯೋಗಿಸಲಾಗುತ್ತದೆ.

ಈ ಋತುವಿನಲ್ಲಿ ಪಿತ್ತ ಪ್ರಕುಪಿತವಾಗಿರುವ ಕಾರಣ ದಿಂದ, ಅದನ್ನು ಸಮಸ್ಥಿತಿಗೆ ತರಲು ಮೊದಲನೆಯದಾಗಿ ಕಹಿ ದ್ರವ್ಯಗಳಿಂದ ತಯಾರಿಸಿದ ತುಪ್ಪವನ್ನು ಸೇವಿಸಬೇಕು. ಅದರಿಂದೇನೂ ಪರಿಹಾರ ದೊರಕದಿದ್ದಲ್ಲಿ ಭೇದಿಗೆ ಔಷಧಿಯನ್ನು ತೆಗೆದುಕೊಳ್ಳಬೇಕು. ಇದು ಕೂಡ ವಿಫಲವಾದಲ್ಲಿ ಅಲ್ಲಿ ರಕ್ತದ ಅಶುದ್ಧಿಯಾಗಿದೆಯೆಂದು ತಿಳಿದು, ಅದಕ್ಕಾಗಿ ರಕ್ತಮೋಕ್ಷಣ ಕ್ರಮವನ್ನು ಅನುಸರಿಸಬೇಕು.

ಮಿತಪ್ರಮಾಣವಲ್ಲದ ಆಹಾರ ಸೇವನೆಯಿಂದ ದೇಹಕ್ಕೆ ಯಾವಾಗಲೂ ತೊಡಕುಂಟಾಗುವ ಸಾಧ್ಯತೆ ಹೆಚ್ಚು. ಆದರೆ ಶರದೃತುವಿನಲ್ಲಿ ಇದರಿಂದ ಅತ್ಯಧಿಕ ಹಾನಿಯಾಗುವ ಕಾರಣದಿಂದ ಹಲವಾರು ಆರೋಗ್ಯ ಸಮಸ್ಯೆಗಳ ಸಾಧ್ಯತೆಯಿರುವುದರಿಂದ ಈ ಋತುವಿನಲ್ಲಿ ಮಿತಪ್ರಮಾಣ ದಲ್ಲಿ ಆಹಾರವನ್ನು ಸೇವಿಸಬೇಕು.

**ಡಾ॥ ಕೆ. ಪೂರ್ಣಿಮಾ ಕೋಡೂರು**
'ಸಶಿಪ್ರ', ಆಯುರ್ವೇದಿಕ್ ಹೆಲ್ತ್‌ಝೋನ್, ಶ್ರೀದುರ್ಗಾ ಕಾಂಪ್ಲೆಕ್ಸ್,
ಸಾಗರ ರಸ್ತೆ, ರಿಪ್ಪನ್‌ಪೇಟೆ - ೫೭೭ ೪೨೬



# ಕೊಳೆಯುತ್ತಿರುವ ಕ್ರಿಕೆಟ್ ಜಗತ್ತು

**ಡಾ॥ ಬಿ. ಆರ್. ಮಂಜುನಾಥ್**

ಶ್ರೀಲಂಕಾದಲ್ಲಿ ನಡೆದ ಇಂಟರ್‌ನ್ಯಾಷನಲ್ ಕ್ರಿಕೆಟ್ ಕೌನ್ಸಿಲ್‌ನ ಒಂದು ದಿನ ಪಂದ್ಯಾವಳಿ ಸೆಪ್ಟೆಂಬರ್‌ನಲ್ಲಿ ಜರುಗಿತು. ಭಾರತದ ತಂಡ ಭಾಗವಹಿಸುತ್ತಿದೆಯೇ, ತಂಡದ ಆಟಗಾರರು ಯಾರಿರುತ್ತಾರೆ ಮುಂತಾದ ಪ್ರಶ್ನೆಗಳಿಗೆ ತೆರೆಯೇನೋ ಬಿದ್ದಿತು; ಆದರೆ ಅದಕ್ಕೆ ಮುಂಚೆ ಒಂದೂವರೆ ತಿಂಗಳಿನಲ್ಲಿ ಐಸಿಸಿ, ಭಾರತ ಕ್ರಿಕೆಟ್ ಮಂಡಳಿ ಹಾಗೂ ಆಟಗಾರರ ನಡುವೆ ಎದ್ದ ವಿವಾದದ ಧೂಳು ಮಾತ್ರ ನೆನಪಿನಿಂದ ದೂರವಾಗಿಲ್ಲ.

ಈ ವಿವಾದದ ಕೇಂದ್ರ ಬಿಂದು ಪ್ರಾಯೋಜಕತ್ವ-ಜಾಹಿರಾತು-ಹಣ. ಕ್ರಿಕೆಟ್ ನಿಜಕ್ಕೂ ಒಳ್ಳೆಯ ಆಟವೇ ? ಅದನ್ನು ಸುತ್ತುವರಿದ ಹುಚ್ಚು ನಿಜಕ್ಕೂ ಆರೋಗ್ಯಕರವೇ ? ಈ ಆಟವನ್ನು ಒಂದು ಉನ್ಮಾದಕರ ರಾಷ್ಟ್ರಾಭಿಮಾನಕ್ಕಾಗಿ ಬಳಸಿಕೊಳ್ಳಲಾಗುತ್ತಿಲ್ಲವೇ ? ಇವೇ ಮುಂತಾದ ಹಲವು ಮುಖ್ಯ ಪ್ರಶ್ನೆಗಳಿವೆ. ಅದನ್ನೆಲ್ಲಾ ಸದ್ಯಕ್ಕೆ ಪಕ್ಕಕ್ಕೆ ಇಟ್ಟರೂ, ಕ್ರಿಕೆಟ್ಟನ್ನು ಆವರಿಸಿರುವ ಹಣದ ಹಸಿವಿನ ಕುರಿತು, ಅದು ಆಟದ ಮೇಲೆ ಹಾಗೂ ಜನಜೀವನದ ಮೇಲೆ ಉಂಟುಮಾಡುವ ಪ್ರಭಾವದ ಕುರಿತಾದರೂ ನಾವು ಗಂಭೀರವಾಗಿ ಚಿಂತಿಸಲೇಬೇಕಾಗಿದೆ. ಹಿಂದೆ ಸಭ್ಯರ ಕ್ರೀಡೆ ಎಂದೇ ಕೊಚ್ಚಿಕೊಳ್ಳುತ್ತಿದ್ದ ಈ ಕ್ರೀಡೆಯ ವಕ್ತಾರರೂ ಸಹ ಈಚಿನ ಬೆಳವಣಿಗೆಗಳ ಕುರಿತು ಆತಂಕ ವ್ಯಕ್ತಪಡಿಸಲೇಬೇಕಾಗಿದೆ.

ಆಟಕ್ಕಿಂತ ಹಣದ ಕಾಟ ದೊಡ್ಡದಾಗಿದ್ದು ಹೇಗೆ ? ಆಟ ಜೂಜಾದದ್ದು ಹೇಗೆ ? ಕ್ರಿಕೆಟ್ ಮಂಡಳಿ ಹಾಗೂ ಆಟಗಾರರ ಮಧ್ಯದ ಬಿರುಕಿನ ಹಿನ್ನೆಲೆ ಏನು ? ಕ್ರಿಕೆಟ್ ಅಥವಾ ಯಾವುದೇ ಕ್ರೀಡೆಯ ಭವಿಷ್ಯವೇನು ? ಈ ಆಟಗಳು ನೀಡುತ್ತಿದ್ದ ಸಂತಸ, ಕೌತುಕಗಳನ್ನು ಉಳಿಸಿಕೊಳ್ಳಲು ಸಾಧ್ಯವೇ ?

## ಹಳೆಯ ಕಾಲದ ಕ್ರಿಕೆಟ್

ನಮ್ಮ ಕಾಲೇಜು ದಿನಗಳಲ್ಲಿ ಪಠ್ಯಪುಸ್ತಕದಲ್ಲಿ ರಣಜಿತ್‌ಸಿಂಗ್‌ಜಿ ಕುರಿತು ಒಂದು ಪಾಠವಿತ್ತು. ಅದರ ಹೆಸರು ಜಾಮ್ ಸಾಹಿಬ್ ಆಫ್ ನವಾನಗರ್ (ರಣಜಿಯವರ ಇನ್ನೊಂದು ಹೆಸರು) ಎಂದು. ಅದರ ಲೇಖಕ ಗಾರ್ಡಿನರ್ ಇರಬೇಕು. ಆ ಪ್ರಬಂಧ ಒಂದು ರೀತಿಯ ವಿರಾಮದ, ವಿಷಾದದ ಛಾಯೆಯಲ್ಲಿ ಆರಂಭವಾಗುತ್ತದೆ: 'ಕ್ರಿಕೆಟ್ ಆಡುವ ಋತು ಬಂದಿದೆ. ಆದರೆ ಇನ್ನು ರಣಜಿ ಆಡುವುದಿಲ್ಲ, ಅವರು ನಿವೃತ್ತರಾಗಿದ್ದಾರೆ.' ಪ್ರಬಂಧ ಮುಂದುವರೆದು ರಣಜಿಯವರ ಆಟವನ್ನು ವರ್ಣಿಸುತ್ತದೆ. ಅವರು ಸೂಕ್ಷ್ಮ ಸ್ಪರ್ಶ ಮಾತ್ರದಿಂದ ದಕ್ಕಿಸಿಕೊಳ್ಳುತ್ತಿದ್ದ ಲೇಟ್ ಕಟ್ ಮತ್ತು ಲೆಗ್‌ಗ್ಲಾನ್ಸ್‌ಗಳನ್ನು ಕಾವ್ಯವೆಂಬಂತೆ ಚಿತ್ರಿಸುತ್ತದೆ. ಆತನ ಆಟ ಒಂದು ಪೌರ್ವಾತ್ಯ ಜಾದೂ ಎಂಬುವ ವರ್ಣನೆ ಅಲ್ಲಿದೆ. ಇದೇ ಲಹರಿಯ ಇನ್ನೊಂದು ಬರೆವಣಿಗೆ, ಮುದಿ ಕ್ರಿಕೆಟಿಗನೊಬ್ಬ ಕಳೆದುಹೋದ ಯೌವನದ ದಿನಗಳನ್ನು ನೆನಪಿಸಿಕೊಳ್ಳುತ್ತಾ ಮತ್ತೆ ಆಟ ಆಡಲು ಹಂಬಲಿಸುವ ವಿವರಣೆ ಇರುವ ಒಂದು ಸುಂದರ ಪದ್ಯ. ಎಳೆ ಬಿಸಿಲು, ಹುಲ್ಲು ತುಂಬಿದ ಮೈದಾನ, ಹಾರಾಡುವ ಚಿಟ್ಟೆಗಳು, ಕ್ರಿಕೆಟ್ ಹಾಗೂ ಬಂಗಾರದಂತಹ ಆಲಸ್ಯ !

ಮೇಲ್ವರ್ಗದವರ, ಜಮೀನುದಾರರ ಆರಾಮ-ವಿರಾಮದ ಆಟವಾಗಿ ಬೆಳೆದು, ಇಂಗ್ಲೆಂಡಿನ ವಸಾಹತುಶಾಹಿಯ 'ಸೌಭಾಗ್ಯದ' ದಿನಗಳಲ್ಲಿ ಪ್ರಸಿದ್ಧಿಗೆ ಬಂದು, ವಸಾಹತುಗಳಿಗೂ ರಫ್ತಾದ ಈ ಕ್ರೀಡೆಯ ವಾತಾವರಣ ಅಂದು ಹಾಗಿತ್ತು. ಕೋಟು, ಹ್ಯಾಟು, ಪೈಪು ಈ ಎಲ್ಲಾ ಲಾಂಛನಗಳೂ ಇದ್ದ 'ಜಂಟಲ್‌ಮನ್'ಗಳು ಮೃದುವಾಗಿ ಚಪ್ಪಾಳೆ ಹೊಡೆಯುತ್ತಾ ಆಟ ನೋಡುತ್ತಿದ್ದ ಕಾಲ ಅದು – ಲಾರ್ಡ್ಸ್ ಮೈದಾನದಲ್ಲಿ ಲಾರ್ಡ್ಸ್‌ಗಳಾಗಿ. ಕೇವಲ ಎರಡು ದಶಕಗಳ ಹಿಂದೆ ಸಹ ಭಾರತದಲ್ಲಿ ಇದ್ದ ವಾತಾವರಣ ತುಂಬ ಭಿನ್ನವಾಗೇನೂ ಇರಲಿಲ್ಲ. ಆದರೆ ಸ್ಟೇಡಿಯಂಗಳು ತುಂಬಿರುತ್ತಿದ್ದವು, ಮಧ್ಯಮ ವರ್ಗದವರು ಹಾಗೂ ದುಡಿಯುವ ಜನ ಸಹ ದೊಡ್ಡ ಸಂಖ್ಯೆಯಲ್ಲಿಯೇ ನೆರೆದಿರುತ್ತಿದ್ದರು. ಆಟಗಾರರು ಅಗಾಧವಾದ ಶ್ರೀಮಂತರಾಗಿರುತ್ತಿರಲಿಲ್ಲ. ಆಟ ನಡೆಯುತ್ತಿದ್ದುದು ಜನ ಕೊಡುತ್ತಿದ್ದ ಹಣ – ಗೇಟ್ ಕಲೆಕ್ಷನ್ ಮೇಲೆ. ಅಂದಿನ ದಿನಗಳಲ್ಲಿ ೫ ದಿನದ ಟೆಸ್ಟ್‌ಗೆ ೨೫ ರೂಪಾಯಿ. ವಿಶ್ವವಿಖ್ಯಾತ ಆಟಗಾರರು ಪಡೆಯುತ್ತಿದ್ದ ಹಣ ಐದು ದಿನಕ್ಕೆ ೨೫೦ ರೂಪಾಯಿ ! ರೈಲು, ಬಸ್ಸು ಪ್ರಯಾಣವೇ ಹೆಚ್ಚು.

ಆಟಗಾರರು ಕ್ರೀಡಾ ಮನೋಭಾವವನ್ನು ಪ್ರದರ್ಶಿಸುತ್ತ ದೊಡ್ಡತನದಿಂದ ವರ್ತಿಸುತ್ತಿದ್ದುದು ಆಗೆಲ್ಲಾ ಸಾಮಾನ್ಯ. ಜ್ಯೂಬಿಲಿ ಟೆಸ್ಟ್‌ನಲ್ಲಿ ಅಂಪೈರ್ ಔಟ್ ಕೊಟ್ಟಿದ್ದ ಇಂಗ್ಲೆಂಡ್ ಆಟಗಾರ ಟೇಲರ್ ಔಟಾಗಿರಲಿಲ್ಲ ಎಂದು ಭಾರತದ ಕ್ಯಾಪ್ಟನ್ ವಿಶ್ವನಾಥ್ ಆತನನ್ನು ವಾಪಸ್ ಕರೆಸಿ ಆಡಿಸಿದರು ! ಅವನು ಸೆಂಚುರಿ ಬಾರಿಸಿ ಮ್ಯಾಚ್ ಗೆಲ್ಲಿಸಿದ. ಭಾರತ ಸೋತಿತು. ಆದರೆ ನಿಜವಾಗಿ ಗೆದ್ದುದು ಕ್ರಿಕೆಟ್‌ನ ಘನತೆ. ಮೆರೆದಿದ್ದು ವಿಶ್ವನಾಥ್ ಅವರ ಕ್ರೀಡಾ ಮನೋಭಾವ.

ಈಗ ಇದೆಲ್ಲಾ ಹಳೆಯ ಕಥೆ. ಕೆರಿ ಪ್ಯಾಕರ್ ಎಂಬ ಮಹಾಶಯ ಕ್ರಿಕೆಟ್‌ನ ಕಥೆಯನ್ನು ಬದಲಾಯಿಸಿ ಬರೆದ. ಹೊಸ ದಿಕ್ಕನ್ನೇ ತೋರಿಸಿದ. ಕ್ರಿಕೆಟ್‌ನ ಬಣ್ಣವನ್ನೇ ಬದಲಾಯಿಸಿದ. ವಿವಿಧ ದೇಶಗಳ ಕ್ರಿಕೆಟ್ ಮಂಡಳಿಗಳ ಅಧೀನದಲ್ಲಿದ್ದ ಆಟಗಾರರನ್ನು ಬಾಡಿಗೆಗೆ ತೆಗೆದುಕೊಂಡ ಆತ, ಅಧಿಕೃತ ಕ್ರಿಕೆಟ್‌ಗೆ ಪರ್ಯಾಯವಾಗಿ ಬೇರೊಂದು ಬಗೆಯ ಕ್ರಿಕೆಟ್‌ಅನ್ನು ಆಡಿಸಿದ ವಿಶ್ವಾಮಿತ್ರ. ಅವನೇ ಒಂದು ದಿನದ ಕ್ರಿಕೆಟ್‌ಅನ್ನು ವ್ಯಾಪಕವಾಗಿ ಮಾರುಕಟ್ಟೆಗೆ ತಂದವನು. ಬಣ್ಣದ ಬಟ್ಟೆಯ ಪಾಯಿಜಾಮಾ ಕ್ರಿಕೆಟ್‌ನ ಜನಕ ಅವನೇ. ಹಗಲು-ರಾತ್ರಿ ಹೊನಲು ಬೆಳಕಿನ ಪಂದ್ಯಗಳನ್ನು ತಂದವನೂ ಅವನೇ. ತತ್ಫಲವಾಗಿ ಕ್ರಿಕೆಟ್ ಆಟಗಾರರು ಕೋಟ್ಯಾಧಿಪತಿಗಳಾದರು. ಕೆಲವು ವರ್ಷಗಳಲ್ಲಿ ಅವನು ಬಂಡಾಯ ನಿಲ್ಲಿಸಿ ರಾಜಿ ಮಾಡಿಕೊಂಡನಾದರೂ ಅವನು ತಂದ ಬದಲಾವಣೆ ಶಾಶ್ವತವಾಯಿತು.

ಪ್ಯಾಕರ್ ಪ್ರಘಟನೆಯ ಅರ್ಥವಾದರೂ ಏನು ? ಮುಂದುವರೆದ ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಇಷ್ಟು ಹೊತ್ತಿಗಾಗಲೇ ಫುಟ್‌ಬಾಲ್, ಟೆನಿಸ್, ಬಾಕ್ಸಿಂಗ್ ಮೊದಲಾದ ಕ್ರೀಡೆಗಳನ್ನು ಅಪಾರವಾಗಿ ಹಣ ಮಾಡಲು, ಮಾರುಕಟ್ಟೆಯಲ್ಲಿ ಸರಕು ಮಾರಲು ಜಾಹಿರಾತಿಗಾಗಿ ಚೆನ್ನಾಗಿ ಉಪಯೋಗಿಸಿಕೊಂಡಾಗಿತ್ತು. ದೀರ್ಘಾವಧಿ ಆಟ ಹಾಗೂ ಆಲಸ್ಯದ ಪ್ರತೀಕವಾಗಿದ್ದ ಆಟದ ಅವಧಿಯನ್ನು ಮೊಟಕು ಮಾಡಿ ಚಿಕ್ಕದಾಗಿಸಿ, ಬಣ್ಣ ಹಚ್ಚಿ ಪ್ಯಾಕೇಜ್ ಮಾಡಿದಲ್ಲಿ ಎಂಥಾ ಲಾಭವಿದೆ ಎಂಬುದನ್ನು ಅರ್ಥಮಾಡಿಕೊಂಡ ಪ್ಯಾಕರ್ ಆಟದ ಸ್ವರೂಪವನ್ನೇ ಬದಲಾಯಿಸಿದ. ತಡವಾಗಿಯಾದರೂ ಮಾರುಕಟ್ಟೆಯ ದೀರ್ಘ ಕಬಂಧ ಬಾಹು ಕ್ರಿಕೆಟ್‌ಅನ್ನು ತನ್ನ ಧೃತರಾಷ್ಟ್ರಾಲಿಂಗನಕ್ಕೆ ಸೆಳೆದುಕೊಂಡಿತು. ಅಲ್ಲಿಂದಾಚೆಗೆ ಆಟವೇ ವ್ಯಾಪಾರೀಕರಣಗೊಂಡು ವಿರೂಪಗೊಂಡು ಎತ್ತೆತ್ತಲೋ ಉರುಳುತ್ತಿದೆ. ಈ ನಿಟ್ಟಿನಲ್ಲಿ ಟಿ. ವಿ. ಚಾನಲ್‌ಗಳಲ್ಲಿ ಆಟದ ವ್ಯಾಪಕ ಪ್ರಸಾರ ಹಾಗೂ ವೀಕ್ಷಣೆಗಳು ಮಹತ್ವದ ಪಾತ್ರ ವಹಿಸಿದವು.

## ಕುರುಡು ಕಾಂಚಾಣ

ಕುರುಡು ಕಾಂಚಾಣದ ಸಂಮೋಹಿನಿ ನರ್ತನಕ್ಕೆ ಕ್ರಿಕೆಟ್ ಮರುಳಾಗುತ್ತಿದ್ದಂತೆ ಆಟಗಾರರ ಬ್ಯಾಟು, ಉಡುಪು, ಅಂಗಾಂಗಗಳೆಲ್ಲಾ ಮಾರಾಟವಾಗತೊಡಗಿದುವು. ಮೋಟರ್‌ಬೈಕ್, ಟೂತ್‌ಪೇಸ್ಟ್, ಕಾಫಿ ಎಲ್ಲವನ್ನೂ ಮಾರುವ ಕೆಲಸಕ್ಕೆ ಅವರು ಇಳಿಯಬೇಕಾಯಿತು. ಇದಲ್ಲದೆ ಅಭಿರುಚಿ ರಹಿತ, ಅಷ್ಟೇಕೆ ಅಸಭ್ಯ ಜಾಹಿರಾತುಗಳಲ್ಲಿ ಕಾಣಿಸಿಕೊಳ್ಳುತ್ತಾ ಆಟಗಾರರು ಕೂತುಕೊ ಎಂದರೆ ಕೂರುವ, ಕುಣಿ ಎಂದರೆ ಎಗರಾಡುವ, ನಗು ಎಂದರೆ ಹಲ್ಲುಗಿಂಜುವ ಗೊಂಬೆಗಳಾದರು. ಬೃಹತ್ ಬಂಡವಾಳದ ಗುಲಾಮರಾದರು. 'ಖಂಡವಿದೆಕೋ ಮಾಂಸವಿದೆಕೋ' ಎಂದು ಹಣದ ಥೈಲಿಗಳಿಗೆ ತಮ್ಮನ್ನೇ ಮಾರಿಕೊಂಡರು.

ಕ್ರಿಕೆಟ್ ಮೈದಾನ ಅಂಗುಲ ಅಂಗುಲವೂ ಸಹ ಹರಾಜಾಯಿತು. ಸ್ಕೋರ್ ಬೋರ್ಡ್, ವಿಕೆಟ್, ಮೈದಾನದ ಹುಲ್ಲು ಎಲ್ಲವೂ ಪೆಪ್ಸಿ, ಕೋಲಾ ಕಂಪೆನಿಗಳಿಗೆ ಸರಕುಗಳಾದವು. ಕ್ರಿಕೆಟ್ ಹೀಗೆ ಚಿನ್ನದ ತತ್ತಿ ಇಡಬಲ್ಲ ಕೋಳಿ ಎಂಬುದು ಗೊತ್ತಾದೊಡನೆ ಮುತ್ತಯ್ಯ, ದಾಲ್ಮಿಯಾರಂಥ ಉದ್ಯಮಪತಿಗಳು, ಸುಟ್ಟಕೋಳಿ ಹಾರಿಸಬಲ್ಲ ಖದೀಮರು ಈ ಕ್ಷೇತ್ರವನ್ನು ಪ್ರವೇಶಿಸಿದರು. ಜೂಜುಕೋರರು ಮೈದಾನವನ್ನು ಸುತ್ತುವರಿದರು. ಆಟಗಾರರು 'ಕುದುರೆಗಳಾದರು.' ಕ್ರಿಕೆಟ್‌ಗೆ 'ಮ್ಯಾಚ್ ಫಿಕ್ಸಿಂಗ್' ಎಂಬ ಕಳಂಕ ಅಂಟಿಕೊಂಡಿತು.

ಒಂದು ಆಟವನ್ನು ಪರಮ ಧ್ಯೇಯವನ್ನಾಗಿ ಪರಿಗಣಿಸಿ ಅದಕ್ಕಾಗಿ ಸರ್ವಸ್ವವನ್ನೂ ಧಾರೆಯೆರೆದು ಕೊನೆಗಾಲದಲ್ಲಿ ಬೀದಿ ಪಾಲಾದರೂ ಸಂತಸ, ಸಂತೃಪ್ತಿ ಪಡೆದ ಆಟಗಾರರ ಕಾಲವೊಂದಿತ್ತು. ಅವರಿಗೆ ಆಟ ಒಂದು ಮಿಷನ್ ! ಅವರ ಸಮರ್ಪಣೆ ಎಲ್ಲರ ಹೃದಯ ಗೆಲ್ಲುತ್ತಿತ್ತು. ಆದರೆ ಲಾಭಕೋರರ ದೆಸೆಯಿಂದ ಈಗ ಇವೆಲ್ಲವೂ ಗತಕಾಲಕ್ಕೆ ಸೇರಿಹೋಗಿವೆ. 'ಮ್ಯಾಚ್ ಫಿಕ್ಸಿಂಗ್' ಅಂತಹ ವ್ಯಾಧಿಗಳು ಅಂದಿರಲಿಲ್ಲ, ಈಗ ಎಲ್ಲೆಡೆ ರಾರಾಜಿಸುತ್ತಿದೆ. ಈ ಹಿನ್ನೆಲೆಯಲ್ಲೇ ಈಗ ಕ್ರಿಕೆಟ್ ಜಗತ್ತನ್ನು ಕಾಡುತ್ತಿರುವ ಹೊಸ ವಿವಾದ ಸೃಷ್ಟಿಯಾದದ್ದು.

**ಹೊಸ ಜಗಳ**

ಆದಷ್ಟೂ ಹಣವನ್ನು ಆದಷ್ಟೂ ಬೇಗ ಬಾಚಿಕೊಳ್ಳಬೇಕೆಂಬ ದುರಾಸೆಯಿಂದ ಐ.ಸಿ.ಸಿ. ಕೆಲವು ವರ್ಷಗಳ ಹಿಂದೆಯೇ ೨೦೦೩ ಮತ್ತು ೨೦೦೭ರ 'ವಿಶ್ವಕಪ್ ಪ್ರಸಾರದ ಹಕ್ಕು'ಗಳನ್ನು ಮಾರಿಬಿಟ್ಟಿತು. ಎಂಟು-ಹತ್ತು ವರ್ಷಗಳ ಮುಂಚೆಯೇ ಹೀಗೆ ಹಕ್ಕುಗಳನ್ನು ಹರಾಜು ಮಾಡುವುದು ಇಲ್ಲಿಯವರೆಗೂ ಕಂಡು ಕೇಳರಿಯದಿದ್ದ ಪರಿಪಾಠ. ಇದರ ಒಟ್ಟು ಮೊತ್ತ ರೂ. ೨,೭೫೦ ಕೋಟಿ.



ಇದರೊಂದಿಗೆ ಐ.ಸಿ.ಸಿ. ತನ್ನ ಸದಸ್ಯ ರಾಷ್ಟ್ರ ಮಂಡಳಿಗಳೆಲ್ಲಾ ಕರಾರಿಗೆ ಸಹಿ ಹಾಕಬೇಕೆಂದೂ ವಿಧಿಸಿತು. ಈ ಕರಾರಿನ ಒಂದು ವಿಧಿಯೇ ವಿವಾದಾಸ್ಪದವಾದ ಆ್ಯಂಬುಶ್ ಕ್ಲಾಸ್. ಇದರ ಅನ್ವಯ ಇತ್ತೀಚೆಗೆ ನಡೆದ ಐ.ಸಿ.ಸಿ. ಟೂರ್ನಮೆಂಟ್‌ನ ಸಂದರ್ಭದಲ್ಲಿ ಟೂರ್ನಿಗೆ ಮುಂಚೆ ಒಂದು ತಿಂಗಳು, ಟೂರ್ನಿಯ ಅವಧಿ ಹಾಗೂ ನಂತರದ ಒಂದು ತಿಂಗಳ ಕಾಲ ಆಟಗಾರರು ಟೂರ್ನಿಯ ಪ್ರಾಯೋಜಕರನ್ನುಳಿದು ಇತರರ ಬ್ರ್ಯಾಂಡ್‌ಗಳ ಲಾಂಛನಗಳನ್ನು ಧರಿಸಬಾರದು. ಕಾರಣವೇನು ? ೧೯೯೬ರ ಟೂರ್ನಿಯನ್ನು ಕೋಕಕೋಲಾ ಅಪಾರ ಹಣ ಖರ್ಚು ಮಾಡಿ ಪ್ರಾಯೋಜಿಸಿತ್ತು. ಆದರೆ 'ದೇರ್ ಇಸ್ ನಥಿಂಗ್ ಅಫಿಶಿಯಲ್ ಅಬೌಟ್ ಇಟ್' ಎನ್ನುವ ಘೋಷಣೆಯಡಿಯಲ್ಲಿ ಪ್ರಚಾರ ಮಾಡಿದ ಪೆಪ್ಸಿಕೋಲಾ ಅಧಿಕೃತ ಪ್ರಾಯೋಜಕರನ್ನು ಜಾಹಿರಾತು ಆಕರ್ಷಣೆಯಲ್ಲಿ ಸೋಲಿಸಿತು. ಆದ್ದರಿಂದ ಅಧಿಕೃತ ಪ್ರಾಯೋಜಕರ ಹಕ್ಕನ್ನು ಉಳಿಸಿಕೊಳ್ಳಲು ಈ ಆ್ಯಂಬುಶ್ ಕ್ಲಾಸ್‌ಅನ್ನು ಸೇರಿಸಲಾಗಿದೆ ಎಂಬುದು ಐ.ಸಿ.ಸಿ.ಯ ವಾದ. ಇದರಲ್ಲೆಲ್ಲೋ 'ಅನ್‌ಅಫಿಶಿಯಲ್' ಆದ ಎಷ್ಟೋ ಕರಾಮತ್ತುಗಳು ಅಡಗಿವೆಯೆಂಬ ಗುಮಾನಿ ಬಂದರೆ ಆಶ್ಚರ್ಯವೇನಲ್ಲ. ಇದನ್ನು ಒಪ್ಪದ ಭಾರತದ ಆಟಗಾರರು, ''ಐಸಿಸಿ ಹಾಗೂ ಭಾರತ ಕ್ರಿಕೆಟ್ ಮಂಡಳಿಯ ಮಧ್ಯದ ಈ ಒಪ್ಪಂದವನ್ನು ನಮಗೆ ತಿಳಿಸಲೇ ಇಲ್ಲ. ನಾವು ಬೇರೆ ಪ್ರಾಯೋಜಕರಿಂದ ಹಣ ಪಡೆದು ಈಗಾಗಲೇ ಕರಾರಿಗೆ ಸಹಿ ಹಾಕಿಬಿಟ್ಟಿದ್ದೇವೆ. ಈಗ ಕಡೇ ಘಳಿಗೆಯಲ್ಲಿ ಒಪ್ಪಂದ ಮುರಿದರೆ ನಾವು ಅವರಿಗೆ ಅಪಾರ ಹಣವನ್ನು ವಾಪಸ್ ಮಾಡಬೇಕಾಗುತ್ತದೆ. ಅಲ್ಲದೆ ಕೊನೆಯಿಲ್ಲದ ಕೋರ್ಟು ದಾವೆಗಳಿಗೆ ಬಲಿಯಾಗಬೇಕಾಗುತ್ತದೆ'' ಎಂದು ತಕರಾರು ತೆಗೆದರು.

ಈ ಆಟಗಾರರಾದರೋ ಒಬ್ಬೊಬ್ಬರೂ ಕೋಟ್ಯಾಧಿಪತಿಗಳು. ವರ್ಷಕ್ಕೆ ಒಂದೂವರೆ ಕೋಟಿ ಹಣದಷ್ಟು ವರಮಾನವನ್ನು ಅವರಲ್ಲೊಬ್ಬನಿಗೆ ವರ್ಲ್ಡ್‌ಟೆಲ್ ಎಂಬ ಸಂಸ್ಥೆ ಖಾತ್ರಿಪಡಿಸಿದೆ. ಒಂದೊಂದು ಎಂಡಾರ್ಸ್‌ಮೆಂಟ್ ಮಾಡಿದರೆ ಸಚಿನ್‌ಗೆ ಒಂದೊಂದು ಕೋಟಿ ಹಣ ಬರುತ್ತದೆ. ಈತ ಅಡಿದಾಸ್, ಬ್ರಿಟಾನಿಯಾ, ಫಿಯಟ್, ಸಿಯೆಟ್, ಎಂ.ಆರ್.ಎಫ್, ಪೆಪ್ಸಿ, ಟಿ.ವಿ.ಎಸ್, ಬೂಸ್ಟ್, ವೀಸಾ ಕಾರ್ಡ್ ಮುಂತಾದವುಗಳಿಗೆ ಸಹಿ ಹಾಕಿದ್ದಾನೆ. ಈತನ ವಾರ್ಷಿಕ ಜಾಹಿರಾತು ಆದಾಯ ಪ್ರಾಯಶಃ ೩೦ ಕೋಟಿ. ಗಂಗೂಲಿ ಒಂದು ಎಂಡಾರ್ಸ್‌ಮೆಂಟ್‌ಗೆ ೧.೭೫ ಕೋಟಿ ತೆಗೆದುಕೊಳ್ಳುತ್ತಾ ಹಲವಾರು ಕಂಪೆನಿಗಳಿಗೆ ಸಹಿ ಹಾಕಿದ್ದಾನೆ. ಈತನ ವಾರ್ಷಿಕ ಆದಾಯ ಸರಾಸರಿ ೧೫ ಕೋಟಿ. ವರಮಾನ ತೆರಿಗೆ ನೀಡಿಲ್ಲವೆಂಬ ಆಪಾದನೆ ಆತನ ಮೇಲಿದೆ. ಈತನ ಹಿಂದೆ ದ್ರಾವಿಡ್, ಯುವರಾಜ್, ಸೆಹ್‌ವಾಗ್ ಮುಂತಾದವರ ಪಡೆಯೇ ಇದೆ.

ಮೂಲಭೂತ ಸಂಶೋಧನಾ ಕ್ಷೇತ್ರದಲ್ಲಿ ಕೆಲಸ ಮಾಡುವ ಒಬ್ಬ ಪ್ರತಿಭಾವಂತ, ಗಾಢವಾಗಿ ಶ್ರಮಿಸುವ ವಿಜ್ಞಾನಿ ಇಷ್ಟು ದೊಡ್ಡ ಮೊತ್ತದ ಹಣವನ್ನು ಎಂದಿಗೂ ನೋಡುವುದಿಲ್ಲ. ಸಾವಿರಾರು ಮಕ್ಕಳ ವ್ಯಕ್ತಿತ್ವವನ್ನು ರೂಪಿಸಿದ ಒಬ್ಬ ಮಹಾನ್ ಪ್ರಾಥಮಿಕ ಶಿಕ್ಷಕ ಇಂಥ ಮೊತ್ತವನ್ನು ಕನಸಿನಲ್ಲೂ ಕಾಣಲಾರ. ಅಷ್ಟೇಕೆ, ಹೆಚ್ಚು ಕಡಿಮೆ ಇದೇ ಪ್ರತಿಭಾ ಶ್ರೇಣಿಗೆ ಸೇರಿದ ಒಬ್ಬ ರಣಜಿ ಆಟಗಾರ ಅಥವಾ ಇದೀಗ ರಾಷ್ಟ್ರೀಯ ತಂಡದಿಂದ ಕೈಬಿಡಲಾದ ಆಟಗಾರ ಈ ಆದಾಯದ ನೂರನೇ ಒಂದು ಭಾಗವನ್ನೂ ಪಡೆಯುವುದಿಲ್ಲ. ಬಂಡವಾಳಶಾಹಿ ವ್ಯವಸ್ಥೆಯ ಘನಘೋರ ತಾರತಮ್ಯಗಳ ಪ್ರತೀಕವಾಗಿದೆ ಕ್ರಿಕೆಟ್.

ಇನ್ನು ಯಾವ ಪ್ರತಿಭೆಯೂ ಇಲ್ಲದೆ ಕೇವಲ ಗುಂಪುಗಾರಿಕೆ, ಚಾಣಾಕ್ಷತನಗಳಿಂದ ಕ್ರಿಕೆಟ್ ಮಂಡಳಿಗಳನ್ನು ತಮ್ಮ ವೈಯಕ್ತಿಕ ಜಾಹೀರಾಗಿ ಪರಿವರ್ತಿಸಿಕೊಂಡ ಅಧಿಕಾರಿಗಳಿದ್ದಾರೆ. ಇವರ್‍ಯಾರೂ ಕ್ರಿಕೆಟ್ ಆಡಿದವರು ಕೂಡ ಅಲ್ಲ. (ಆಟಗಾರರು ಅಧಿಕಾರಿಗಳಾದರೆ ಪರಿಸ್ಥಿತಿ ಸುಧಾರಿಸೀತು ಎಂಬ ಹುಂಬ ಭ್ರಮೆಯನ್ನೇನೂ ನಾವು ಇಟ್ಟುಕೊಳ್ಳಬೇಕಾಗಿಲ್ಲ). ಇವರು ವಿವಿಧ ಸ್ಟೇಡಿಯಂಗಳಿಗೆ ಮ್ಯಾಚುಗಳನ್ನು ನೀಡುವ ಅಧಿಕಾರ ಹೊಂದಿದ್ದಾರೆ, ಆಟಗಾರರ ಆಯ್ಕೆ ಸಮಿತಿಯನ್ನು ಇವರೇ ನೇಮಕ ಮಾಡುತ್ತಾರೆ, ಟಿ.ವಿ. ಪ್ರಸಾರದ ಹಕ್ಕನ್ನು ಇಷ್ಟಬಂದಂತೆ ಹಂಚುತ್ತಾರೆ. ಈ ಎಲ್ಲಾ ಪ್ರಕ್ರಿಯೆಯ ಅಂತರ್ಯದಲ್ಲಿ ಬಹುರಾಷ್ಟ್ರೀಯ ಕಂಪೆನಿಯ ಕಾಣದ ಕೈಗಳು ಕೆಲಸ ಮಾಡುತ್ತವೆ. ಈ ಬಾರಿಯ ಭಾರಿ ವಿವಾದದ ಹಿಂದೆ ಇರುವವರು ಯಾರು ಗೊತ್ತೇ ? ಐ.ಸಿ.ಸಿ.ಯೊಂದಿಗೆ ಪ್ರಾಯೋಜಕತ್ವದ ಕರಾರಿಗೆ ಸಹಿ ಹಾಕಿರುವ ಗ್ಲೋಬಲ್ ಕ್ರಿಕೆಟಿಂಗ್ ಕಾರ್ಪೊರೇಷನ್. ಇದರ ಮಾಲೀಕ ಕುಖ್ಯಾತ ಮಾಧ್ಯಮ ಸಾಮ್ರಾಟ ರುಪರ್ಟ್ ಮರ್ಡೋಕ್ ! ಇವರನ್ನು ಎದುರಿಸಿ ತಮ್ಮ ಆದಾಯ-ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಆಟಗಾರರು ಫೆಡರೇಷನ್ ಆಫ್ ಇಂಟರ್‌ನ್ಯಾಷನಲ್ ಕ್ರಿಕೆಟರ್ಸ್ ಅಸೋಸಿಯೇಷನ್ (ಫೈಕಾ) ಎಂಬ ಸಂಘವನ್ನು ರೂಪಿಸಿಕೊಂಡಿದ್ದಾರೆ.

ಈ ವಿವಾದಗಳು ಇಲ್ಲಿಗೇ ನಿಲ್ಲುವುದಿಲ್ಲ. ಇಷ್ಟೊಂದು ಹಣ ಶೇಖರಿಸಿಕೊಂಡ ಐ.ಸಿ.ಸಿ. ಒಡೆದುಹೋಗಬಹುದು. ಆಟಗಾರರ ಸಂಘವೇ (ಟೆನಿಸ್‌ನಲ್ಲಿ ಆದಂತೆ) ಪರ್ಯಾಯ ಟೂರ್ನಿಗಳನ್ನು ನಡೆಸುವ ಕಾಲ ಬರಬಹುದು. ಅದೇನೇ ಆದರೂ ಈ ಕೊಳೆತ, ಈ ದುರ್ವಾಸನೆ ನಿಲ್ಲುವುದಿಲ್ಲ. ಆದ್ದರಿಂದಲೇ ನಾವು ಈ ದುರ್ನಾತದ ಉಗಮ ಹಾಗೂ ಅಂತ್ಯವನ್ನು ವಿಶ್ಲೇಷಿಸಿಕೊಳ್ಳಬೇಕಾಗಿದೆ.

**ಕೊಳೆಯುತ್ತಿರುವ ಸಮಾಜದಲ್ಲಿ ಕ್ರೀಡೆಗಳೂ ಕೊಳೆಯುತ್ತವೆ**

ಕೊಳೆತವೇ ಪ್ರಮುಖ ಪ್ರಕ್ರಿಯೆಯಾಗಿ, ಎಲ್ಲ ಕ್ಷೇತ್ರಗಳೂ ಕೊಳೆಯುತ್ತಿರುವ ಪರಿಸರದಲ್ಲಿ ಕ್ರೀಡೆಯೊಂದೇ ಕೊಳೆಯದೆ ಉಳಿಯುವುದು ಹೇಗೆ ಸಾಧ್ಯ ?

ಕೆಲವು ನೂರು ವರ್ಷಗಳ ಹಿಂದೆ ಊಳಿಗಮಾನ್ಯ ಪದ್ಧತಿಯನ್ನು ಅಂದಿನ ಬಂಡವಾಳಶಾಹಿ ವರ್ಗ ಕಿತ್ತೊಗೆಯಿತು. ಅಂದು ಅದರ ಪಾತ್ರ ಪ್ರಗತಿಶೀಲ ಮಾತ್ರವಲ್ಲ ಕ್ರಾಂತಿಕಾರಿಯೂ ಹೌದು. ಆದ್ದರಿಂದಲೇ ಅದು ಸಂಕುಚಿತ ಪ್ರಾದೇಶಿಕವಾದ, ಅಂಧಶ್ರದ್ಧೆ ಎಲ್ಲದರ ವಿರುದ್ಧವೂ ಹೋರಾಡಿ ಮಾನವತಾವಾದಿ ಮೌಲ್ಯಗಳನ್ನು ಎತ್ತಿಹಿಡಿಯಿತು. ಆ ಯುಗದಲ್ಲಿ ಮೂಲಭೂತ ವಿಜ್ಞಾನ ಗಳಿಸಿದ ಸಾಧನೆ ಅಭೂತಪೂರ್ವವಾದದ್ದು. ಅಂದು ಕಲೆ-ಸಾಹಿತ್ಯ ಎಲ್ಲವೂ ನವೀನ ಪರಿಕಲ್ಪನೆಗಳನ್ನು ಹೊತ್ತುತಂದು ದೈತ್ಯ ಪ್ರತಿಭೆಗಳನ್ನು ಸೃಷ್ಟಿಸಿದವು.

ಆದರೆ ಇದೇ ಬಂಡವಾಳಶಾಹಿ ವರ್ಗ ಸಹ ಇನ್ನೊಂದು ಶೋಷಕ ವರ್ಗವೇ ಮತ್ತು ಅದು ಸ್ಥಾಪಿಸಿದ ಸಮಾಜ ಇನ್ನೊಂದು ಶೋಷಕ ವ್ಯವಸ್ಥೆಯೇ ಅಲ್ಲದೆ ಮತ್ತೇನು ? ಕಾಲ ಕಳೆದಂತೆ ಈ ವ್ಯವಸ್ಥೆ ವಿಪರೀತವಾದ ದ್ವಂದ್ವ-ಕ್ಲೇಶಗಳಿಂದ ಬಳಲಿದೆ. ಇಲ್ಲಿ 'ಬಲವಿದ್ದವನೇ

''ಶಿವಪೇಟೆ'' ಚಿಕ್ಕದಾದ ಒಂದು ಹಳ್ಳಿ. ಹೆಸರಿನಲ್ಲಿ ಪೇಟೆ ಇದ್ದು, ಪ್ರಮುಖ ಪೇಟೆಗಳಿಂದ ದೂರವಿದೆ. ೨೧ನೇ ಶತಮಾನದ ಈ ಸಂದರ್ಭದಲ್ಲಿ ಹೆಣ್ಣು ಮಗುವೊಂದು ಸೈಕಲ್ ಹೊಡೆಯುವುದು ಈ ಊರಿನಲ್ಲಿ ಒಂದು ಆಶ್ಚರ್ಯಕರ ಸಂಗತಿ. ಗಂಡು ಮಕ್ಳನ್ನ ಶಾಲೆಗೆ ಕಳಿಸ್ರಿ ಅಂದ್ರ – ''ನಾವೇನ್ ಹೊಲ್ಯಾರು, ಮಾದ್ರೇನ್ರೀ ಕರದ ನೌಕರಿ ಕೊಡಾಕ, ಕಲ್ತ್ ಏನ್ ಮಾಡೋದು ನಮ್ಜೊತೆ ಹೊಲಕ್ಕ ಬಂದ್ರ ನಾಕ್ ಕೆಲ್ಸ್ ಕಲ್ತ, ನಾಳೆ ಹೆಂಡ್ರು ಮಕ್ಳಿಗೆ ಕೂಳಾದ್ರು ಹಾಕ್ಯಾನು'' ಎನ್ನುವ ಸತ್ಯವ್ವಳ ಮಾತನ್ನು ಅಲ್ಲಗಳೆಯುವಂತಿಲ್ಲ... ಇಂತಹ ಪರಿಸ್ಥಿತಿಯಲ್ಲಿ ಈ ಊರಿನ ಹೆಣ್ಮಕ್ಳು ಸಾಲಿ ಕಲಿಯೋದಂದ್ರ ಸಿರಿವಂತರಿಗೆ ಮಾತ್ರ ಸೀಮಿತ. ''ಯಾಕಂದ್ರ ಅವರ ಮಕ್ಳು ದುಡ್ಯಾಕ ಹೋಗಾಂಗಿಲ್ಲ, ಮನ್ಯಾಗಿದ್ರ ಕಾಟ ಹೆಚ್ಚಂತ ಸಾಲಿಗೆ ಕಳಿಸ್ತಾರ'' ಎನ್ನೋ ಸಾರೆವ್ವನ ಮಾತು ಎಷ್ಟು ಸತ್ಯಾನೋ ನನಗಿನ್ನೂ ಅರ್ಥಾಗಿಲ್ಲ.

ಸ್ವಾತಂತ್ರ್ಯ ಸಿಕ್ಕು ಹತ್ತು ವರ್ಷದಾಗ ಸಾಧಿಸಬೇಕಾದ ಶೈಕ್ಷಣಿಕ ರಂಗದ ಪ್ರಗತಿ ೫೦ ವರ್ಷಗಳ ನಂತರವೂ ಹಾಗೇ ಇರುವುದು, ನಮ್ಮನ್ನಾಳುವ ದೊರೆಗಳಿಗೆ ಸರಿಕಾಣಲಿಲ್ಲ. ಜನರ ಹಿತಕ್ಕಾಗಿ ಹೊಸ ಯೋಜನೆಗಳನ್ನು ರೂಪಿಸ್ತಾ ಇದ್ರೇನೆ, ನಮ್ಮ ದೊರೆಗಳಿಗೆ ಹೊಟ್ಟೆ ತುಂಬಾ ಊಟ ಹೋಗೋದು. ಈ ದೇಶದ ಯಾವೊಂದು ಮಗೂನು ಅನಕ್ಷರಸ್ಥನಾಗಿರಬಾರದು, ಆಳುವ ದೊರೆಗಳ ಅಡಿಯಲ್ಲಿ ಮುದ್ರಿತವಾಗುವ ಪತ್ರಿಕೆಯನ್ನ ಎಲ್ರು ಓದಬೇಕು, ಈ ದೇಶವನ್ನು ಚೆನ್ನಾಗಿ ಅ(ಧ)ರ್ಥ ಮಾಡಿಕೊಳ್ಳಬೇಕು, ಅನ್ನೋ ಉದ್ದೇಶದಿಂದ ಕನ್ನಡ ನಾಡಿನ್ಯಾಗ ಚಿಣ್ಣರ ಅಂಗಳ ಜಾರಿಗೆ ಬಂತು.

## ವಾಸ್ತವ

ಈ ನಾಡಿನ ಲಕ್ಷಾಂತರ ಚಿಣ್ಣರ ಕಲಿಯಬೇಕೆನ್ನುವ ಕಮರಿದ ಕನಸುಗಳನ್ನು ಮತ್ತೆ ಚಿಗುರೊಡೆಸಿದ ಕಾರ್ಯಕ್ರಮ ''ಚಿಣ್ಣರ ಅಂಗಳ.'' ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಪುನಃ ಮುಖ್ಯವಾಹಿನಿಗೆ ತರಲು ಮುಕ್ತ ವಾತಾವರಣದ ಭೂಮಿಕೆ ಸಜ್ಜುಗೊಳಿಸುವ ಅಭೂತಪೂರ್ವ ಕಾರ್ಯಕ್ರಮವಿದು.

ನಮ್ಮ ಮಾಸ್ತರೆ ಮಲ್ಲಣ್ಣ ಎಸ್.ಡಿ.ಎಮ್.ಸಿ.ಯ ಅಧ್ಯಕ್ಷರಾದ ದ್ಯಾಮನಗೌಡ್ರ ಬಳಿಹೋಗಿ ''ಗೌಡ್ರ ಮತ್ತ ಮನ್ನೆ ಹೇಳಿದ್ನಲ್ಲರಿ ಬರೋ ಶನಿವಾರ ಶಾಲಾಭಿವೃದ್ಧಿ ಸಮಿತಿಯ ಸಭೆ ಕರೆದು, 'ಚಿಣ್ಣರ ಅಂಗಳಕ್ಕೆ' ಒಬ್ಬ ಸ್ವಯಂಸೇವಕ/ಕಿಯರನ್ನ ಆರಿಸಬೇಕಾಗೈತ್ರಿ'' ಅಂದ. ಸಾಲಿ ಬಿಟ್ಟ ಹತ್ತಾರು ಮಕ್ಕಳು, ದನಕಾಯಲು, ಮನೆ ಕೆಲ್ಸಕ್ಕೆ, ಹೊಲದ ಕೆಲ್ಸಕ್ಕಂತ ಈತನ ಮನೆಯಲ್ಲಿಯೇ ಇದ್ದು, ಇವರಿಗೆ ಸಂಬಳ ಕಡಿಮೆಯಾದ್ರೂ, ಮಾಡೋ ಕೆಲ್ಸ ಜಾಸ್ತಿ. ಗೌಡ್ರು ಕ್ಷಣಕಾಲ ಮೌನ ತಾಳಿ, ''ರೀ, ಮಾಸ್ತರ, ಇದನ್ನ ನಮ್ಮೂರಾಗ ಸಾಲಿ ಬಿಟ್ಟ ಮಕುಳು ಇಲ್ಲಾಂತ ಕ್ಯಾನ್ಸಲ್ ಮಾಡಾಕ ಬರಾಂಗಿಲ್ಲೇನ್ರೀ'' ಅಂದ್ರು. ''ಇಲ್ರಿ ಫೆಬ್ರುವರಿ ತಿಂಗಳಾದಾಗ ನಾವ ಆಗಲೇ ಗಣತಿ ಮಾಡಿ ಕಳ್ಸಿವಿ, ಈಗ ಏನು ಮಾಡಾಕ ಬರಾಂಗಿಲ್ಲರಿ'' ಎಂದು ಕ್ಷೀಣದನಿಯಲ್ಲಿ ಉಸಿರಿದರು ಮಾಸ್ತರು. ''ಆತು ಬೆಳಿಗ್ಗೆ ಬಂದು ಕಾಣ್ರಿ'' ಎಂದು ಅಪ್ಪಣೆ ಕೊಟ್ರು ಗೌಡ್ರು.

ಇತ್ತ ಗೌಡ್ರ ಮನೆಯಲ್ಲಿ ಸಭೆ ಸೇರಿದ ಜಮೀನ್ದಾರು ''ಎಲ್ಲಾ ಮಕುಳ ಸಾಲಿಗೆ ಹೋದ್ರ, ಎತ್ತು, ಎಮ್ಮಿ ಸೆಗಣಿನ ನಾವ್ ಬಳಿಬೇಕೇನು ? ಏನಾದ್ರು ಮಾಡಿ, ಈ ಸುಟ್ಟಾಗಿನ ಸಾಲಿ ನಮ್ಮೂರಿಗೆ ಬರ್ದಂಗ ನೋಡ್ಕೋಬೇಕು'' ಅಂತ ಸಂಬಂಧಿಸಿದ ಮಂತ್ರಿಗಳಿಗೆ ಫೋನ್ ಮಾಡಿ ಕೇಳಿದ್ರು, ಕೆಲ್ಸ ಆಗ್ಲಿಲ್ಲ.

ಈಗ್ಗೆ ಸರಿಯಾಗಿ ೨೦ ವರ್ಷಗಳ ಕೆಳಗೆ, ಈ ಊರಿಗೆ ಮಂಜೂರಾಗಿ ಬಂದ ಸರ್ಕಾರಿ ಪ್ರೌಢಶಾಲೆಗೆ ಸ್ಥಳ ನೀಡದೇ ಅದು ಬೇರೆ ಊರಿಗೆ ಸ್ಥಳಾಂತರಗೊಳ್ಳುವಲ್ಲಿ, ಇದೇ ಮಹಾಶಯರ ಕೈವಾಡವಿರುವುದನ್ನು ಇಂದಿಗೂ ಸಂದಿಗೊಂದಿಗಳಲ್ಲಿ ಆಗಾಗ ಗುಸುಗುಸು ಮಾತನಾಡುವುದನ್ನು ಕೇಳಿದವರೆಷ್ಟೋ ಜನ ಕಿವುಡರಂತಿದ್ದಾರೆ.

ಕೊನೆಗೂ 'ಚಿಣ್ಣರ ಅಂಗಳ' ಪ್ರಾರಂಭ ಆತು. ಮಕ್ಳನ್ನ ಸಾಲಿಗೆ ಕರಕೊಂಡು ಬರೋದ್ರ, ಜೊತೆಗೆ ಗೌಡ್ರ ಸೊಸಿ, ಸ್ವಯಂಸೇವಕಿ ಕಲಾವತಿಯ ಹಾಜರಿಗೆ ಸಹಿ ಮಾಡಿಸಿಕೊಂಡು ಬರುವುದು ಒಂದು ಅಲಿಖಿತ ಆದೇಶವಾಗಿತ್ತು.

ಮಾಸ್ತರ ಮನಿ ಮನಿಗೆ ತೆರಳಿ ಹಾಗೂ ಹೀಗೂ ಮಾಡಿ ಹತ್ತಾರು ಮಕ್ಳನ್ನ ಶಾಲಾಂಗಳಕ್ಕೆ ತರುವಲ್ಲಿ ಯಶಸ್ವಿಯಾದ. ೫೦ ದಿನದಾಗ ಕಂದಮ್ಮಗಳ ಕ್ರಿಯಾಶೀಲತೆಗೆ ಚಾಲನೆ ನೀಡಿದ. ಪ್ರತಿಭೆಗಳಿಗೆ ತಕ್ಕ ಪಾಠ ಕಲಿಸಿ, ನಾಕ ಜನರ ಬಾಯಾಗ ನಲಿದಾಡತಿದ್ದ ಚಿಣ್ಣರ ಅಂಗಳದ ಅವಧಿ ಮುಗೀತು.

ಪಕ್ಕದ ಸುರಪುರದಲ್ಲಿ ಉಸ್ತುವಾರಿ ಮಂತ್ರಿಗಳು ಪ್ರವೇಶೋತ್ಸವ ಕಾರ್ಯಕ್ರಮಕ್ಕೆ ಬರುವವರಿದ್ದಾರೆ. ಅಂದು ಶಿವಪೇಟೆಯ ಶಾಲೆಯಲ್ಲಿ ಹಬ್ಬದ ವಾತಾವರಣ. ತಳಿರು, ತೋರಣಗಳಿಂದ ಶಾಲೆ ಅಲಂಕೃತಗೊಂಡಿದೆ. ದುರ್ಗಮ್ಮ ಮತ್ತು ಸಂಗವ್ವ ಕೈಯಲ್ಲಿ ಹೂಬುಟ್ಟಿ ಹಿಡಿದು, ಹೂ ನಗೆಯೊಂದಿಗೆ ಶಾಲೆಯತ್ತ ಹೆಜ್ಜೆ ಹಾಕುತಿದ್ದಾರೆ. ಕೆಂಪು ದೀಪದ ಕಾರೊಂದು ಸಂಗವ್ವನನ್ನು ಸಮಾಧಿ ಮಾಡಿ ಮುನ್ನಡೆದಾಗ, ರೈತರೆಲ್ಲಾ ಹೊಲಕ್ಕೆ ತೆರಳುವ ಸಮಯ. ಕಾರನ್ನು ತಡೆಯುವಲ್ಲಿ ಜನ ಯಶಸ್ವಿಯಾದರೂ, ಪೊಲೀಸರ ಲಾಠಿಗೆ ಶರಣಾಗಲೇಬೇಕಾಯಿತು.

ಮರುದಿನದ ಪತ್ರಿಕೆಗೆ ಇದೊಂದು ಮಹತ್ವದ ಸುದ್ದಿಯಾಗಿತ್ತು. ಮುಖಪುಟದ ಬಾಕ್ಸ್‌ನಲ್ಲಿ ಅಚ್ಚಾದ ಸುದ್ದಿಯ ತಲೆಬರಹ ''ಮಂತ್ರಿಗಳ ಕಾರಿಗೆ ಹಳ್ಳಿಗರ ಮುತ್ತಿಗೆ; ಪೊಲೀಸರ ಸಮಯಪ್ರಜ್ಞೆಯಿಂದ ಮಂತ್ರಿಗಳ ಪಾರು, ಪ್ರವೇಶೋತ್ಸವದಲ್ಲಿ ಕೊಂಚ ವಿಳಂಬ.'' ಶಿವಪೇಟೆಯ ಜನರನ್ನು ದಂಗಾಗಿಸಿತ್ತು.

ರವಿ ಸೋ. ದೇವರಡ್ಡಿ
ಶಿಕ್ಷಕರು, ಹೊನ್ನ ಹಮ್ಮಿಗಿ - ೫೮೨ ೧೧೩

---

ಬದುಕಬೇಕು' ಎಂಬ ಸಿದ್ಧಾಂತ ವಿಜೃಂಭಿಸುತ್ತಿದೆ. ಸಾಮ್ರಾಜ್ಯಶಾಹಿಗಳ ಠೇಂಕಾರದ ಈ ಕಾಲದಲ್ಲಿ ಅಹಂಕಾರ, ವಿಕೃತ ವ್ಯಕ್ತಿವಾದ, ದುಷ್ಟ ಗುಂಪುಗಾರಿಕೆ, ಆತ್ಮಕೇಂದ್ರೀಯ ಗುಣ ಬದುಕಿನ ಎಲ್ಲ ವಲಯಗಳಲ್ಲಿ ಆಳವಾಗಿ ಬೇರುಬಿಟ್ಟಿವೆ. ಈ ಹೆಮ್ಮರಗಳು ನೀಡುವ ವಿಷದ ಫಲಗಳನ್ನು ಪ್ರತ್ಯೇಕವಾಗಿ ದೂಷಿಸಿ ಉಪಯೋಗವಿಲ್ಲ. ಇವುಗಳ ಪೋಷಣೆಗೆ ಕಾರಣವಾದ ಮಲಿನ ಪರಿಸರವನ್ನೇ ನಾವು ಪ್ರಶ್ನಿಸ ಬೇಕಾಗಿದೆ. ಇಲ್ಲವಾದರೆ ಸೈದ್ಧಾಂತಿಕ ಕ್ಷೇತ್ರದಲ್ಲಿ ನಮ್ಮ ಪರಿಸ್ಥಿತಿ, ಮರಳಿನಲ್ಲಿ ತಲೆಯನ್ನು ಹುದುಗಿಸಿ ವಾಸ್ತವತೆಯನ್ನು ಕಾಣಲಾಗದ ಉಷ್ಟ್ರಪಕ್ಷಿಯದಂತಾಗುತ್ತದೆ.

ಹೀಗಾಗಿ ಇಂದು ಕ್ರೀಡೆಯಲ್ಲಿನ ಕ್ರೀಡೆಯ ಗುಣ ನಷ್ಟವಾಯಿತೆಂದು, ಪರಿಸರ ನಾಶವಾಯಿತೆಂದು, ಕಲೆ ಸಾಹಿತ್ಯ ದಿಕ್ಚ್ಯುತಿಗೊಂಡಿವೆಯೆಂದು ದುಃಖಿಸುವವ ರೆಲ್ಲರೂ ಲಾಭವೇ ಪರಮೋದ್ದೇಶವಾಗಿ, 'ಕವಿ, ಸಂಗೀತ ಗಾರ, ಕಲಾವಿದ, ವೈದ್ಯ' ಎಲ್ಲರನ್ನೂ ವೈಭವೀಕೃತ ಕೂಲಿ-ಗುಲಾಮರನ್ನಾಗಿಸುವ ಈ ವ್ಯವಸ್ಥೆಯನ್ನು ಬದಲಾಯಿಸಲು ಭಾವುಕವಾಗಿ ಸ್ಪಂದಿಸಬೇಕಾಗಿದೆ. ಇಲ್ಲದಿದ್ದರೆ ಇಂಥ ದುಃಖ, ಆವೇಶ ಕೇವಲ ಗತಕಾಲದ ಭ್ರಾಮಕ ದಿನಗಳಲ್ಲಿ ನಮ್ಮನ್ನು ಮುಳುಗಿಸಿಬಿಡುತ್ತದೆ.

### ಕ್ರೀಡೆಯ ಸೌಂದರ್ಯ ಮರುಕಳಿಸಲಿ

ಎಲ್ಲ ಕ್ಷೇತ್ರಗಳಲ್ಲೂ ಪರಿಸ್ಥಿತಿಯನ್ನು ಒಂದಿಷ್ಟು ಸುಧಾ ರಿಸುವ ಯತ್ನ ನಡೆಯಲೇಬೇಕಾಗಿದೆ. ಅವು ಸಾಮೂಹಿಕ ಪ್ರಯತ್ನಗಳಾದಲ್ಲಿ ಅವುಗಳಿಂದ ತಾತ್ಕಾಲಿಕ ಹಾಗೂ ಶಾಶ್ವತ ಪರಿಹಾರಗಳಿಗೆ ಸಹಾಯವಾಗೇ ಆಗುತ್ತದೆ. ಆದರೆ ಲಾಭಕೋರ, ಕೊಳ್ಳುಬಾಕ ಸಾಮಾಜಿಕ ಪರಿಸ್ಥಿತಿ ಬದಲಾಗದಿದ್ದಲ್ಲಿ ನಾವು ಪ್ರೀತಿಸುವ ಎಲ್ಲವೂ ನಾಶವಾಗುತ್ತವೆ ಎಂಬುದನ್ನು ನಾವು ಮರೆಯಲಾಗದು.

ಕ್ರೀಡೆ ಮನುಷ್ಯನಿಗೆ ಶಾರೀರಿಕವಾಗಿ ಹಾಗೂ ಮಾನಸಿಕವಾಗಿ ಸಹಜವಾದ ಪ್ರವೃತ್ತಿ, ಚಟುವಟಿಕೆ. ಹುಟ್ಟಿದ ಮಗು ಬೆಳೆಯಲು ಕ್ರೀಡೆ ಅವಶ್ಯಕ ವ್ಯಾಯಾಮವನ್ನು ಒದಗಿಸುತ್ತದೆ. ಅದು ಕಲಿಕೆಯ ಮಾಧ್ಯಮವಾಗುತ್ತದೆ. ಎಳೆಯರಿಗೂ ಅದು ಸಹಜ ಜೀವನೋತ್ಸಾಹದ ಅಭಿವ್ಯಕ್ತಿ; ಲವಲವಿಕೆ, ಸಾಧನೆ, ತುಂಟತನ ಎಲ್ಲಕ್ಕೂ ಮೂಲಸೆಲೆ. ಮಾನವ ನಾಗರಿಕತೆಯ ಬೆಳವಣಿಗೆಯಲ್ಲಿ ಹಿಂದೆ ಒಮ್ಮೆ ಅದು ಬುಡಕಟ್ಟು ಜನಾಂಗಗಳಲ್ಲಿ, ವರ್ಗಸಮಾಜ ಹುಟ್ಟುವ ಮೊದಲು ಉತ್ಸಾಹ, ಉಲ್ಲಾಸ, ಮಾನವ ಸಾಧನೆ, ಒಗ್ಗಟ್ಟಿನ ಕ್ರಿಯೆ ಇವೆಲ್ಲವುಗಳನ್ನೂ ಪ್ರೇರೇಪಿಸುತ್ತಿತ್ತು. ಹಾಗಾಗಿ ಅದು ಆತ್ಮೀಯವಾಗಿತ್ತು, ಘನತೆಯಿಂದ ಕೂಡಿತ್ತು.

ಮಾನವನೇ ಮಾನವನ ಶೋಷಣೆಯನ್ನು ಆಳಿಸಿ ಹಾಕಿದ ಸಮಾಜದಲ್ಲಿ ಕ್ರೀಡೆಗೆ ಆ ಗುಣಗಳು ಮತ್ತೆ ಮರಳುತ್ತವೆ. ಅಲ್ಲಿ 'ತಾರೆ'ಯರಿರುವುದಿಲ್ಲ, ಆದರೆ ಎಲ್ಲ ಸಾಧನೆಯೂ ಮುಖ್ಯವೇ; ಎಲ್ಲರ ಸಾಧನೆಯೂ ಮಾನವ ಜನಾಂಗದ ಸಾಧನೆಯೇ. ಅಪಪ್ರಚಾರಗಳ ಮಹಾ ಪೂರವೇನೇ ಇರಲಿ, ಸೋವಿಯತ್ ಒಕ್ಕೂಟ ಕ್ರೀಡಾ ಜಗತ್ತಿನಲ್ಲಿ ಹಿಂದೆ ಮಾಡಿದ ಸಾಧನೆ ಆ ಕಾರಣಕ್ಕಾಗಿಯೇ ಗಮನಾರ್ಹ.

ಡಾ|| ಬಿ. ಆರ್. ಮಂಜುನಾಥ್
ಕರ್ನಾಟಕ ರಾಜ್ಯ ಸಮಿತಿ ಸದಸ್ಯ, ಎಸ್‌ಯುಸಿಐ-೩೧, ೩ನೇ ಕ್ರಾಸ್
ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ಸೋಡಾ ಗ್ಲಾಸಿಗೆ ಸೋಡ ಚೀಟಿ

ಡಾ|| ಕರವೀರಪ್ರಭು ಕ್ಯಾಲಕೊಂಡ

**ಸು**ರೇಶನಿಗೆ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಕಟ್ಟಿಟ್ಟ ಬುತ್ತಿ. 'ಪುಸ್ತಕದ ಹುಳ', 'ಕುಡುಮಿ' ಮಿತ್ರ ಮಂಡಳಿ ನೀಡಿದ ಬಿರುದು ಬಾವಲಿಗಳು. ಓದಿನ ಉಡುಗೊರೆಯಾಗಿ ದೊರೆತ ದಪ್ಪ ಗ್ಲಾಸಿನ ಕನ್ನಡಕದಿಂದಾಗಿ 'ಸೋಡಾ ಗ್ಲಾಸ್' ಎಂದು ಆಗದವರು ಚುಡಾಯಿಸುತ್ತಿದ್ದರು. ಸುರೇಶನ ಮನಸ್ಸಿಗೆ ಇದರಿಂದ ಬಹಳ ನೋವಾಗುತ್ತಿತ್ತು. ಆದರೂ ಬೇರೆ ಹಾದಿ ಇರದ್ದರಿಂದಾಗಿ ಸಹಿಸುವುದು ಅನಿವಾರ್ಯವಾಗಿತ್ತು. ನೇತ್ರ ಶಸ್ತ್ರಚಿಕಿತ್ಸಾ ಕ್ಷೇತ್ರದಲ್ಲಾದ ಕ್ರಾಂತಿ, ಸುರೇಶನಂತಹವರಿಗೆ ಶಾಂತಿ, ನೆಮ್ಮದಿಯನ್ನು ನೀಡಿತ್ತು. ಸುರೇಶ ಸೂಟಿಯ ನಂತರ ಶಾಲೆಗೆ ಬಂದಾಗ ಎಲ್ಲರಿಗೂ ಆಶ್ಚರ್ಯ. ಎಲ್ಲರೂ ಅವನನ್ನು ದಿಟ್ಟಿಸಿ ನೋಡುವವರೇ. ಅವನನ್ನು ಹಾಗೆ ದಿಟ್ಟಿಸಿ ನೋಡುವುದಕ್ಕೆ ಕಾರಣ ಇರದೇ ಇರಲಿಲ್ಲ. ಅವನ ಮುಖದ ಮೇಲೆ ಸೋಡಾ ಗ್ಲಾಸ್ ಇರಲಿಲ್ಲ. ಆಶ್ಚರ್ಯವೇನೆಂದರೆ ಅವನು ಉಳಿದ ವರಂತೆ ದೂರದ ವಸ್ತುಗಳನ್ನು ತ್ರಾಸಿಲ್ಲದೇ ನೋಡುತ್ತಿದ್ದ. ಚಾಚೂ ತಪ್ಪದೇ ಗುರುತಿಸುತ್ತಿದ್ದ. ಈ ಚಮತ್ಕಾರ ಎಲ್ಲರಲ್ಲೂ ಕುತೂಹಲ ಕೆರಳಿಸಿತ್ತು. ಈಗ ನಿಮ್ಮಲ್ಲೂ ಅಲ್ಲವೇ ?

'ಸರ್ವೇಂದ್ರಿಯಾಣಾಂ ನಯನಮ್ ಪ್ರಧಾನಂ'. ಪಂಚೇಂದ್ರಿಯಗಳಲ್ಲಿಯೇ ಕಣ್ಣು ಅಗ್ರಮಾನ್ಯ ದೇಹದ ನಾಯಕ. ಅತ್ಯಂತ ಸೂಕ್ಷ್ಮ ಅಂಗ. ಅದಕ್ಕೆ ಸ್ವಲ್ಪ ಗಾಯವಾದರೂ ಅಲಕ್ಷ್ಯ ಸಲ್ಲದು. ಸ್ವಂತ ವೈದ್ಯಕೀಯ ಸಲ್ಲದು. ಬೊಗಳೆ ವೈದ್ಯರ ಬೆಲ್ಲದ ಮಾತು ಬೇವಿಗಿಂತ ಕಹಿ. ಅವರ ಕೈಯಲ್ಲಿ ಚಿಕಿತ್ಸೆ ಪಡೆಯುವುದೆಂದರೆ ಆಪತ್ತಿಗೆ ಆಮಂತ್ರಣ ವಿತ್ತಂತೆ. ತಕ್ಷಣ ನೇತ್ರತಜ್ಞರಲ್ಲಿಗೆ ಹೋಗಿ ಶೀಘ್ರ ಚಿಕಿತ್ಸೆ ಪಡೆಯುವುದೊಳ್ಳೆಯದು ಎಂಬುದು ಎಲ್ಲರ ಅಭಿಪ್ರಾಯ. ಕಣ್ಣಿನ ಗಾಯ ವಾಸಿ ಮಾಡುವ ವೈದ್ಯರೇ ಗಾಯ ಮಾಡುವ ಕಾಲ ಈಗ ಬಂದಿದೆ ಎಂದರೆ ನೀವು ನಂಬುತ್ತೀರಾ ?

ಸಮೀಪದ ವಸ್ತುಗಳನ್ನು ಸರಿಯಾಗಿ ನೋಡುವ, ದೂರದ ವಸ್ತುಗಳನ್ನು ನೋಡಲು ಆಗದೇ ಇರುವ ಸಮೀಪ ದೃಷ್ಟಿ ಹೊಂದಿದ ವ್ಯಕ್ತಿಗಳ ದೃಷ್ಟಿದೋಷ ನಿವಾರಣೆಗೆ ಲಭ್ಯವಿದ್ದ ಸೌಲಭ್ಯಗಳೆಂದರೆ :

೧. ಮುಖವನ್ನು ಅವಲಕ್ಷಣಗೊಳಿಸಿದರೂ ದಪ್ಪ ಗಾಜಿನ ಕನ್ನಡಕ ಧರಿಸುವುದು

೨. ಸೂಕ್ತ ಚಿಕಿತ್ಸೆಯಾಗಿರದಿದ್ದರೂ, ಸ್ಪರ್ಶ ಮಸೂರಗಳನ್ನು ಬಳಸುವುದು.

ನೇತ್ರ ಶಸ್ತ್ರಚಿಕಿತ್ಸಾ ಕ್ಷೇತ್ರದಲ್ಲಾದ ಇತ್ತೀಚಿನ ಕ್ರಾಂತಿಯಿಂದ ನೇತ್ರತಜ್ಞರ ಬತ್ತಳಿಕೆಗೆ ಹೊಸ ''ವಜ್ರಾಯುಧ'' ಬಂದಿದೆ. ಸಮೀಪ ದೃಷ್ಟಿದೋಷದವರ ಪಾರದರ್ಶಕ ಪಟಲದ ಮೇಲೆ ವಜ್ರದ ಅಲಗಿನಿಂದ ಗೀರು ಹಾಕಿ ಕಣ್ಣು ಗುಡ್ಡೆಯ ಉದ್ದವನ್ನು ಕಡಿಮೆ ಮಾಡಿ ಚಪ್ಪಟೆ ಮಾಡುತ್ತಾರೆ. ಇಲ್ಲಿ ನೇತ್ರ ತಜ್ಞರು ಉತ್ಕೃಷ್ಟ ಇಂಜಿನಿಯರಾಗಿ ಕಾರ್ಯ ನಿರ್ವಹಿಸುತ್ತಾರೆ. ಇವರಿಗೆ ಕಣ್ಣು ಗುಡ್ಡೆಯ ಮೇಲೆ ಕಾಲುವೆ ಕೊರೆಯುವ ಕಲೆಯು ಕರಗತ ವಾಗಿರುತ್ತದೆ. ಕನ್ನಡಕವಿಲ್ಲದೇ ದೃಷ್ಟಿಯನ್ನು ಸಂಪಾದಿಸುವ ಮಾಂತ್ರಿಕತೆ ಇರುತ್ತದೆ.

**ಇತಿಹಾಸ**

ಸಮೀಪ ದೃಷ್ಟಿ ದೋಷವನ್ನು ಸಂಪೂರ್ಣ ನಿರ್ಮೂಲನ ಮಾಡುವ ಗುರಿಯಿಂದಾಗಿ ಈ ನವೀನ ಚಿಕಿತ್ಸಾ ಪದ್ಧತಿ ಜನ್ಮತಾಳಿತು. ಜಪಾನದ ಪ್ರೊ|| ಸಾಟೋ ೧೯೩೦ರಲ್ಲಿ ಈ ಪದ್ಧತಿಗೆ ನಾಂದಿ ಹಾಡಿದರು. ಸಾಕಷ್ಟು ಪ್ರೋತ್ಸಾಹ, ಪ್ರೇರಣೆ, ಪುರಸ್ಕಾರಗಳು ಸಿಗದೇ ಹೋದುದರ ಪ್ರಯುಕ್ತ ಆ ಕ್ಷೇತ್ರದಲ್ಲಿ ಸುಧಾರಣೆಯಾಗುವುದು ಒತ್ತಟ್ಟಿಗಿರಲಿ ಗಾಯ ವಾಸಿ ಮಾಡುವ ನಾವೇ ಗಾಯ ಮಾಡುವುದೆಂದರೆ, ''ಬೇಲಿಯೇ ಎದ್ದು ಹೊಲ ಮೇಯ್ದಂತಲ್ಲವೇ ?'' ಎಂಬ ವೃತ್ತಿ ಮಿತ್ರರ ಅಪಹಾಸ್ಯ, ಕಟು ಟೀಕೆ ಟಿಪ್ಪಣಿಗಳಿಗೆ ಸಾಟೋ ತುತ್ತಾದರು. ''ಆಯಗಾರರಿಗೆ ಆಯಗಾರ ಸೇರುವುದಿಲ್ಲ'' ಎಂಬ ಪರಿಸ್ಥಿತಿಯ ಪರಿಧಿಯಲ್ಲಿ ಸಾಟೊ ತತ್ತರಿಸಿದರು. ವಿಚಾರಧಾರೆಗಳಿಗೆ ಅಡ್ಡಿ ಆತಂಕಗಳು ಬಂದದ್ದರಿಂದ ಈ ವಿಧಾನ ವಿಕಾಸಗೊಳ್ಳಲೇ ಇಲ್ಲ. ಪರಿಣಾಮವಾಗಿ ೧೯೭೪ರವರೆಗೆ ಸಾಟೋರ ಸಂಶೋಧನೆ ಕತ್ತಲಲ್ಲಿ ಕೊಳೆಯಲಾರಂಭಿಸಿತು. ರಶಿಯಾದ ಡಾ|| ಫೆದೊರೊವ್ ೧೯೭೪ರಲ್ಲಿ ಪ್ರೊ|| ಸಾಟೋರ ಸಂಶೋಧನೆಯನ್ನು ಓದಿ ಪ್ರಭಾವಿತರಾಗಿ ಆ ಕ್ಷೇತ್ರದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದರು. ಸತತ ಸಂಶೋಧನೆ ಮಾಡಿ ಸುಧಾರಣೆ ತಂದರು. ತೊಡಕು ತೊಂದರೆಗಳಿಗೆ ಕಡಿವಾಣ ಹಾಕಿದರು. ವೃತ್ತಿ ಮಿತ್ರರ ಬಾಯಿಗೆ ಭದ್ರ ಬೀಗ ಹಾಕುವಷ್ಟು ಬದಲಾವಣೆ ತಂದು ತಪ್ಪ ಗರಡಿಯಲ್ಲಿ ಆಸಕ್ತಿಯಿರುವವರಿಗೆಲ್ಲರಿಗೂ ತರಬೇತಿ ನೀಡಿದರು. ಜಗತ್ತಿನ ಮೂಲೆಮೂಲೆಯ ವೈದ್ಯ ತಜ್ಞರ ಮನಗೆದ್ದರು. ಸುರೇಶನಂತಹ ಸಹಸ್ರ ಸಹಸ್ರ ಸಮೀಪ ದೃಷ್ಟಿ ದೋಷಿಗಳ ಸೋಡಾ ಗ್ಲಾಸುಗಳಿಗೆ ಸೋಡ ಚೀಟಿ ಕೊಟ್ಟರು.

**ಅರ್ಹ ಅಭ್ಯರ್ಥಿಗಳು**

ಸೋಡಾ ಗ್ಲಾಸಿನ ದಪ್ಪ ಕನ್ನಡಕ ಸ್ಪರ್ಶ ಮಸೂರಗಳು ಪ್ರಯೋಜನವಾಗದ ಒಂದು ಗುಂಪಿದೆ. ಇದಕ್ಕೆ ಕ್ರೀಡಾಪಟುಗಳು, ಸೈನ್ಯದಲ್ಲಿರುವವರು, ಪೊಲೀಸ್ ಕೆಲಸದಲ್ಲಿರುವವರು, ವಿಮಾನ ಚಾಲಕರು ಸೇರುತ್ತಾರೆ. ಇವರೆಲ್ಲರೂ 'ರೇಡಿಯಲ್ ಕೆರಟಾಟಮಿಗೆ' ಅರ್ಹ ಅಭ್ಯರ್ಥಿಗಳು. ಕಣ್ಣುಗುಡ್ಡೆಯ ಪಾರದರ್ಶಕ ಪಟಲದ ಮೇಲೆ ಯಾವಾಗಲೂ ಕಣ್ಣೀರು ತೆಳುವಾಗಿ ಹರಡಿಕೊಂಡು ದೃಷ್ಟಿಗೆ ಅಡ್ಡಿ ಆತಂಕ ಒಡ್ಡುವ ಸ್ಥಿತಿಯಲ್ಲಿರುವವರಿಗೆ ಈ ಶಸ್ತ್ರಚಿಕಿತ್ಸೆ ಫಲಕಾರಿಯಾಗುವುದು. ಎರಡು ಕಣ್ಣುಗಳಲ್ಲಿ ಬೇರೆ ಬೇರೆ ದೃಷ್ಟಿದೋಷ ಇರುವವರಿಗೂ ಇದು ತುಂಬಾ ಒಳ್ಳೆಯದು. ಅಂಥವರಿಗೆ ಎರಡು ಕಣ್ಣಿಗೂ ಒಮ್ಮೆಲೇ ಶಸ್ತ್ರ ಚಿಕಿತ್ಸೆ ಮಾಡುವುದಿಲ್ಲ. ಒಂದು ಕಣ್ಣಿನ ಶಸ್ತ್ರ ಚಿಕಿತ್ಸೆಗೂ ಇನ್ನೊಂದು ಕಣ್ಣಿನ ಶಸ್ತ್ರಚಿಕಿತ್ಸೆಗೂ ಕನಿಷ್ಠ ಮೂರು ತಿಂಗಳ ಅಂತರವಾದರೂ ಇರಬೇಕಾಗುತ್ತದೆ.

**ಪೂರ್ವ ಸಿದ್ಧತೆ**

ಮೊದಲು ಶಸ್ತ್ರಚಿಕಿತ್ಸೆಗೊಳಪಡುವ ವ್ಯಕ್ತಿಯ ದೇಹ ಪರೀಕ್ಷೆ ಮಾಡಿ ಶಸ್ತ್ರಚಿಕಿತ್ಸೆಗೆ ಅಡ್ಡಿಯಾಗುವ ಯಾವ ರೋಗಗಳೂ ಇಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಲಾಗುತ್ತದೆ. ರಕ್ತ ಪರೀಕ್ಷೆ, ಮೂತ್ರ ಪರೀಕ್ಷೆ ಮಾಡಿ ಮಧುಮೇಹ ಇಲ್ಲದಿರುವುದನ್ನು ನಿಶ್ಚಿತಗೊಳಿಸ ಲಾಗುತ್ತದೆ. ರಕ್ತದ ಒತ್ತಡದ ಬಗ್ಗೆ ಪರೀಕ್ಷಿಸಿ ಅದು ಅಕಸ್ಮಾತ್ ಕಂಡುಬಂದಲ್ಲಿ ಶಸ್ತ್ರ ಚಿಕಿತ್ಸಾ ಪೂರ್ವದಲ್ಲಿ ನಿಯಂತ್ರಣಕ್ಕೆ ತರಲಾಗುತ್ತದೆ. ಇದೊಂದು ಸಣ್ಣ ಸೂಕ್ಷ್ಮ ಶಸ್ತ್ರಚಿಕಿತ್ಸೆ ಎಂಬುದನ್ನು ರೋಗಿಗೆ ತಿಳಿಸಿ ಆತನ ಮಾನಸಿಕ ಒತ್ತಡ, ತುಮುಲಗಳನ್ನು ತಿಳಿಮಾಡಲಾಗುತ್ತದೆ.

**ಶಸ್ತ್ರಚಿಕಿತ್ಸೆ**

ಈ ಶಸ್ತ್ರಚಿಕಿತ್ಸೆಗೊಳಗಾಗುವ ವ್ಯಕ್ತಿಗೆ ಸಂಪೂರ್ಣ ಪ್ರಜ್ಞೆ ತಪ್ಪಿಸುವ ಅಗತ್ಯವೇನಿಲ್ಲ. ಕಣ್ಣಿನ ಭಾಗದಲ್ಲಿ ಮಾತ್ರ ಅರಿವಳಿಕೆ ಉಂಟುಮಾಡುವ ಔಷಧಿಯನ್ನು ಚುಚ್ಚುಮದ್ದಿನ ಮುಖಾಂತರ ಸ್ಥಳೀಯವಾಗಿ ಒಳಸರಿಕೆ ಮಾಡಿ ಇಲ್ಲವೆ ನಿದ್ದೆ ಬರುವ ಔಷಧಿಯನ್ನು ಶಿರೆಗಳ ಮೂಲಕ ನೀಡಿ ಶಸ್ತ್ರಚಿಕಿತ್ಸೆ ಮಾಡಬಹುದು. ಶಸ್ತ್ರಚಿಕಿತ್ಸೆ ಪ್ರಾರಂಭಿಸುವ ಮೊದಲು ಗಣಕೀಕೃತ ಅಲ್ಟ್ರಾ ಸೋನಿಕ್ ಪ್ಯಾಚೀಮೀಟರದ ಸಹಾಯದಿಂದ ಕಣ್ಣಿನ ಪಾರದರ್ಶಕ ಪಟಲದ ದಪ್ಪವನ್ನು ಅತ್ಯಂತ ನಿಖರವಾಗಿ ಅಳೆಯಲಾಗುವುದು. ಸಾಮಾನ್ಯವಾಗಿ ಉಳಿದ ಶಸ್ತ್ರಕ್ರಿಯೆಗಳಿಗೆ ಉಪಯೋಗಿಸುವ ಚಾಕುವನ್ನು ಇಲ್ಲಿ ಬಳಸದೇ, ಅತ್ಯಂತ ಹರಿತವಾದ ವಜ್ರದ ಅಲಗುಗಳನ್ನು ಹೊಂದಿದ, ಸೂಕ್ಷ್ಮ ಅಳತೆಮಾಪನ ಮೈಗೂಡಿಸಿಕೊಂಡ ವಿಶೇಷ ಚಾಕುಗಳನ್ನು ಬಳಸಲಾಗುತ್ತದೆ. ಶಸ್ತ್ರಚಿಕಿತ್ಸಾ ಸೂಕ್ಷ್ಮದರ್ಶಕವನ್ನು 'ರೇಡಿಯಲ್ ಕೆರಟಾಟಮಿ'ಗಾಗಿ ಉಪಯೋಗಿಸಲಾಗುತ್ತದೆ. ಮೊಟ್ಟಮೊದಲು ಕಣ್ಣಿನ ಪಾರದರ್ಶಕ ಪಟಲದ ಮಧ್ಯಭಾಗವನ್ನು ಪ್ರತ್ಯೇಕಿಸಲಾಗುತ್ತದೆ. ನಂತರ ಮಧ್ಯಭಾಗದಿಂದ ದಂಡೆಯ ವರೆಗೆ ಗೀರುಗಳನ್ನು ಹಾಕಿ ಗಾಯ ಮಾಡಲಾಗುತ್ತದೆ. ಆದರೆ ಗೀರುಗಳನ್ನು ಬೇಕಾದ ಹಾಗೆ ಹಾಕಲು ಬರುವುದಿಲ್ಲ. ಅದಕ್ಕಾಗಿ ಕ್ರಮಬದ್ಧವಾದ ಪೂರ್ವ ನಿಯೋಜಿತ ೮ರಿಂದ ೧೬ ಗೀರುಗಳನ್ನು ಹಾಕಲು ಬರುವ ಚಕ್ರಕಡ್ಡಿಗಳ ಗುರುತುಗಳನ್ನು ಎಳೆಯಲಾಗುತ್ತದೆ. ಸಮೀಪ ದೃಷ್ಟಿ ಅಗತ್ಯಕ್ಕನುಗುಣವಾಗಿ ಗೀರುಗಳನ್ನು ಹೆಚ್ಚು ಕಡಿಮೆ ಮಾಡಲಾಗುತ್ತದೆ. ಬೇಕಾದಷ್ಟು ಗಾಯಗಳನ್ನು ಮಾಡಿದ ನಂತರ ಸೂಕ್ತ ಔಷಧಗಳನ್ನು ಹಾಕಿ ಕಣ್ಣನ್ನು ಮುಚ್ಚಿ ಪಟ್ಟಿ ಹಾಕಲಾಗುತ್ತದೆ. ಆಪರೇಶನ್ ಮಾಡಿದ ೨೪ ಗಂಟೆಗಳ ನಂತರ ಪಟ್ಟಿ ಬಿಚ್ಚಿ ಕಣ್ಣು ಪರೀಕ್ಷೆ ಮಾಡಿ ಮತ್ತೆ ಪಟ್ಟಿ ಹಾಕುತ್ತಾರೆ.

ಶಸ್ತ್ರಚಿಕಿತ್ಸೆಯಲ್ಲಿ ಮಾಡಿದ ಗಾಯಗಳು ೭೨ ತಾಸುಗಳ ನಂತರ ಮಾಯಲು ಪ್ರಾರಂಭಿಸಿದರೂ ನಿರೀಕ್ಷಿತ ಪ್ರಯೋಜನಾತ್ಮಕ ಫಲಿತಾಂಶ ನೀಡಲು ೬ರಿಂದ ೮ ವಾರಗಳಾದರೂ ಬೇಕಾಗಬಹುದು. ಚಿಕಿತ್ಸೆಯಾದ ನಂತರ ಮೊದಲು ಕೆಲವು ದಿನಗಳವರೆಗೆ ಕಣ್ಣು ಕೆಂಪಗೆ ಉಳಿದು ನೀರು ತುಂಬಿರಬಹುದು. ಮೊದಲ ಪಾಕ್ಷಿಕಾವಧಿಯಲ್ಲಿ ಓದಲು ಬರೆಯಲು ಸ್ವಲ್ಪ ತೊಂದರೆ ಕಾಣಿಸಿಕೊಳ್ಳಬಹುದು. ಪ್ರಖರವಾದ ಬೆಳಕಿನಲ್ಲಿ ಕಣ್ಣು ತೆರೆಯುವುದು ತ್ರಾಸದಾಯಕವಾಗಬಹುದು. ಆದರೆ ಕಾಲಕ್ರಮೇಣ ಇವೆಲ್ಲಾ ಒಂದೊಂದೇ ಮಾಯವಾಗುವುವು. ಮೂರು ತಿಂಗಳ ನಂತರ ದೃಷ್ಟಿ ದೋಷದ ಪರೀಕ್ಷೆಗೊಳಪಡಿಸಿದಾಗ

ಮುಂದಿನ ಪುಟಕ್ಕೆ

# ಕನಕಪುರ ತಾಲ್ಲೂಕಿನ ಮೂರು ಪ್ರಾಚೀನ ಜೈನ ಸ್ಥಳಗಳು

**ಬೆಂ**ಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನಲ್ಲಿ ಇತ್ತೀಚಿಗೆ ಜೈನರ ಸಂಖ್ಯೆ ವಿರಳವಾಗಿದ್ದು ಪ್ರಾಚೀನ ಕಾಲದಲ್ಲಿದ್ದ ಜೈನರ ವಾಸಸ್ಥಾನ, ಆರಾಧನೆಗಳ ಕುರಿತು ಅವಶೇಷಗಳು ಪತ್ತೆಯಾಗುತ್ತಿವೆ. ಅವುಗಳಲ್ಲಿ ಪ್ರಮುಖವಾಗಿ ಮೂರು ಸ್ಥಳಗಳಲ್ಲಿ ಲಭ್ಯವಾದ ವಿಭಿನ್ನ ಪ್ರಾಚ್ಯಾವಶೇಷಗಳು ಕನಕಪುರ ತಾಲ್ಲೂಕಿನಲ್ಲಿ ಜೈನ ಧರ್ಮದ ಇತಿಹಾಸಕ್ಕೆ ಸಂಬಂಧಿಸಿದಂತೆ ಮಹತ್ವವಾದ ಹೊಸಬೆಳಕನ್ನು ಚೆಲ್ಲುತ್ತವೆ.

ಸಾತನೂರು ಹೋಬಳಿಯ ಹರಿಹರಗ್ರಾಮದಲ್ಲಿನ 'ಶ್ರವಣನ ಒಡ್ಡು' ಎಂಬ ಸ್ಥಳದಲ್ಲಿ ಎರಡೂವರೆ ಅಡಿ ಎತ್ತರದ ಜಿನತೀರ್ಥಂಕರನ ಪ್ರತಿಮೆಯೊಂದು ಇದ್ದು ಇದನ್ನು ಸ್ಥಳೀಯ ಗ್ರಾನೈಟ್ ಕಲ್ಲಿನಿಂದ ಕೆತ್ತಲಾಗಿದೆ. ತೀರ್ಥಂಕರನು ಧ್ಯಾನಾಸಕ್ತನಾಗಿ ಪೀಠವೊಂದರ ಮೇಲೆ ಕುಳಿತಿದ್ದಾನೆ. ಲಾಂಛನ ಇರುವ ಭಾಗ ಸವೆದು ಹೋಗಿದ್ದು ತೀರ್ಥಂಕರನನ್ನು ಖಚಿತವಾಗಿ ಗುರುತಿಸಲು ಕಷ್ಟವಾದರೂ ಸಹ, ಆದಿ ತೀರ್ಥಂಕರನ ಮೂರ್ತಿ ಇದಾಗಿತ್ತೆಂದು ಊಹಿಸಬಹುದಾಗಿದೆ. ಈ ಮೂರ್ತಿ ಇರುವ ಬಂಡೆಗೆ ಹೊಂದಿಕೊಂಡಂತೆ ಇಳಿಜಾರಿನಲ್ಲಿ ಮೂರು ಅಡಿ ಅಗಲ ಎರಡೂವರೆ ಅಡಿ ಉದ್ದದ ಪೀಠವೊಂದು ಪತ್ತೆಯಾಗಿದ್ದು ಇದನ್ನು ಸಹ ಗ್ರಾನೈಟ್ ಕಲ್ಲಿನಿಂದ ಕೆತ್ತಲಾಗಿದೆ. ಪೀಠದ ಮುಂಭಾಗದಲ್ಲಿ ೬ x ೬ ಅಂಗುಲದ ಚೌಕಾಕಾರದ ಕುಳಿ ಇದ್ದು ಧ್ಯಾನಾಸಕ್ತನಾಗಿ ಕುಳಿತಿರುವ ಜಿನ ತೀರ್ಥಂಕರನ ಪ್ರತಿಮೆಯನ್ನು ಇದರಲ್ಲಿ ಇಟ್ಟಿದ್ದರೆಂದು ತಿಳಿಯಬಹುದಾಗಿದೆ. ಪ್ರಾಚೀನತೆಯ ದೃಷ್ಟಿಯಿಂದ ಈ ಮೂರ್ತಿಯು ಕ್ರಿ. ಶ. ಹತ್ತನೆಯ ಶತಮಾನಕ್ಕೆ ಸೇರಿದುದಾಗಿದ್ದು, ಆ ಸಮಯದಲ್ಲಿ ಜೈನರು ಈ ಗ್ರಾಮದಲ್ಲಿ ಮತ್ತು ಪರಿಸರದಲ್ಲೆಲ್ಲಾ ವಾಸಿಸುತ್ತಿದ್ದರೆಂದು ನಿರ್ಧರಿಸಬಹುದಾಗಿದೆ.

ಇದೇ ಹೋಬಳಿಯ ವೀರೆಗೌಡನದೊಡ್ಡಿ ಎಂಬಲ್ಲಿನ 'ಬೋಳರೆ' ಎಂಬ ಸ್ಥಳದಲ್ಲಿ ಮತ್ತೊಂದು ಜಿನ ತೀರ್ಥಂಕರನ ಮೂರ್ತಿ ಕಂಡುಬಂದಿದ್ದು ಮೂರ್ತಿಯ ಬಹುಭಾಗ ನೆಲದಲ್ಲಿ ಹುದುಗಿಹೋಗಿದೆ. ನೆಲದಿಂದ ಮೇಲೆ ಎರಡು ಅಡಿ ಎತ್ತರ ಕಂಡುಬರುವ ಮೂರ್ತಿಯ ರುಂಡಭಾಗವನ್ನು ಕಡಿದುಹಾಕಲಾಗಿದೆ. ಈ ರುಂಡವನ್ನು ಬಳಿಯಲ್ಲಿರುವ ಲಿಂಗದ ಕೆರೆ ಎಂಬಲ್ಲಿ ಇಟ್ಟು ಪೂಜಿಸಲಾಗುತ್ತಿದೆ. ಲಾಂಛನವಿರುವ ಪೀಠದ ಭಾಗ ಮರೆಯಾಗಿರುವುದರಿಂದ ಇಲ್ಲಿಯೂ ಸಹ ತೀರ್ಥಂಕರನ ಗುರುತು



*ಹರಿಹರ ಗ್ರಾಮದ ಶ್ರವಣನ ಒಡ್ಡುವಿನ ಜಿನ ತೀರ್ಥಂಕರ*

ಪತ್ತೆ ಹಚ್ಚುವುದು ಕಷ್ಟವಾಗಿದೆ. ಧ್ಯಾನಾಸಕ್ತ ಮುದ್ರೆಯಲ್ಲಿ ಕುಳಿತಿರುವ ಈ ತೀರ್ಥಂಕರನ ಮೂರ್ತಿಯು ಎಪ್ಪತ್ತು ಅಡಿ ಅಗಲ ಇಪ್ಪತ್ತು ಅಡಿ ಉದ್ದದ ವಿಸ್ತಾರವಾದ ಮತ್ತು ಎತ್ತರವಾದ ವೇದಿಕೆಯ ಮೇಲೆ ಮೂವತ್ತೆರಡು ಕಲ್ಲುಕಂಬಗಳಿಂದ ರಚಿಸಲ್ಪಟ್ಟ ಕಲ್ಲು ಮಂಟಪದ ಒಳಗೆ ಒಂದು ಪಾರ್ಶ್ವದಲ್ಲಿ ಇದೆ. ಮೂರು ಪಾರ್ಶ್ವಗಳಲ್ಲಿ ರಚಿಸಿದ್ದ ಮಂಟಪದಲ್ಲಿ ಬೇರೆ ಮೂರ್ತಿಗಳೂ ಸಹ ಇದ್ದುವೆಂದು ಕಂಡುಬರುತ್ತವೆ. ಪ್ರಸ್ತುತ ಒಂಭತ್ತು ಕಂಬಗಳ ಆಸರೆಯಾಗುಳ್ಳ ಭಾಗದ ಮಂಟಪ ಮಾತ್ರ ಸುಸ್ಥಿತಿಯಲ್ಲಿದೆ. ಇನ್ನುಳಿದವು ಅಲ್ಲೇ ಚದುರಿ ಬಿದ್ದಿವೆ. ಇಲ್ಲಿಯೇ ಜನವಾಸಸ್ಥಾನದ, ಇಟ್ಟಿಗೆ ಮಡಕೆ ಚೂರುಗಳೆಲ್ಲಾ ಬಿದ್ದಿದ್ದು ಸುತ್ತಮುತ್ತಲಿನ ಜೈನರಿಗೆಲ್ಲಾ ಇದೊಂದು ಪ್ರಮುಖ ಜೈನ ಕೇಂದ್ರವಾಗಿತ್ತೆಂದು ನಿರ್ಧರಿಸಬಹುದು. ಪ್ರಾಚೀನತೆಯ ದೃಷ್ಟಿಯಿಂದ ಈ ಕೇಂದ್ರವು ಕ್ರಿ.ಶ. ಹತ್ತನೆಯ ಶತಮಾನದಲ್ಲಿಯೇ ಪ್ರಸಿದ್ಧವಾಗಿತ್ತೆಂದು ನಿರ್ಧರಿಸಬಹುದು.

ಇದೇ ತಾಲ್ಲೂಕಿನ ತಮಿಳುನಾಡಿನ ಮೇರೆಗೆ ಹೊಂದಿಕೊಂಡಿರುವ ಹುಣಸನಹಳ್ಳಿ ಬಳಿಯ ಬೆಟ್ಟವೊಂದರ ಮೇಲೆ ಜೈನ ಸನ್ಯಾಸಿಯ ಸಮಾಧಿಯೊಂದು ಕಂಡುಬಂದಿದೆ. ದಿಗಂಬರ ಸ್ವಾಮಿಯದು ಎಂದು ಜನತೆಯಿಂದ ಗುರುತಿಸಲ್ಪಡುವ ಈ ಸಮಾಧಿಯು ಮೂವತ್ತು ಅಡಿ ಎತ್ತರದ ಕಲ್ಲಾಸರೆಯ ಮೇಲೆ ಇದೆ. ಸ್ಥಳೀಯ ಜನತೆ ಇಂದಿಗೂ ಸಹ ಪೂಜ್ಯಭಾವನೆಯಿಂದ ಇದನ್ನು ಆರಾಧಿಸುತ್ತಾರೆ. ಈ ಕಲ್ಲಾಸರೆಯಲ್ಲಿಯೇ ದಿಗಂಬರ ಸ್ವಾಮಿಯಾದ ಜೈನ ಸನ್ಯಾಸಿಯು ವಾಸವಾಗಿದ್ದನೆಂದು, ಆತ ವಿಶ್ರಮಿಸಿಕೊಳ್ಳಲು ಕಲ್ಲಾಸರೆಯ ಛಾವಣಿಗೆ ಕಬ್ಬಿಣದ ಕೊಕ್ಕೆಯನ್ನು ಬಿಗಿದು ಕಟ್ಟಿದ್ದ ಉಯ್ಯಾಲೆಯ ಗುರುತುಗಳನ್ನು ಸ್ಥಳೀಯರು ಗುರುತಿಸುತ್ತಾರೆ. ಕ್ರಿ. ಶ. ಹದಿನೆಂಟನೆಯ ಶತಮಾನಕ್ಕೂ ಮೊದಲೇ ಇಲ್ಲಿ ವಾಸವಾಗಿದ್ದು ತನ್ನ ಅಂತ್ಯಜೀವನವನ್ನು ಇಲ್ಲಿಯೆ ಕಳೆದಿದ್ದಾನೆ, ಆದುದರಿಂದ ಈತನು ಓರ್ವ ಜನಪ್ರಿಯ ವ್ಯಕ್ತಿ ಆಗಿದ್ದನೆಂದು ನಿರ್ಧರಿಸಬಹುದು.

ಈಗ ದೊರೆತಿರುವ ಈ ಅವಶೇಷಗಳ ಜೊತೆಗೆ ಮತ್ತಷ್ಟು ಪ್ರಾಚ್ಯಾವಶೇಷಗಳು ಪತ್ತೆಯಾದರೆ ಈ ತಾಲ್ಲೂಕಿನ ಜೈನಧರ್ಮದ ಅಧ್ಯಯನಕ್ಕೆ ಸಹಕಾರಿಯಾದಂತಾಗುತ್ತದೆ.

ಚಿತ್ರ – ಲೇಖನ : **ಮುತ್ತುರಾಜು**
ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ
ರೋಶನಾಬಾದ್, ಹರಿದ್ವಾರ – ೨೪೯೪೦೨, ಉತ್ತರಾಂಚಲ

---

*ಹಿಂದಿನ ಪುಟದಿಂದ*

ಶಸ್ತ್ರಚಿಕಿತ್ಸೆಯ ಪರಿಣಾಮ ಸಂಪೂರ್ಣ ಗೊತ್ತಾಗುತ್ತದೆ.

**ಶಸ್ತ್ರಚಿಕಿತ್ಸೆಯ ವೈಶಿಷ್ಟ್ಯಗಳು**

೧. ೧೫ ವರ್ಷ ವಯೋಮಾನದವರಲ್ಲಿ, ಸಮೀಪ ದೃಷ್ಟಿದೋಷ ಹೊಂದಿದವರಿಗೆ ಶಸ್ತ್ರಚಿಕಿತ್ಸೆ ಮಾಡಲಾಗುವುದು.

೨. -೨ರಿಂದ -೮ ಡಯಾಪ್ಟರ ದೃಷ್ಟಿದೋಷವಿದ್ದವರಲ್ಲಿ ಶಸ್ತ್ರಚಿಕಿತ್ಸೆ ಅತ್ಯಂತ ಯಶಸ್ವಿಯೂ, ಪರಿಣಾಮಕಾರಿಯೂ ಆಗಿರುತ್ತದೆ. ೯ ಡಯಾಪ್ಟರ ಹಾಗೂ ಮೇಲ್ಪಟ್ಟ ದೃಷ್ಟಿದೋಷಗಳಲ್ಲಿ ದೃಷ್ಟಿ ಸೂಚಕವನ್ನು ಗಮನಾರ್ಹವಾಗಿ ಕಡಿಮೆ ಮಾಡಲು ಸಾಧ್ಯವಾಗಬಹುದು.

೩. ಇದೊಂದು ಹೊರ ರೋಗಿ ಶಸ್ತ್ರಚಿಕಿತ್ಸಾ ಪದ್ಧತಿಯಾಗಿರುವುದರಿಂದ ಆಸ್ಪತ್ರೆಯಲ್ಲಿ ಇರುವ ಅಗತ್ಯವಿಲ್ಲ. ಕಣ್ಣಿಗೆ ಪಟ್ಟಿ ಹಾಕಿಸಿಕೊಂಡು ಅಂದೇ ಮನೆಗೆ ಮರಳಬಹುದು.

**ದುಷ್ಪರಿಣಾಮಗಳು**

೧. ಜೇಪಿ ಶುದ್ಧೀಕರಣಕ್ಕೆ ಸಾಕಷ್ಟು ಕಾಳಜಿ ವಹಿಸಿದರೂ, ಶಸ್ತ್ರಚಿಕಿತ್ಸೆಯಲ್ಲಿ ಕಣ್ಣು ಗುಡ್ಡೆಯ ಪಾರದರ್ಶಕ ಪಟಲದ ಮೇಲೆ ಹಲವಾರು ಗಾಯಗಳನ್ನು ಮಾಡುವುದರಿಂದ ಸೋಂಕು ಸಂಭವಿಸುವ ಸಂಭವವನ್ನು ಸಂಪೂರ್ಣವಾಗಿ ತೊಡೆದುಹಾಕಲಾಗದು. ಹಾಗೆಯೇ ಪಾರದರ್ಶಕವನ್ನೂ ತೊಡೆದುಹಾಕಲು ಆಗುವುದಿಲ್ಲ. ಆದ್ದರಿಂದ ಪಾರದರ್ಶಕ ಪಟಲದುರಿತ ತಾರಕಸುತ್ತಿನುರಿತ, ಪಟಲದಲ್ಲಿ ಸೂಕ್ಷ್ಮ ರಂಧ್ರವುಂಟಾಗುವುದು, ಹೀಗೆ ಹಲವು ಸಮಸ್ಯೆಗಳು ಉದ್ಭವವಾಗಬಹುದು.

೨. ಎಷ್ಟೇ ಪ್ರಯತ್ನಪಟ್ಟರೂ ಕೆಲವೊಮ್ಮೆ ಶಸ್ತ್ರಚಿಕಿತ್ಸೆ ನಿರೀಕ್ಷಿಸಿದಷ್ಟು ಫಲಪ್ರಧಾನ ನೀಡದೇ ಇರಬಹುದು.

೩. ಒಮ್ಮೊಮ್ಮೆ ಶಸ್ತ್ರಚಿಕಿತ್ಸೆಯ ನಂತರ ನೇರವಾಗಿ ಬೆಳಕನ್ನು ನೋಡಲು ಕಣ್ಣಿಗೆ ಬಾಧೆಯುಂಟಾಗಬಹುದು. ಕಾಲಕ್ರಮೇಣ ಅದು ಮಾಯವಾಗಿ ಸಹಜಸ್ಥಿತಿ ಮುಟ್ಟುವ ಬದಲು ಅದೇ ಸ್ಥಿತಿ ಕೆಲವೊಮ್ಮೆ ಮುಂದುವರಿಯಬಹುದು.

ಈ ಶಸ್ತ್ರಚಿಕಿತ್ಸೆಗೆ ಅತ್ಯಾಧುನಿಕ ಉಪಕರಣಗಳು ಮತ್ತು ತಂತ್ರಜ್ಞಾನದ ಅಗತ್ಯವಿರುವುದರಿಂದ, ಪರದೇಶದಲ್ಲಿ ವೈದ್ಯರು ಈ ಚಿಕಿತ್ಸೆಯ ತರಬೇತಿ ಪಡೆಯಬೇಕಾಗಿರುವುದರಿಂದ, ಅನುಭವ ಶಸ್ತ್ರಚಿಕಿತ್ಸಾ ನೈಪುಣ್ಯತೆಯ ಮೇಲೆ ಅವಲಂಬಿತವಾಗಿರುವುದರಿಂದ ಇದರ ಸೌಲಭ್ಯ ನಮ್ಮ ದೇಶದಲ್ಲಿ ಕೆಲವೇ ಪಟ್ಟಣಗಳಲ್ಲಿ ಈಗೀಗ ಲಭ್ಯವಾಗಿದೆ. ವಿಶೇಷ ತರಬೇತಿ ವೈದ್ಯರ ತಂಡದ ಕೊರತೆಯಿರುವುದರಿಂದ ಈ ವಿಧಾನ ರಶಿಯಾದಲ್ಲಿ ಗಳಿಸಿರುವ ಜನಪ್ರಿಯತೆಯನ್ನು ಇಲ್ಲಿ ಪಡೆಯಲು ಇನ್ನೂ ಸಾಕಷ್ಟು ಕಾಲಾವಧಿ ಬೇಕು ಎಂಬುದರಲ್ಲಿ ಸಂಶಯವಿಲ್ಲ. ಇದರಲ್ಲಿ ಇನ್ನಷ್ಟು ಸುಧಾರಣೆಯಾಗಿ ಈಗಿರುವ ಅಲ್ಪಸ್ವಲ್ಪ ತೊಡಕು ತೊಂದರೆಗಳ ನಿವಾರಣೆಯಾಗಿ, ಕಡಿಮೆ ವೆಚ್ಚದಲ್ಲಿ ಬಡ ಭಾರತೀಯರೆಲ್ಲರಿಗೂ ಕೈಗೆಟಕುವಂತಾದರೆ ಸೋಡಾ ಗ್ಲಾಸಿನ ದಪ್ಪ ಕನ್ನಡಕದವರೂ ಸ್ಪರ್ಶ ಮಸೂರ ಧರಿಸುವವರು ತಮ್ಮ ಜೀವನದಲ್ಲಿ ಹೊಸ ಬೆಳಕನ್ನು ಕಾಣುವಂತಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

**ಡಾ|| ಕರವೀರಪ್ರಭು ಕ್ಯಾಲಕೊಂಡ**
ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ
ಬಾದಾಮಿ - ೫೮೭ ೨೦೧, ಬಾಗಲಕೋಟೆ ಜಿಲ್ಲೆ



# ಪುಸ್ತಕ ಪ್ರಿಯ ಶೇಷಗಿರಿ ಮಾಸ್ತರರು

ಶೇಷಗಿರಿ ಮಾಸ್ತರರ ಹೆಸರು ಕೇಳಿದಾಗ ಅವರ ಬಳಿ ಕಲಿತ ಸಾವಿರಾರು ವಿದ್ಯಾರ್ಥಿಗಳ, ಮತ್ತವರ ತಂದೆ-ತಾಯಿಯರ ಹಾಗೂ ಮಾಸ್ತರರ ಸಂಪರ್ಕಕ್ಕೆ ಬಂದ ಅನೇಕರ ಮುಖಗಳಲ್ಲಿ ಒಂದು ರೀತಿಯ ಪರಿಚಯದ, ಆತ್ಮೀಯತೆಯ ಮುಗುಳು ಅರಳುತ್ತದೆ ! ಇದಕ್ಕೆ ಮುಖ್ಯ ಕಾರಣ ಶೇಷಗಿರಿ ಮಾಸ್ತರರು ಬೆತ್ತ ಹಿಡಿದು ಮಕ್ಕಳನ್ನು ಬೆದರಿಸುವ 'ಶಿಕ್ಷಕ'ರಾಗಿರಲಿಲ್ಲ; ಮಕ್ಕಳಲ್ಲಿ ಓದುವ ಅಭಿರುಚಿಯನ್ನು ಬೆಳೆಸಲು ಸಹಾಯಕರಾದ ಪ್ರೀತಿಯ ಮಾಸ್ತರರಾಗಿದ್ದರು !

ಪುಸ್ತಕಪ್ರಿಯರಾದ ಶೇಷಗಿರಿಯವರು ಮುಖ್ಯೋಪಾಧ್ಯಾಯ ಹುದ್ದೆಯಿಂದ ನಿವೃತ್ತರಾಗಿದ್ದಾರೆ ಎಂದರೆ ನಂಬಲು ಸಾಧ್ಯವಾಗುವುದಿಲ್ಲ. ನಿವೃತ್ತಿಯ ನಂತರ ತಾನಾಯಿತು ತನ್ನ ಮನೆಯಾಯಿತು ಎಂದು ನಿಷ್ಕ್ರಿಯರಾಗಿರುವ ಪೈಕಿಯಲ್ಲ ಇವರು. ಈಗಲೂ ಅವರು ತಮ್ಮ ಇಡೀ ಚಟುವಟಿಕೆಯನ್ನು ಪುಸ್ತಕ ಸಂಗ್ರಹಿಸುವ, ಹಿರಿ-ಕಿರಿಯರಲ್ಲಿ ಓದುವ ಅಭಿರುಚಿ ಬೆಳೆಸುವ ಕಾಯಕದತ್ತ ಕ್ರಿಯಾಶೀಲಗೊಳಿಸಿದ್ದಾರೆ. ಸದ್ದು ಗದ್ದಲವಿಲ್ಲದೆ ಕನ್ನಡದ ನುಡಿ ಸೇವೆ ಮಾಡುತ್ತಿದ್ದಾರೆ.

ಇವರದು ಮೂರು ತಲೆಮಾರಿನ ಶಿಕ್ಷಕ ಕುಟುಂಬ. ಮೂಲತಃ ಅಜ್ಜಂಪುರದವರಾದ ಎ. ಎಸ್. ಶೇಷಗಿರಿಯವರ ತಂದೆ ಶಿಕ್ಷಕರಾಗಿದ್ದರು. ಶೇಷಗಿರಿಯವರ ವಿದ್ಯಾಭ್ಯಾಸ ಕಡೂರಿನಲ್ಲಿ ನಡೆಯಿತು. ಶಿಕ್ಷಕ ಹುದ್ದೆಯೂ ದೊರಕಿತು. ಮುಂದೆ ಒಂದೆರಡು ಕಡೆ ವರ್ಗವಾದರೂ ಕಡೂರು ವಾಸ ಖಾಯಂ ಆಯಿತು. ಅವರ ಪತ್ನಿ ಶ್ರೀಮತಿ ರತ್ನಮ್ಮ ಹೈಯರ್ ಪ್ರೈಮರಿ ಶಾಲಾ ಶಿಕ್ಷಕಿಯಾಗಿದ್ದಾರೆ. ಇವರ ಮಗ ಫಣಿರಾಜ್ ಪ್ರತಿಭಾವಂತ ವಿದ್ಯಾರ್ಥಿ. ಈಗ ಹೈಸ್ಕೂಲು ಶಿಕ್ಷಕರಾಗಿದ್ದಾರೆ. ಮಗಳು ಸ್ಮಿತಾರಾಣಿ.

ಈಗಂತೂ ಮಕ್ಕಳು, ಗೃಹಿಣಿಯರು ಟಿ.ವಿ. ಮುಂದೆ ಕುಳಿತೇ ತಮ್ಮ ಆಯುಷ್ಯ ತುಂಬಿಸುತ್ತಿದ್ದಾರೆ ಎಂಬ ಕಳವಳ ಅವರದು. ಪುಸ್ತಕ ಸಂಸ್ಕೃತಿ ಬೆಳೆಯಬೇಕಾದ ಈ ಸಂದರ್ಭದಲ್ಲಿ ಓದುಗರ ಸಂಖ್ಯೆ ಕಡಿಮೆಯಾಗುತ್ತಿರುವುದು ಒಳ್ಳೆಯ ಲಕ್ಷಣವಲ್ಲ. ಒಂದು ಭಾಷೆಯಾಗಿ ಕನ್ನಡ ಉಳಿಯಬೇಕಾದರೆ, ಮುಖ್ಯವಾಗಿ ಮಕ್ಕಳಲ್ಲಿ ಓದುವ ಆಸಕ್ತಿಯನ್ನು ಮೂಡಿಸಲು ಪ್ರಯತ್ನಿಸಬೇಕಾಗಿದೆ ಎನ್ನುತ್ತಾರೆ ಮಾಸ್ತರರು.

ಚಿಕ್ಕಂದಿನಿಂದ ಪುಸ್ತಕಗಳನ್ನು ಓದುವ ಅಭ್ಯಾಸ ಬೆಳೆಸಿಕೊಂಡಿದ್ದ ಇವರು, ನೆರೆ-ಹೊರೆಯವರಲ್ಲಿ ಓದುವ ಅಭಿರುಚಿ ಬೆಳೆಸಲೆಂದೇ ಬಹಳ ವರ್ಷಗಳ ಹಿಂದೆ 'ವಾಣಿ ಪುಸ್ತಕ ಭಂಡಾರ' ಸ್ಥಾಪಿಸಿದ್ದರು. ಆಗಿನ ಪ್ರಖ್ಯಾತ ಲೇಖಕರ ಪುಸ್ತಕಗಳನ್ನು ತರಿಸಿಟ್ಟಿದ್ದರು. ಮಕ್ಕಳಿಗಾಗಿ ಆಗ ಪ್ರಕಟವಾಗುತ್ತಿದ್ದ ಮಕ್ಕಳ ಪತ್ರಿಕೆಗಳನ್ನು ಬೈಂಡ್ ಮಾಡಿಸಿಟ್ಟಿದ್ದರು. ಕಿರಿಯರು ಅವನ್ನು ಪುಕ್ಕಟೆಯಾಗಿ ಓದಬಹುದಿತ್ತು. ಆಗ ಇವರ ವಾಚನಾಲಯ ಶುಲ್ಕ ದಿನಕ್ಕೆ ಐದು ಪೈಸೆ ಮಾತ್ರ! ಒಳ್ಳೆಯ ಸಾಹಿತ್ಯವನ್ನು ಓದುವ ಅಭಿರುಚಿ ಬೆಳೆಸಿಕೊಂಡ ಇವರ ಓದುಗರು ಎಷ್ಟು ಆಸಕ್ತಿ ತೋರಿಸುತ್ತಿದ್ದರೆಂದರೆ, ಪತ್ರಿಕೆಗಳಲ್ಲಿ ಹೊಸ ಪುಸ್ತಕದ ಪ್ರಕಟಣೆಯ ಸುದ್ದಿ ಓದಿದವರು 'ಏನು ಮಾಸ್ತರರೆ ಈ ಪುಸ್ತಕ ನೀವು ಇನ್ನೂ ತರಿಸಿಲ್ಲವೆ !'– ಎಂದು ವಿಚಾರಿಸುತ್ತಿದ್ದರು. ಮಹಿಳೆಯರು 'ವಾಣಿ ಪುಸ್ತಕ ಭಂಡಾರ'ದ ಉಪಯೋಗವನ್ನು ಬಹಳ ಚೆನ್ನಾಗಿ ಬಳಸಿಕೊಂಡರು ! ಮುಂದೆ ಊರಿನಲ್ಲಿ ಸರಕಾರಿ ಗ್ರಂಥಾಲಯ ಪ್ರಾರಂಭವಾಯಿತು. ಮಧ್ಯಾಹ್ನ ಬಿಡುವಿನ ವೇಳೆ ಕಾದಂಬರಿ ಓದುತ್ತಿದ್ದ ಗೃಹಿಣಿಯರು ಟಿ.ವಿ. ಧಾರವಾಹಿಗಳ ಬೆನ್ನು ಹತ್ತಿದರು. ವಾಣಿ ಪುಸ್ತಕ ಭಂಡಾರದ ಸದಸ್ಯರ ಸಂಖ್ಯೆ ಇಳಿಯಿತು. ಆದರೂ ಈಗಲೂ ಒಳ್ಳೆಯ ಪುಸ್ತಕಕ್ಕಾಗಿ ಮಾಸ್ತರರನ್ನು ನೆನಪು ಮಾಡಿಕೊಳ್ಳುವ ಹಳೆಯ ಓದುಗರಿದ್ದಾರೆ.

ವಾಣಿ ಪುಸ್ತಕ ಭಂಡಾರದ ಚಟುವಟಿಕೆಗಳು ನಿಂತರೂ ಮಾಸ್ತರರ ಪುಸ್ತಕ ಸಂಗ್ರಹ ಕಾರ್ಯ ಮುಂದುವರಿದಿದೆ. ಸುಮಾರು ಒಂದು ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಮೌಲ್ಯದ ನಾಲ್ಕು ಸಾವಿರಕ್ಕೂ ಹೆಚ್ಚು ಪುಸ್ತಕಗಳು ಎರಡು ಸಾವಿರದಷ್ಟು ಆಡಿಯೋ ಕ್ಯಾಸೆಟ್‌ಗಳು ಅವರ ಸಂಗ್ರಹದಲ್ಲಿವೆ. ಕಂಪ್ಯೂಟರ್ ಸಹಾಯದಿಂದ ಪುಸ್ತಕಗಳ ಪಟ್ಟಿ ತಯಾರಿಸುವ ಕೆಲಸ ಮಾಡುತ್ತಿದ್ದಾರೆ.

ಸಾಹಿತ್ಯ ಸಮ್ಮೇಳನಗಳಲ್ಲಿ, ಬೇರೆ ಸಂದರ್ಭಗಳಲ್ಲಿ ನಡೆಯುವ ಪುಸ್ತಕ ಪ್ರದರ್ಶನಗಳಲ್ಲಿ ಮಾಸ್ತರರು ಹೊರಲಾರದಷ್ಟು ಪುಸ್ತಕ ಖರೀದಿಸದೇ ಬಿಡುವವರಲ್ಲ ! ಅಂಗಡಿಗಳಲ್ಲಿ ಒಳ್ಳೆಯ ಪುಸ್ತಕ ನೋಡಿದರಂತೂ ಅದನ್ನು ಖರೀದಿಸಿ ತಮ್ಮ ಸಂಗ್ರಹಕ್ಕೆ ಸೇರಿಸಿಕೊಳ್ಳುವವರೆಗೆ ಅವರ ಕಣ್ಣಿಗೆ ನಿದ್ದೆ ಹತ್ತುವುದಿಲ್ಲ ! ಇವರ ಪುಸ್ತಕ ಸೇವೆಯ ರೀತಿ ಇದು !

ಮಾಸ್ತರರ ಮನೆಯಲ್ಲಿ ಎಲ್ಲಿ ನೋಡಿದರೂ ಪುಸ್ತಕಗಳೇ. ಅವರು ಹೋದಕಡೆ ಹುಡುಕಾಡಿ ಸಂಗ್ರಹಿಸಿದ ಆ ಪುಸ್ತಕಗಳನ್ನು ಇಲಿಗಳಿಂದ, ಗೆದ್ದಲಿನಿಂದ ರಕ್ಷಿಸುವುದು ಬಹಳ ಕಿರಿಕಿರಿಯ ಕೆಲಸ. ಕೆಲವು ವರ್ಷಗಳ ಹಿಂದೆ, ಅವರ ತಂಗಿಯ ಮದುವೆ ಸಂದರ್ಭದಲ್ಲಿ ಈ ಪುಸ್ತಕ ರಾಶಿಯ ಕಡೆಗೆ ಹೆಚ್ಚು ಗಮನ ಕೊಡಲಾಗಲಿಲ್ಲ. ನೆಂಟರಿಷ್ಟರು ಬಂದಾಗ ಮನೆಯಲ್ಲಿ ಸ್ಥಳದ ಅಭಾವ. ಹೀಗಾಗಿ ಮನಸ್ಸಿಲ್ಲದ ಮನಸ್ಸಿನಿಂದ ಸುಮಾರು ೩೦ ಸಾವಿರ ರೂಪಾಯಿ ಮೌಲ್ಯದ ಪುಸ್ತಕಗಳನ್ನು ಮಾರಾಟ ಮಾಡಬೇಕಾಯಿತು. ಆ ಘಟನೆಯನ್ನು ಅವರು ಬಹಳ ವ್ಯಥೆಯಿಂದ ಸ್ಮರಿಸಿಕೊಳ್ಳುತ್ತಾರೆ.

ಪುಸ್ತಕ ಸಂಗ್ರಹವನ್ನು ಮಾಸ್ತರರು ತಮ್ಮ ಸಂಪತ್ತೆಂದು ಭಾವಿಸುತ್ತಾರೆ. ನಿವೃತ್ತಿಯ ನಂತರ ಈ ಪುಸ್ತಕ ಸಂಪತ್ತನ್ನು ಹೆಚ್ಚಿಸುವ ಉತ್ಸಾಹವೇನೂ ಕಡಿಮೆಯಾಗಿಲ್ಲ. ಈ ಪುಸ್ತಕಪ್ರೇಮಕ್ಕೆ ಒಂದು ಮಿತಿ ಇರಬೇಡವೇ ಎಂದು ಇವರ ಪತ್ನಿ ಆಕ್ಷೇಪಿಸುವುದುಂಟು. ಮಾಸ್ತರರ ಈ ಹವ್ಯಾಸ ಅಷ್ಟು ಕೆಟ್ಟದ್ದೇನೂ ಅಲ್ಲ ಎಂಬುದು ಮನವರಿಕೆಯಾಗಿ ಅವರ ಆಕ್ಷೇಪದ ಕಾವು ಇಳಿಯುವುದೂ ಉಂಟು !

ಒಂದು ವ್ಯವಸ್ಥಿತವಾದ ಗ್ರಂಥಾಲಯ ಸ್ಥಾಪಿಸಬೇಕು. ಅಲ್ಲಿ ವಿಷಯವಾರಾಗಿ ಬೇಕಾದ ಪುಸ್ತಕ ಒಂದು ಕ್ಷಣದಲ್ಲಿ ದೊರಕುವಂಥ ವ್ಯವಸ್ಥೆಯಿದ್ದು, ಎಲ್ಲ ಓದುಗರಿಗೆ ಉಪಯೋಗವಾಗುವಂತಿರಬೇಕು ಎಂಬುದು ಮಾಸ್ತರರ ಹಂಬಲ. ಆ ನಿಟ್ಟಿನಲ್ಲಿ ಕಾರ್ಯ ಮಾಡುತ್ತಿದ್ದಾರೆ.

ತಮ್ಮ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ಪುಸ್ತಕ ಖರೀದಿಗೆಂದು ಕನಿಷ್ಠ ಐದಾರುನೂರು ರೂಪಾಯಿ ತೆಗೆದಿರಿಸುವ ಶೇಷಗಿರಿ ಮಾಸ್ತರರನ್ನು ಬೆರಗಿನಿಂದ ಮೆಚ್ಚದಿರಲು ಸಾಧ್ಯವೇ ?

ಶೇಷಗಿರಿ ಮಾಸ್ತರರು ಮಕ್ಕಳಿಗೆ ಓದುವ ಅಭಿರುಚಿ ಬೆಳೆಸಲು ಮಾತ್ರವೇ ಶ್ರಮಿಸಿದವರಲ್ಲ. ಮಕ್ಕಳು ತಮ್ಮ ಪುಸ್ತಕಗಳ ಹಾಳೆಗಳು ಹರಿಯದಂತೆ, ಅಚ್ಚುಕಟ್ಟಾಗಿ ಇರಿಸಿಕೊಳ್ಳುವ ಅಭ್ಯಾಸ ಬೆಳೆಸಿಕೊಳ್ಳುವಂತೆಯೂ ಶ್ರಮಿಸಿದವರು ! ಶಾಲೆ ಪ್ರಾರಂಭವಾದ ನಂತರ ಇಡೀ ಶಾಲೆಯ ಮಕ್ಕಳ ಪುಸ್ತಕಗಳನ್ನು ಅಚ್ಚುಕಟ್ಟಾಗಿ ಹೊಲಿದು, ರಟ್ಟು ಹಾಕಿ ಕೊಡುವುದನ್ನು ಅವರು ಬಹಳ ಪ್ರೀತಿ, ಶ್ರದ್ಧೆಯಿಂದ ಮಾಡುತ್ತಿದ್ದರು ! ಎಲ್ಲ ಮಕ್ಕಳ ಪುಸ್ತಕ ಹೊಲೆಯಲು ಸುಮಾರು ಒಂದು ತಿಂಗಳಾಗುತ್ತಿತ್ತು. ಅಂಥ ಮಾಸ್ತರರ ಬಗ್ಗೆ ಮಕ್ಕಳಿಗೆ ಅಭಿಮಾನ ಮೂಡದಿರಲು ಸಾಧ್ಯವೇ ? ಅವರಿಂದ ಕಲಿತು, ಮುಂದೆ ಶಿಕ್ಷಕರಾಗಿರುವ ಅನೇಕರು ಶೇಷಗಿರಿ ಮಾಸ್ತರರು ಹಾಕಿಕೊಟ್ಟ ಕೈಂಕರ್ಯವನ್ನು ಮುಂದುವರಿಸುತ್ತಿರುವುದಾಗಿ ಹೇಳಿದಾಗ ಮಾಸ್ತರರಿಗೂ ಹೆಮ್ಮೆ.

ಶೇಷಗಿರಿ ಮಾಸ್ತರರಂಥವರ ಸಂತತಿ ಮತ್ತಷ್ಟು ಹೆಚ್ಚಬೇಕೆಂಬುದು 'ಹೊಸತು' ಆಶಯ.

ಕೆ. ಪಿ. ಸ್ವಾಮಿ
೧೬೭, ೧೧ನೇ ಮೇನ್, ೩ನೇ ಘಟ್ಟ
ಪೀಣ್ಯ ಕೈಗಾರಿಕಾ ಪ್ರದೇಶ ಬೆಂಗಳೂರು-೫೮

ಪುಸ್ತಕ ಓದಿಸುವ ಶೇಷಗಿರಿ ಮಾಸ್ತರರನ್ನು ಹೊಸತು ಭೇಟಿ ಮಾಡಿದ್ದು ಚಿಕ್ಕಮಗಳೂರಿನಲ್ಲಿ - ನವಕರ್ನಾಟಕ ಸಾಹಿತ್ಯ ಸಂಪದ ಮಾಲಿಕೆಯ ಪುಸ್ತಕಗಳ ಬಿಡುಗಡೆ ಸಂದರ್ಭದಲ್ಲಿ. ಮಾತುಕತೆಯ ಮಧ್ಯೆ ಹೊಸತು ಇನ್ನೂ ಹೆಚ್ಚು ಸಂಖ್ಯೆಯ ಓದುಗರಿಗೆ ತಲುಪುವಂತಾಗಬೇಕು. ಇಷ್ಟು ಸಮೃದ್ಧ ವಿಷಯಗಳಿರುವ ಪತ್ರಿಕೆಯನ್ನು ಹತ್ತು ರೂಪಾಯಿಗೆ ನೀಡಲು ಇಂದಿನ ಪರಿಸ್ಥಿತಿಯಲ್ಲಿ ತೊಡಕಾಗಿದೆ. ಓದುಗರ ಸಂಖ್ಯೆ ಹೆಚ್ಚಾದರೆ ಮಾತ್ರ ಇದನ್ನು ಸರಿದೂಗಿಸಬಹುದು - ಎಂಬ ಪ್ರಸ್ತಾಪ ಬಂತು. ಈ ವಿಷಯದಲ್ಲಿ ಅವರ ಸಹಕಾರ ಕೋರಿದ್ದೇ ತಡ, 'ಆಗಲಿ' ಎಂದರು. ಮುಂದೆ ಒಂದು ತಿಂಗಳು ತುಂಬುವಷ್ಟರಲ್ಲಿ 'ಹೊಸತು'ಗೆ ಹತ್ತು ಮಂದಿ ಮೂರು ವರ್ಷದ ಚಂದಾದಾರರನ್ನು ನೋಂದಾಯಿಸಿ ಹಣ ಕಳಿಸಿಕೊಟ್ಟಿದ್ದಾರೆ. ಇವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಈಗ ಇವರನ್ನು 'ಪತ್ರಿಕೆ ಓದಿಸುವ ಮಾಸ್ತರರು' ಎನ್ನಲಡ್ಡಿಯಿಲ್ಲ. ಕರ್ನಾಟಕದ ಹೊಸತು ಅಭಿಮಾನಿಗಳು ಮಾಸ್ತರರ ನುಡಿಸೇವೆಯ ನಿದರ್ಶನ ಅನುಸರಿಸಬೇಕೆಂಬುದು ನಮ್ಮ ಆಶಯ.

# ಪ್ರಾಚೀನ ಭಾರತದ ಸ್ತ್ರೀವಾದಿಗಳು

ಸ್ತ್ರೀವಾದ ಎಂಬುದು ಒಂದು ಆಧುನಿಕ ಪರಿಕಲ್ಪನೆ ಮತ್ತು ಅದು ಪಾಶ್ಚಾತ್ಯರಿಂದ ಭಾರತಕ್ಕೆ ವಲಸೆ ಬಂದುದು ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಅದು ಅರ್ಧ ಸತ್ಯ ಮಾತ್ರ; ಪೂರ್ಣ ಸತ್ಯವಲ್ಲ. ಪ್ರಾಚೀನ ಭಾರತದ ಅನೇಕ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಅನಿರೀಕ್ಷಿತವಾಗಿ ಸಂದರ್ಭಕ್ಕೆ ಹೊಂದಿಕೊಳ್ಳದ ರೀತಿಯಲ್ಲಿ ಕೆಲವು ಕಡೆ ಸ್ತ್ರೀಯರನ್ನು ಕುರಿತು ಸ್ತುತಿಪಾಠ ಮಾಡಲಾಗಿದೆ. ಚಪಲ ಚಿತ್ತರು, ಚಂಚಲ ಸ್ವಭಾವದವರು, ವಿಶ್ವಾಸಾರ್ಹರಲ್ಲದವರು ಎಂದು ಸ್ತ್ರೀಯರನ್ನು ನಾನಾ ರೀತಿಯ ನಿಂದನೆಗೆ ಒಳಪಡಿಸಿ, ಕೂಡಲೇ ಅವರು ಪುರುಷರಿಗಿಂತ ಶ್ರೇಷ್ಠರು, ದೇವತಾ ಸ್ವರೂಪಿಗಳು ಎಂದು ಪ್ರಶಂಸಿಸಲಾಗಿದೆ. ಅಂತಹ ವಿರೋಧಾಭಾಸಗಳಿಗೆ ತಾಂತ್ರಿಕರ ಗುಪ್ತ ಕೈವಾಡವೇ ಕಾರಣವೆಂದು ಊಹಿಸಲಾಗಿದೆ. ತಾಂತ್ರಿಕರು ಗುಟ್ಟಾಗಿ ಸ್ತ್ರೀಯರನ್ನು ಪೂಜಿಸುತ್ತಾ ಬಹಿರಂಗವಾಗಿ ಮಹಿಳೆಯರನ್ನು ಕೀಳಾಗಿ ಕಾಣುವ ಇತರರಂತೆಯೇ ವರ್ತಿಸುತ್ತಿದ್ದರು. ಅವರು ಸ್ತ್ರೀತ್ವವು ಪುರುಷತ್ವಕ್ಕಿಂತ ಮೊದಲಿನದು ಮತ್ತು ಶ್ರೇಷ್ಠವಾದುದು ಎಂದು ನಂಬಿದ್ದರು. 'ಪ್ರಕೃತಿ' ವಿಶ್ವವ್ಯಾಪಕವಾದುದು, 'ಪುರುಷ' ಅದರ ಒಂದು ಅಂಗ ಮಾತ್ರ ಎಂಬುದು ಬಹು ಪ್ರಾಚೀನ ಪರಿಕಲ್ಪನೆ.

ತಾಂತ್ರಿಕರು ಮಹಿಳೆಯ ಸುತ್ತ ಕುಳಿತು 'ಚಕ್ರಪೂಜೆ' ಎಂಬ ಒಂದು ನಿಗೂಢ ತಾಂತ್ರಿಕ ಆಚರಣೆಯಲ್ಲಿ ಪಾಲುಗೊಳ್ಳುತ್ತಿದ್ದರು. ಅವರು ತಮ್ಮ ತಾಂತ್ರಿಕ ದೀಕ್ಷೆಯನ್ನು ಬಹಿರಂಗಗೊಳಿಸದೆ ರಹಸ್ಯವಾಗಿಡಬೇಕೆಂಬ ನಿಯಮವನ್ನು ಪಾಲಿಸಬೇಕಾಗಿದ್ದುದರಿಂದ ಅವರ ಕೃತಿಗಳು ಖಾಸಗಿ ಪ್ರಸಾರಕ್ಕೆ ಸೀಮಿತವಾಗಿದ್ದುವು. ಹೀಗಾಗಿ ಅವರ ಎಲ್ಲೋ ಕೆಲವು ಕೃತಿಗಳು ಮಾತ್ರ ಇತರರ ಕೈಗೆ ಹೇಗೋ ದೊರಕಿ ಪ್ರಕಟಗೊಂಡಿವೆ. ಅವುಗಳಲ್ಲಿ 'ಮಹಾ ನಿರ್ವಾಣ ತಂತ್ರ' ಎಂಬುದು ಒಂದಾಗಿದೆ. ಅದರ ಮೂಲಕ ಮಹಿಳೆಯನ್ನು ಕುರಿತು ತಾಂತ್ರಿಕರ ಒಲವು ನಿಲುವುಗಳೇನು ಎಂಬುದನ್ನು ನಾವು ತಿಳಿಯಬಹುದು. ಗೃಹಸ್ಥನ ಕರ್ತವ್ಯಗಳನ್ನು ಕುರಿತು ಅದು ಹೀಗೆ ಹೇಳುತ್ತದೆ :

''ಗೃಹಸ್ಥನು ತನ್ನ ಮಡದಿಯನ್ನು ಪ್ರೀತಿಯಿಂದ ಆರೈಕೆ ಮಾಡಬೇಕು, ಮಕ್ಕಳಿಗೆ ಶಿಕ್ಷಣ ನೀಡಬೇಕು, ಇದು ಅವನ ನಿತ್ಯ ಕರ್ತವ್ಯ. ಗೃಹಸ್ಥನು ಎಂದೂ ತನ್ನ ಹೆಂಡತಿಯನ್ನು ಶಿಕ್ಷಿಸಬಾರದು. ವಿವೇಕಿಯಾದವನು ತನ್ನ ಮಡದಿ ಜೀವಂತವಿರುವವರೆಗೂ ಅನ್ಯಸ್ತ್ರೀಯನ್ನು ಕೆಟ್ಟ ನೋಟದಿಂದ ನೋಡಬಾರದು, ಮುಟ್ಟಬಾರದು, ಹಾಗೇನಾದರೂ ಮಾಡಿದರೆ ಅವನು ಖಂಡಿತ ನರಕಕ್ಕೆ ಹೋಗುತ್ತಾನೆ. ಒಳ್ಳೆಯ ವಸ್ತ್ರ, ಒಡವೆ, ಪ್ರೀತಿ, ಗೌರವ ಮತ್ತು ಸಿಹಿಯಾದ ಮಾತುಗಳಿಂದ ಹೆಂಡತಿಯನ್ನು ಸಂತುಷ್ಟಿಗೊಳಿಸಬೇಕು. ಗಂಡನಾದವನು ಅವಳ ಇಚ್ಛೆಗೆ ವಿರುದ್ಧವಾಗಿ ಏನನ್ನೂ ಮಾಡಬಾರದು.'' 'ಮಹಾ ನಿರ್ವಾಣ ತಂತ್ರ'ವು ಖಡಾಖಂಡಿತವಾಗಿ 'ಸತಿ' ಪದ್ಧತಿಯನ್ನು ಖಂಡಿಸುತ್ತದೆ: ''ಹೆಂಡತಿಯನ್ನು ಗಂಡನೊಡನೆ ಸುಡಕೂಡದು. ಪ್ರತಿಯೊಬ್ಬ ಮಹಿಳೆಯೂ ದೇವತೆಯ ಪ್ರತಿರೂಪ. ವಿಶ್ವದ ಎಲ್ಲಾ ಮಹಿಳೆಯರ ದೇಹಗಳಲ್ಲಿ ದೇವತೆ ಅಗೋಚರಳಾಗಿ ನೆಲಸಿರುತ್ತಾಳೆ. ಆದ್ದರಿಂದ ಯಾವ ಮಹಿಳೆ ಮತಿಭ್ರಾಂತಳಾಗಿ ತನ್ನ ಮೃತ ಗಂಡನ ಚಿತೆಯನ್ನು ಹತ್ತುತ್ತಾಳೋ ಅವಳು ನರಕಕ್ಕೆ ಹೋಗುತ್ತಾಳೆ.'' ಆ ತಾಂತ್ರಿಕ ಕೃತಿಯು ಮಹಿಳೆಯ ಮೇಲೆ ಮಾಡಲಾದ ಅತ್ಯಾಚಾರಕ್ಕೆ ಮರಣದಂಡನೆಯೇ ಶಿಕ್ಷೆ

ಬಿ. ವಿ. ವೀರಭದ್ರಪ್ಪ

ಎನ್ನುತ್ತದೆ. ''ಮಹಿಳೆಯು, ಅವಳು ಚಾಂಡಾಲಳೇ ಆಗಿದ್ದರೂ, ಅವಳ ಶೀಲಭಂಗ ಮಾಡಿದವನು ಎಂದೂ ಕ್ಷಮೆಗೆ ಅರ್ಹನಲ್ಲ, ಅವನನ್ನು ತಪ್ಪದೆ ಮರಣದಂಡನೆಗೆ ಗುರಿಪಡಿಸಬೇಕು'' ಎಂದು ಸಾರುತ್ತದೆ.

ಮಹಿಳೆಯರನ್ನು ಅಸಭ್ಯವಾಗಿ ಮಾತಾಡಿಸುವುದು, ಪರಸ್ತ್ರೀಯನ್ನು ಗೋಪ್ಯವಾಗಿ ನೋಡುವುದು, ಅಣಕಿಸುವುದು ಇತ್ಯಾದಿ ಕೃತ್ಯಗಳನ್ನೆಸಗಿದವರು ಎರಡು ದಿನ ಉಪವಾಸ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಅದು ಸೂಚಿಸುತ್ತದೆ.

ಮುಂದುವರಿದು ಅದು ಅನ್ಯಾಯವಾಗಿ ಹೆಂಡತಿಯನ್ನು ಪರಿತ್ಯಜಿಸಿದವನು ತನ್ನ ಮೈಮೇಲೆ ಕತ್ತೆಯ ಚರ್ಮವನ್ನು ಹೊದ್ದುಕೊಂಡು ಏಳು ಮನೆಗಳಿಗೆ ಹೋಗಿ 'ಹೆಂಡತಿಯನ್ನು ಬಿಟ್ಟವನಿಗೆ ಭಿಕ್ಷೆಯನ್ನು ನೀಡಿ' ಎಂದು ಬೇಡುತ್ತಾ ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಹೇಳುತ್ತದೆ. ಆ ರೀತಿ ಪರಿತ್ಯಜಿಸಲ್ಪಟ್ಟ ಹೆಂಡತಿ ಇನ್ನೊಬ್ಬ ಪುರುಷನೊಡನೆ ಸಂಗ ಮಾಡಿದರೂ ಅವಳು ವ್ಯಭಿಚಾರಿಣಿ ಎನಿಸುವುದಿಲ್ಲ. ಒಬ್ಬ ಮಹಿಳೆ ತಾನು ಮದುವೆಯಾದ ಪುರುಷನು ನಪುಂಸಕನೆಂದು ತಿಳಿದ ಮೇಲೆ ಅವನಿಂದ ವಿವಾಹ ವಿಚ್ಛೇದನ ಪಡೆಯುವ ಹಕ್ಕನ್ನು ಆ ಮಹಿಳೆ ಹೊಂದಿರುತ್ತಾಳೆ. ಹಣಕ್ಕಾಗಿ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಡುವುದು ಅತ್ಯಂತ ಪಾಪಕೃತ್ಯ ಎಂದು 'ಮಹಾನಿರ್ವಾಣ ತಂತ್ರ' ಸಾರುತ್ತದೆ. ತಾಂತ್ರಿಕರ ನಿಗೂಢ ಆಚರಣೆಗಳು ಏನೇ ಇರಲಿ ಈ ಕೃತಿಯ ವಿಚಾರಗಳು 'ಸ್ತ್ರೀವಾದ'ದ ದೃಷ್ಟಿಯಿಂದ ಗಮನಾರ್ಹವಾಗಿವೆ.

* * *

ತಾಂತ್ರಿಕರಲ್ಲದೆ ಮಾನವ ಹಕ್ಕುಗಳ ಪ್ರತಿಪಾದಕರಾದ ಇತರರೂ ಮಹಿಳೆಯರನ್ನು ಪುರುಷರು ನಡೆಸಿಕೊಳ್ಳುತ್ತಿದ್ದ ರೀತಿಯ ವಿರುದ್ಧ ಬಹಿರಂಗವಾಗಿ ಟೀಕಿಸಿದ್ದಾರೆ. ಅವರಲ್ಲಿ ವರಾಹಮಿಹಿರನು ಅತ್ಯಂತ ಪ್ರಾಚೀನ ಮತ್ತು ಪ್ರಮುಖನಾಗಿದ್ದಾನೆ. ಕ್ರಿ. ಶ. ಆರನೇ ಶತಮಾನದವನಾದ ಅವನು ಖಗೋಳ ವಿಜ್ಞಾನಕ್ಕೆ ಅಪಾರ ಕಾಣಿಕೆ ನೀಡಿದ್ದಾನೆ. ಅವನು ಲಿಂಗ ತಾರತಮ್ಯದ ಬಗ್ಗೆ ನೀಡಿದ ಅಭಿಪ್ರಾಯಗಳು ಅಮೂಲ್ಯವಾಗಿವೆ. ಆ ಕಾಲದಲ್ಲಿ ಮಹಿಳೆಯರನ್ನು ಕಾಣುತ್ತಿದ್ದ ರೀತಿಯ ಬಗ್ಗೆ ಅವನು ಮಾಡಿದ ಟೀಕೆಗಳಿಂದ ಅಂದೂ ಸಹ ಅಬಲೆಯರ ಬಗ್ಗೆ ಗೌರವಾದರಗಳನ್ನು ಹೊಂದಿದವರು ಇದ್ದರು ಎಂದು ಮನವರಿಕೆಯಾಗುತ್ತದೆ. 'ಬೃಹತ್ ಸಂಹಿತೆ'ಯಲ್ಲಿ ಅವನು ಹೀಗೆ ಹೇಳುತ್ತಾನೆ :

''ಆಭರಣಗಳಿಂದ ಮಹಿಳೆಯರ ಅಲಂಕಾರ ವರ್ಧಿಸುವುದಿಲ್ಲ. ಅದಕ್ಕೆ ಬದಲಾಗಿ ಮಹಿಳೆಯರಿಂದ ಅವರು ಧರಿಸುವ ಆಭರಣಗಳಿಗೆ ಶೋಭೆಯುಂಟಾಗುತ್ತದೆ. ವಾಸ್ತವವಾಗಿ ಮಹಿಳೆಯರೇ ರತ್ನಗಳು. ದೇವರು ಸೃಷ್ಟಿಸಿರುವ ರತ್ನಗಳಲ್ಲಿ ಮಹಿಳೆಗಿಂತ ಮಿಗಿಲಾದ ರತ್ನ ಇನ್ನೊಂದಿಲ್ಲ. ಅದು ಮಾನವನ ನೋಟ, ಶ್ರವಣ, ಸ್ಪರ್ಶ ಮತ್ತು ಭಾವನೆಗಳಿಗೆ ಹರ್ಷವನ್ನುಂಟುಮಾಡುತ್ತದೆ. ಅವಳು ಜೊತೆಗಿದ್ದಾಗ ಧರ್ಮ, ಅರ್ಥ ಮತ್ತು ಕಾಮಗಳು ಸಾಧ್ಯವಾಗುತ್ತವೆ. ಅವಳಿಂದಲೇ ಪುತ್ರ ಸಂತಾನ. ಆದ್ದರಿಂದ ಸ್ತ್ರೀಯನ್ನು ಸಮಾಜದ ಮುಖ್ಯ ಭಾಗವೆಂದು ಪರಿಗಣಿಸಬೇಕು. ಅವಳು ಯಶೋದೇವತೆಯ ಆವಾಸಸ್ಥಾನ. ಅವಳನ್ನು ಗೌರವ ಮತ್ತು ಆದರದಿಂದ ಕಾಣಬೇಕು.

''ಮಹಿಳೆಯರ ಈ ಗುಣಗಳನ್ನು ಗಣನೆಗೆ ತೆಗೆದುಕೊಳ್ಳದೆ ಕಪಟ ಸನ್ಯಾಸಿಗಳಂತೆ ಅವರ ವಿರುದ್ಧ ಲಘುವಾದ ಬಾಯಿಚಪಲ ತೀರಿಸಿಕೊಳ್ಳಲು ಯಾವ ಆಧಾರವೂ ಇಲ್ಲ. ಪುರುಷರಲ್ಲಿಲ್ಲದ ಯಾವ ದೋಷ ಮಹಿಳೆಯರಲ್ಲಿದೆ ? ಮಹಿಳೆಯರು ಏನಾದರೂ ದುಷ್ಟತನದಿಂದ ವರ್ತಿಸಿದ್ದರೆ ಅದಕ್ಕೆ ಪುರುಷರೇ ಕಾರಣರಿರುತ್ತಾರೆ. ಮಹಿಳೆಯರು

ಚಿತ್ರ ಸುದ್ದಿ



ಓದುಗರಿರುವಲ್ಲಿಗೇ ಪುಸ್ತಕ ಒಯ್ಯುವ ಕಾಯಕದ ಅಂಗವಾಗಿ ನವಕರ್ನಾಟಕ ಬೇರೆ ಬೇರೆ ಕಡೆ ಪುಸ್ತಕ ಪ್ರದರ್ಶನ ಏರ್ಪಡಿಸುತ್ತಿದೆ. ಬಿಜಾಪುರದಲ್ಲಿ, ನಗರಸಭೆಯ ಅಧ್ಯಕ್ಷರಾದ ಶ್ರೀ ಗೂಳಪ್ಪ ಶೆಟಗಾರ ಅವರು ಪ್ರದರ್ಶನ ಉದ್ಘಾಟಿಸಿದರು.

ಗುಣಶೀಲಗಳಲ್ಲಿ ಪುರುಷರಿಗಿಂತ ಮೇಲ್ಮಟ್ಟದಲ್ಲಿದ್ದಾರೆ.''

ಮಹಿಳೆಯರ ಹಕ್ಕುಗಳನ್ನು ಎತ್ತಿಹಿಡಿದ ಇನ್ನೊಬ್ಬ ಪ್ರತಿಭಾವಂತನೆಂದರೆ ಬಾಣ. ಅವನು ಏಳನೇ ಶತಮಾನದಲ್ಲಿ ಜೀವಿಸಿದ್ದ 'ಕಾದಂಬರಿ' ಎಂಬ ವೈಶಿಷ್ಟ್ಯಪೂರ್ಣ ಕೃತಿಯ ಲೇಖಕ. 'ಸತಿ' ಪದ್ಧತಿಯ ಬಗ್ಗೆ ಅದರಲ್ಲಿ ಅವನು ಬರೆದುದು ನಮಗೆ ಪ್ರಸ್ತುತವಾಗಿದೆ:

''ಪ್ರಾಣಕಾಂತನು ಮಡಿದಾಗ ಅವನೊಡನೆ ತನ್ನನ್ನು ಸುಟ್ಟುಕೊಳ್ಳುವುದು ಒಂದು ನಿಷ್ಫಲ ಕೃತ್ಯ. ಅದು ಮೂರ್ಖರು ಅನುಸರಿಸುವ ಪದ್ಧತಿ. ಅದು ಭಾವಾವೇಶದಿಂದ ಮಾಡುವ ಒಂದು ತಪ್ಪು ಕೆಲಸ. ದುಡುಕಿನಿಂದ ಪೂರ್ವಾಪರ ಯೋಚಿಸದೆ ಮಾಡುವ ದೋಷ. ಅದು ಮಹಾಘೋರ ಪಾಪಕೃತ್ಯ. ಅದರಿಂದ ಮೃತ ವ್ಯಕ್ತಿಗೆ ಏನೂ ಒಳ್ಳೆಯದಾಗುವುದಿಲ್ಲ. ಅದು ಅವನನ್ನು ಸ್ವರ್ಗಕ್ಕೆ ಕೊಂಡೊಯ್ಯುವುದೂ ಇಲ್ಲ ಮತ್ತು ನರಕದಿಂದ ಮೇಲೆತ್ತು ವುದೂ ಇಲ್ಲ. ಅದು ಸತಿಯಾದವಳನ್ನು ದಿವಂಗತ ಪತಿಯ ಬಳಿಗೆ ಕೊಂಡೊಯ್ಯುವುದೂ ಇಲ್ಲ. ಸತ್ತ ವ್ಯಕ್ತಿಯು ತಾನು ಮಾಡಿದ ಕೆಲಸಗಳಿಂದ ನಿರ್ಧರಿತವಾದ ಸ್ಥಳಕ್ಕೆ ಹೋಗುತ್ತಾನೆ. ತನ್ನನ್ನು ಪತಿಯ ಚಿತೆಯ ಮೇಲೆ ಸುಟ್ಟುಕೊಂಡವಳು ಆತ್ಮಹತ್ಯೆ ಮಾಡಿಕೊಂಡವರು ಹೋಗುವ ನರಕಕ್ಕೆ ಹೋಗುತ್ತಾಳೆ. ಅದರ ಬದಲು ಪತಿಯ ಮರಣಾನಂತರ ಜೀವಿಸಿರುವವಳು, ಗೊತ್ತುಪಡಿಸಿದ ಕರ್ಮಗಳನ್ನು ಮಾಡುವುದರ ಮೂಲಕ ತನಗೂ ಮತ್ತು ಸತ್ತ ಗಂಡನಿಗೂ ಇನ್ನೂ ಉತ್ತಮವಾದುದನ್ನೇ ಮಾಡಬಹುದು. ಅವನೊಡನೆ ಸಾಯುವುದರಿಂದ ಯಾರಿಗೂ ಒಳ್ಳೆಯದಾಗುವುದಿಲ್ಲ.''

ಉಳಿದ ಪ್ರಮುಖ ಸ್ತ್ರೀವಾದಿ ಬರಹಗಾರರಲ್ಲಿ ಮೇಧತಿಥಿ, ವಿರಾಟ ಮತ್ತು ದಕ್ಷಿಣ ಭಾರತದ ದೇವನ್ ಭಟ್ಟ ಸೇರುತ್ತಾರೆ. ಅವರೆಲ್ಲಾ 'ಸತಿ' ಪದ್ಧತಿಯನ್ನು ತೀವ್ರವಾಗಿ ಖಂಡಿಸುತ್ತಾರೆ.

ಹೀಗೆ ಬಹು ಪ್ರಾಚೀನ ಕಾಲದಿಂದಲೇ ಮಹಿಳೆಯರಿಗೆ ಆಗುತ್ತಿದ್ದ ಸಾಮಾಜಿಕ ಅನ್ಯಾಯವನ್ನು ವಿರೋಧಿಸುವ ಎಚ್ಚೆತ್ತ ಭಾರತೀಯರು ಇದ್ದುದು ಸ್ಪಷ್ಟವಿದೆ. ಆದರೆ ಅವರ ಅಭಿಪ್ರಾಯಗಳು ವೈಯಕ್ತಿಕವಾಗಿದ್ದು ಚಳವಳಿಯ ರೂಪವನ್ನು ತಾಳಲಿಲ್ಲ.




* * *

ಭಾರತೀಯ ಮಹಿಳೆ ಪುರುಷ ಪ್ರಧಾನ ಸಮಾಜದ ಅಡಿಯಲ್ಲಿ ದಾಸಾನುದಾಸಳಾಗಿ ಬದುಕಬೇಕಾಗಿದ್ದ ಕಾಲದಲ್ಲೂ ಅನೇಕ ವೀರ ಮಹಿಳೆಯರು ದಿಟ್ಟತನದಿಂದ ತಮ್ಮ ಅದ್ಭುತ ಸ್ತ್ರೀ ಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಕೆಲವರು ತಮ್ಮ ಸೋಂಬೇರಿ ಗಂಡರನ್ನು ತಮ್ಮ ಅಂಗೈಯಲ್ಲಿ ಕುಣಿಸಿದ್ದಾರೆ. ಮಹಾಭಾರತದ ಪಾಂಚಾಲಿಯು ಕರ್ತವ್ಯಚ್ಯುತರಾದ ತನ್ನ ಐವರು ಗಂಡಂದಿರನ್ನು ವಿರಾಟನ ಸಭೆಯಲ್ಲಿ 'ನೀವೇನ್ ಗಂಡರೋ ಮೇಣ್ ಷಂಡರೋ' ಎಂದು ಛೇಡಿಸಿ ಅವರಲ್ಲಿ ಕರ್ತವ್ಯಪ್ರಜ್ಞೆಯನ್ನು ಮೂಡಿಸಿದುದನ್ನು ಕುಮಾರವ್ಯಾಸನು ರಸವತ್ತಾಗಿ ನಿರೂಪಿಸಿದ್ದಾನೆ. ಐತಿಹಾಸಿಕ ಕಾಲದಲ್ಲಿ ಅನೇಕ ಹಿಂದು ರಾಣಿಯರು ತಮ್ಮ ಗಂಡಂದಿರ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದಾರೆ. ಅವರ ಹೆಸರುಗಳು ಆ ಕಾಲದ ನಾಣ್ಯಗಳಲ್ಲಿ ಮತ್ತು ಶಾಸನಗಳಲ್ಲಿ ದಾಖಲಾಗಿವೆ. ಉದಾಹರಣೆಗೆ, ಗುಪ್ತ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತನ ಮಹಾರಾಣಿ ಕುಮಾರದೇವಿಯನ್ನು 'ಮಹಾದೇವಿ' ಎಂದು ಕರೆಯಲಾಗಿದೆ ಮತ್ತು ಅವಳ ಹೆಸರಿನಲ್ಲಿ ನಾಣ್ಯಗಳನ್ನು ಮುದ್ರಿಸಲಾಗಿದೆ. ಹನ್ನೊಂದನೆಯ ಶತಮಾನದ ಕೊನೆಯಲ್ಲಿ ಗುಜರಾತನ್ನು ಆಳಿದ ಸಿದ್ಧರಾಜ ಜಯಸಿಂಹನ ತಾಯಿ ಮಿಣಾಲ ದೇವಿಯ ಹೆಸರು ಈ ಸಂದರ್ಭದಲ್ಲಿ ಸ್ಮರಣೀಯವಾದುದು. ರಾಥೋಡಿನ ರಾಣಿ ದುರ್ಗಾವತಿ ತನ್ನ ಅಪ್ರಾಪ್ತ ರಾಜಕುಮಾರನಿಗಾಗಿ ರಾಜ್ಯಭಾರ ಮಾಡಿದುದಷ್ಟೇ ಅಲ್ಲ, ಮೊಗಲ್ ಸಾಮ್ರಾಟ ಔರಂಗಜೇಬನ ವಿರುದ್ಧ ತನ್ನ ಪ್ರದೇಶವನ್ನು ಸಂರಕ್ಷಿಸಿಕೊಂಡಳು. ಇಂದೋರಿನ ರಾಣಿ ಅಹಲ್ಯಾಬಾಯಿ ಹೋಳ್ಕರ್ ತನ್ನ ದತ್ತು ಮಗನಿಗಾಗಿ ರಾಜ್ಯಭಾರ ನಡೆಸಿ ಪ್ರಸಿದ್ಧಳಾದಳು. ಝಾನ್ಸಿಯ ರಾಣಿ ಲಕ್ಷ್ಮೀಬಾಯಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಖ್ಯಾತಳಾಗಿದ್ದಾಳೆ.

ತತ್ತ್ವಶಾಸ್ತ್ರದ ಪರಿಣಿತಿಯ ವಿಷಯಕ್ಕೆ ಬಂದರೆ ಶಂಕರಾಚಾರ್ಯ ಮತ್ತು ಮಂಡನ ಮಿಶ್ರರಲ್ಲಿ ನಡೆದ ಶಾಸ್ತ್ರಾರ್ಥ ಚರ್ಚೆಗೆ ಅರ್ಹ ತೀರ್ಪುಗಾರರಾರೂ ದೊರೆಯದಿದ್ದ ಪಂಡಿತರ ಗೋಷ್ಠಿಯಲ್ಲಿ ಮಂಡನ ಮಿಶ್ರನ ಮಡದಿ ಭಾರತಿಯೇ ಅರ್ಹಳೆಂದು ಉಭಯ ಪಕ್ಷಗಳು ಅಂಗೀಕರಿಸುತ್ತವೆ. ಸುದೀರ್ಘವಾಗಿ ನಡೆದ ಚರ್ಚೆಯ ಕೊನೆಯಲ್ಲಿ ಅವಳು ತನ್ನ ಪತಿಯ ವಿರುದ್ಧ ಶಂಕರಾಚಾರ್ಯರ ವಿಜಯವನ್ನು ಘೋಷಿಸಿ ತನ್ನ ವಿದ್ವತ್ತನ್ನು ಮತ್ತು ನಿರ್ದಾಕ್ಷಿಣ್ಯ ಧೋರಣೆಯನ್ನು ಪ್ರದರ್ಶಿಸಿದಳು. ಈ ಐತಿಹಾಸಿಕ ಘಟನೆ ಚರಿತ್ರೆಯಲ್ಲಿ ಅವಿಸ್ಮರಣೀಯವಾಗಿದೆ.

ಬಿ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ-೫೭೭ ೦೦೪

## ....ಎಂದಾದರೆ

ಮಸೀದಿಯನ್ನು ಕೆಡವಿಯಾಗಿದೆ
ಕಟ್ಟಿಬಿಡಿ ಮಂದಿರವನ್ನು.

ಪ್ರಜೆಗಳು ಪರಮಸುಖಿ
ಆಗುತ್ತಾರೆ ಎಂದಾದರೆ
ದೇಶದಲ್ಲಿ ಶಾಂತಿ ಪ್ರಗತಿ
ಮೂಡುತ್ತದೆ ಎಂದಾದರೆ
ಕಟ್ಟಿಬಿಡಿ ಮಂದಿರವನ್ನು.

ಹಸಿದ ಹೊಟ್ಟೆಗೆ ಚೂರುರೊಟ್ಟಿ
ಬರಿಮೈಗೆ ತುಂಡುಬಟ್ಟೆ
ಸಿಗುತ್ತದೆ ಎಂದಾದರೆ
ಕಟ್ಟಿಬಿಡಿ ಮಂದಿರವನ್ನು.

ಮಾನವೀಯತೆ ಮೆರೆಯುತ್ತದೆ
ದೇಶದ ಕೀರ್ತಿ ಹೆಚ್ಚುತ್ತದೆ



ಎಂದಾದರೆ
ಕಟ್ಟಿಬಿಡಿ ಮಂದಿರವನ್ನು.

ಧರ್ಮದ ಪ್ರಶಾಂತಿ ಹರಡುತ್ತದೆ
ಚಿರಶಾಂತಿ ನೆಲೆಸುತ್ತದೆ
ಎಂದಾದರೆ
ಕಟ್ಟಿಬಿಡಿ ಮಂದಿರವನ್ನು.

ಮುಂದಿನವರು ನೆಮ್ಮದಿಯಿಂದಿರುತ್ತಾರೆ
ಇಂದಿನವರು ಸುಖವಾಗಿದ್ದಾರೆ
ಎಂದಾದರೆ
ಕಟ್ಟಿಬಿಡಿ ಮಂದಿರವನ್ನು.

ಡಾ॥ ಮೈನುದ್ದೀನ ರೇವಡಿಗಾರ
ಪ್ರಧಾನ ಅಂಚೆ ಕಚೇರಿ ಹಿಂದೆ, ರೇಲ್ವೆ ನಿಲ್ದಾಣದ ಹತ್ತಿರ,
ಬಾಗಲಕೋಟೆ -೫೮೭ ೧೦೧



"ನೀರದೀವಿಗೆ" ಎಂಬುದು 'ಜಲಸಂಸ್ಕೃತಿ'ಯ ಅನ್ವೇಷಣೆಗೆ ಹೊರಟ ಒಂದು ಮಹಾ ಪ್ರಬಂಧ. ಸಂಸ್ಕೃತಿಯ ಕುರಿತು ಸೂತ್ರಪ್ರಾಯ ವಾಗಿ ಇಂತಿಷ್ಟೇ ಎಂದು ಯಾರೂ ಹೇಳಲು ಬರುವುದಿಲ್ಲ. ಏಕೆಂದರೆ ಸಂಕರಗೊಳ್ಳದ ಜನಾಂಗ ಇಲ್ಲ. ಆದ್ದರಿಂದ ಸಂಕರ ಗೊಳ್ಳದ ಸಂಸ್ಕೃತಿಯೂ ಇಲ್ಲ. ಹೀಗಾಗಿ ಯಾವುದೇ ಸಂಸ್ಕೃತಿಯ ಅಧ್ಯಯನವು ತೊಡಕಿನದು. ಪ್ರಧಾನ, ಅಧೀನ, ಉಪ, ಪರ್ಯಾಯ ಎಂಬ ಪ್ರಭೇದಗಳನ್ನು ಗುರುತಿಸಿ ಅಧ್ಯಯನ ಮಾಡುವ ವಿಧಾನ ಈಗ ಚಾಲ್ತಿಯಲ್ಲಿದೆ. ಒಟ್ಟಾರೆ ದಮನಕ್ಕೆ ಒಳಗಾದವರನ್ನು ಕುರಿತು ಅಧ್ಯಯನ ಮಾಡುವಾಗ ಅಲಿಖಿತ ಮತ್ತು ಮೌಖಿಕ ಪರಂಪರೆಯ ಜಾಡನ್ನು ಹಿಡಿದು ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವ ಪ್ರಯತ್ನಗಳು ಈಗ ನಡೆಯುತ್ತಿವೆ. ಈ ನಿಟ್ಟಿನಲ್ಲಿ ಡಾ|| ಕೆ. ವೈ. ನಾರಾಯಣಸ್ವಾಮಿಯವರು ಅಖಂಡ ಮಾನವ ಸಂಸ್ಕೃತಿಯನ್ನು 'ಅಗ್ನಿ ಸಂಸ್ಕೃತಿ' ಮತ್ತು 'ಜಲ ಸಂಸ್ಕೃತಿ' ಎಂಬ ಎರಡು ಪರಿಕಲ್ಪನೆಯಲ್ಲಿ ಖಚಿತವಾಗಿ, ಯಾವ ಅಸ್ಪಷ್ಟತೆಗೂ ಎಡೆಯಾಗದಂತೆ, ಕಟ್ಟಿ ಕೊಡಲು 'ನೀರದೀವಿಗೆ'ಯಲ್ಲಿ ಪ್ರಯತ್ನಿಸಿದ್ದಾರೆ. 'ನೀರಿನ ರಾಜಕಾರಣ'ದ ಇಂದಿನ ದಿನಗಳಲ್ಲಿ ಅವರ ಕೃತಿ ಪ್ರಕಟಗೊಂಡಿರುವುದು ಕಾಕತಾಳೀಯವೋ ಎಂಬಂತೆ ಸ್ತುತ್ಯಾರ್ಹವಾಗಿದೆ.

ಸಂಸ್ಕೃತಿ ವಿಚಾರವೆಂಬುದು ಮತ್ಸ್ಯ ನ್ಯಾಯಕ್ಕೆ ಅನ್ವಯ ವಾಗುವಂತಿದೆ. ದೊಡ್ಡ ಮೀನು, ಚಿಕ್ಕ ಮೀನನ್ನು ನುಂಗಿ ನೀರು ಕುಡಿವ ಸಾಗರಾಂತರಂಗದ ನಿತ್ಯನೂತನ ಜೀವನೃತ್ಯ ನಾಟಕದಂತೆಯೇ ಮರ್ತ್ಯಲೋಕದ ಮಾನವ ನ್ಯಾಯವೂ ನಡೆದಿದೆ, ನಡೆಯುತ್ತಿದೆ. ಆದಿಮ ಕಾಲದಿಂದ ಈ ಭೂಮಂಡಲದ ಮೇಲೆ ನಡೆದುಬಂದಿರುವ ಮನುಷ್ಯನ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕತೆ ಯನ್ನೊಳಗೊಂಡ ಅವನ ಸಾಂಸ್ಕೃತಿಕ ಚರಿತೆಯನ್ನು 'ಜಲ ಸಂಸ್ಕೃತಿ' ಹಾಗೂ 'ಅಗ್ನಿ ಸಂಸ್ಕೃತಿ' ಎಂಬ ಅಭಿಧಾನದಲ್ಲಿ ಸೃಜನಾತ್ಮಕವೋ ಎಂಬಂತೆ ಪುನರ್‌ರಚಿಸಿಕೊಡಲು ಈ ಲೇಖಕರು ಪ್ರಯತ್ನಿಸಿದ್ದಾರೆ. ಸಂಸ್ಕೃತಿಗೆ ಸಂಬಂಧಪಟ್ಟ ಸಂಶೋಧನಾತ್ಮಕ ಪ್ರಬಂಧವಾಗಿದ್ದರೂ ಈ ಕೃತಿ ಒಂದು ಕಥೆಯೋ ಎಂಬಂತೆ ಓದಿಸಿಕೊಂಡು ಹೋಗುವುದು ಇದರ ವೈಶಿಷ್ಟ್ಯತೆಯಾಗಿದೆ. 'ಜಲ ಸಂಸ್ಕೃತಿ'ಯನ್ನು ಬಿಂಬಿ ಸಲು ಕೊಟ್ಟಿರುವ ಶೀರ್ಷಿಕೆ 'ನೀರದೀವಿಗೆ' ಎಂಬುದು ಆ ಸಂಸ್ಕೃತಿಯ ಪಾವಿತ್ರ್ಯತೆಗೆ ಒಡ್ಡಿದ ಸಾಕ್ಷಿ ಎಂಬಂತಿದೆ.

ಇದುವರೆಗಿನ ಸಂಸ್ಕೃತಿಯ ಅಧ್ಯಯನಕಾರರು ಯಾರೂ ಹೀಗೆ 'ಜಲ ಸಂಸ್ಕೃತಿ' ಮತ್ತು 'ಅಗ್ನಿ ಸಂಸ್ಕೃತಿ' ಎಂದು ನಿರ್ದಿಷ್ಟವಾಗಿ ವಿಷಯವನ್ನು ವಿಭಾಗಿಸಿಕೊಂಡು ಅಧ್ಯಯನ ಮಾಡಲು ಹೋದಂತೆ ಕಂಡುಬರುವುದಿಲ್ಲ. ಈ ಲೇಖಕರಿಗೆ ತಾನು ಏನನ್ನು ಹೇಳಲು ಹೊರಟಿದ್ದೇನೆ, ಹೇಗೆ ಹೇಳಬೇಕೆಂದಿದ್ದೇನೆ ಮತ್ತು ಯಾವ ರೀತಿಯಲ್ಲಿ ಹೇಳಬೇಕೆಂದಿದ್ದೇನೆ ಎಂಬುದರ ಬಗ್ಗೆ ಸ್ಪಷ್ಟ ಜ್ಞಾನವಿದೆ. ಮೊದಲಿಗೆ ಜನಪದ ಸಂಸ್ಕೃತಿಯ ಅಧ್ಯಯನಕ್ಕೆ




ಪುಟ : ೨೧೨+೧೬ ಬೆಲೆ : ರೂ. ೧೦೦

**ಲೋಹಿಯಾ ಪ್ರಕಾಶನ, ಬಳ್ಳಾರಿ**

ಎದುರಾಗುವ ಸಮಸ್ಯೆಗಳನ್ನು ಕುರಿತು ಚರ್ಚೆಗೆ ಒಳಗು ಮಾಡುತ್ತಾರೆ. ''ಒಂದು ಜನಸಮುದಾಯದ ಹಾಡು, ಆಟ, ಸಂಪ್ರದಾಯ, ಆಚರಣೆ, ವಿಧಿ ನಿಷೇಧ'' ಮುಂತಾದವುಗಳ ವಿಶ್ಲೇಷಣೆಯಿಂದ ಅದರ ಒಂದು ಸಾಂಸ್ಕೃತಿಕ ವಲಯವನ್ನು ಪ್ರವೇಶಿಸುತ್ತಾರೆ. ಅಲಿಖಿತ ಸಾಂಸ್ಕೃತಿಕ ವ್ಯವಸ್ಥೆ ಇರುವ ಕೃಷಿಕ ಸಮಾಜವನ್ನು ಕುರಿತ ಈ ಅಧ್ಯಯನವು ನೀರು ಮತ್ತು ಮನುಷ್ಯ ಸಂಬಂಧಗಳನ್ನು ಗ್ರಹಿಸುವತ್ತ ತೀವ್ರಶೋಧ ನಡೆಸಿದೆ. ನೀರಿಲ್ಲದೆ ಮನುಷ್ಯ ಜೀವನವನ್ನೇ ಇರಲಿ, ಸಕಲ ಚರಾಚರ ಸೃಷ್ಟಿಯನ್ನು ಊಹಿಸಲೂ ಸಾಧ್ಯವಿಲ್ಲ. ಕೃಷಿಯಂತೂ ನೀರಿಲ್ಲದೆ ಸಾಧ್ಯವೇ ಇಲ್ಲ. ಹೀಗಾಗಿ ಜನಪದರಲ್ಲಿ ನೀರನ್ನು ಕುರಿತ ಮಿಥ್‌ಗಳು, ಕತೆಗಳು, ಆಚರಣೆಗಳು, ಸ್ಥಳ ಪುರಾಣಗಳು, ನಂಬಿಕೆಗಳು ಮುಂತಾದವು ಅಸಂಖ್ಯ. ಅವುಗಳನ್ನು ಬಳಸಿಕೊಂಡು ಪಂಚಭೂತಗಳಲ್ಲಿ ಒಂದಾದ ನೀರಿನ ಬಗ್ಗೆ ಅರಿಯಲು ಇಲ್ಲಿ ಪ್ರಯತ್ನಿಸಲಾಗಿದೆ. ಆಗ ಸಹಜವಾಗಿಯೇ ಇತರ ವಿಚಾರಗಳು ಎಂದರೆ ಗಾಳಿ, ಬೆಂಕಿ, ಭೂಮಿ ಮತ್ತು ಆಕಾಶ ಜಾನಪದಗಳ ಬಗ್ಗೆಯೂ ಸಾಕಷ್ಟು ಚರ್ಚೆ ನಡೆಸಿರುವುದು ಉಚಿತವೆನಿಸಿದೆ. ಇವುಗಳ ಪರಸ್ಪರ ಗುಣಲಕ್ಷಣಗಳನ್ನು ವಿವರಿಸಿ ಅದರಲ್ಲಿ ಅಗ್ನಿಗೂ ನೀರಿಗೂ ಇರುವ ವಿರುದ್ಧ ಗುಣಲಕ್ಷಣಗಳನ್ನು ಗ್ರಹಿಸುವ ಮೂಲಕ ಇವುಗಳನ್ನು ಆಧರಿಸಿರುವ ಮಾನವ ಜನಾಂಗವನ್ನು ಅಗ್ನಿ ಸಂಸ್ಕೃತಿಯವರು ಮತ್ತು ಜಲ ಸಂಸ್ಕೃತಿಯವರು ಎಂದು ಕರೆದಿರುವುದು ಸ್ವಾಭಾವಿಕ ವೆಂಬಂತಿದೆ. ಈ ಎರಡು ಸಂಸ್ಕೃತಿಗಳ ಸಂಕರ ಹಾಗೂ ಸಂಘರ್ಷಗಳನ್ನು ಕುರಿತು ಉದ್ದಕ್ಕೂ ವಿವೇಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಜಲ ಸಂಸ್ಕೃತಿ ಏಕೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತ ನೀರು 'ಪೂರ್ಣ ತತ್ತ್ವ'ದ ಪ್ರತೀಕವಾಗಿದೆ ಎಂದು ಪ್ರತಿಪಾದಿಸಲಾಗಿದೆ. ಜಲ ಸಂಸ್ಕೃತಿಯು ನೆಲಕ್ಕೆ ಸಂಬಂಧಿಸಿದ್ದು, ಜೀವ ಪರವಾದದ್ದು ಎಂಬುದನ್ನೂ ಅಗ್ನಿ ಸಂಸ್ಕೃತಿ ವೈದಿಕ ಮೂಲವಾಗಿದ್ದು ಬಲಿಬೇಡುವ ಪರಲೋಕಕ್ಕೆ ಸಂಬಂಧಿಸಿದ್ದು ಆಗಿದೆ ಎಂಬುದನ್ನೂ ಆಧಾರಸಹಿತ ಮಂಡಿಸುತ್ತಾರೆ. ಆರ್ಯರು ಭಾರತಕ್ಕೆ ಬಂದ ಮೇಲೆ ಇಲ್ಲಿ ಮೊದಲಿದ್ದ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಛಿದ್ರಗೊಂಡು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ಬದಲಾಯಿತು ಎಂಬುದನ್ನು ಸಾಬೀತುಪಡಿಸಲು ಜನಪದರ ಆದಿಮ ಜೀವನ ವಿಧಾನದಿಂದ ಪ್ರಯತ್ನಿಸಲಾಗಿದೆ.

ಜಲಮೂಲ ಸಂಸ್ಕೃತಿಯಲ್ಲಿ ದೇವತೆಗಳೆಲ್ಲ ಸ್ತ್ರೀ ದೇವತೆಗಳೇ. ಗಂಗೆ, ಗೌರಿ, ಲಕ್ಷ್ಮಿ ಮುಂತಾದ ಶಿಷ್ಟ ದೇವತೆಗಳ ಕಲ್ಪನೆಯೂ ಸಹ ಈ ಸಂಸ್ಕೃತಿಯ ಪ್ರಭಾವವೇ ಎನ್ನಲಾಗಿದೆ. ಗ್ರಾಮ ದೇವತೆಗಳೆಂದರೆ ಸ್ತ್ರೀ ದೇವತೆಗಳೇ. ಆರಾಧನಾ ಕ್ರಮದಲ್ಲೂ ಮೂರ್ತಿಪೂಜೆ 'ಜಲ ಸಂಸ್ಕೃತಿ'ಯ ಲಕ್ಷಣವಾಗಿದೆ. ಜನಪದರಿಗೆ 'ಇಹ' ಮುಖ್ಯವಾದರೆ, ಶಿಷ್ಟರಿಗೆ 'ಪರ' ಮುಖ್ಯವಾಗಿದೆ. ಹಾಗೆಯೇ ಕೃಷಿ ಮೂಲದಿಂದ ಆವಿರ್ಭವಿಸಿದ ಜಲ ಸಂಸ್ಕೃತಿಯಲ್ಲಿ ಸ್ತ್ರೀಯೇ ಪ್ರಧಾನವಾಗಿದ್ದು ಕ್ರಮೇಣ ಆರ್ಯ-ದ್ರಾವಿಡ ಸಂಘರ್ಷದಲ್ಲಿ ಪಿತೃವೇ ಪ್ರಧಾನವಾಗುತ್ತ ನಡೆದುದು ಹೇಗೆಂಬುದನ್ನು ವಿವರಿಸಲಾಗಿದೆ.

ಜಲ ಸಂಸ್ಕೃತಿಯು ಕೃಷಿ ನೆಲೆಗಟ್ಟಿನ ಮೇಲೆ ನಿಂತಿದ್ದು ಹುಟ್ಟು, ಮದುವೆ, ಸಾವುಗಳಲ್ಲಿ ನೀರಿನ ಸಹಭಾಗಿತ್ವ ವನ್ನು ಪಾರಿಶುದ್ಧತೆಯನ್ನು ಮನಗಾಣಿಸಲಾಗಿದೆ. ಹೆಣ್ಣನ್ನು ಭೂಮಿಯೊಡನೆ ಸಮೀಕರಿಸಿ ಕ್ಷೇತ್ರವೆಂದೂ, ಗಂಡನ್ನು ಆಕಾಶಕ್ಕೆ ಸಮೀಕರಿಸಿ ಗಂಡಿನ ವೀರ್ಯದಾನದಿಂದ ಕ್ಷೇತ್ರಕ್ಕೆ ಮೌಲ್ಯವು ಬಂದಿತೆಂದೂ ಅಗ್ನಿ ಸಂಸ್ಕೃತಿ ತನ್ನ ಮೇಲ್ಮೆ ಯನ್ನು ಸ್ಥಾಪಿಸಿದೆ. ಆದರೆ ಜಲ ಸಂಸ್ಕೃತಿಯಲ್ಲಿ ಹೆಣ್ಣು ಇದನ್ನು ಪ್ರತಿಭಟಿಸಿ ಸಮಾನತೆಗಾಗಿ ಆದಿಮ ಕಾಲದಲ್ಲಿ ಸೆಣಸಾಡಿದ್ದಾಳೆ ಎಂಬುದನ್ನು 'ಗಂಡಿನ ಬಲಿದಾನ' ಗಳಿಂದ ಸ್ಪಷ್ಟಪಡಿಸಲಾಗಿದೆ.

ಆದರೆ ಕಾಲಾಂತರದಲ್ಲಿ ಈ ಎರಡೂ ಸಂಸ್ಕೃತಿಗಳಲ್ಲಿ ಸಾಕಷ್ಟು ಸಂಕರ-ಸಂಘರ್ಷಗಳು ನಡೆದುಹೋದವು. ಗಂಡಿನ ಹಿಂಸೆಯನ್ನು ಹೆಣ್ಣು ತಣ್ಣಗೆ ಒಪ್ಪಿಕೊಳ್ಳುವಿಕೆಯ ಮಾದರಿಗಳನ್ನು ಉಲ್ಲೇಖಿಸಲಾಗಿದೆ. ಇದಕ್ಕೆ ಜನಪದ ಕಾವ್ಯಗಳಾದ ಮಲೈಮಹದೇಶ್ವರ ಹಾಗೂ ಎಲ್ಲಮ್ಮ ರೇಣುಕೆಯರ ಕಥನಗಳನ್ನು ಬಳಸಿಕೊಂಡಿರುವುದು ಔಚಿತ್ಯಪೂರ್ಣವಾಗಿದೆ. ಇದರೊಟ್ಟಿಗೆ ಗಣಪತಿಯ ಹಿಂಸೆಯ ರೂಪಕವನ್ನು ನೀಡುವ ಮೂಲಕ ಇಲ್ಲಿ ಹುದುಗಿರುವ ಅಗ್ನಿ ಸಂಸ್ಕೃತಿಯ (ಪಿತೃಪ್ರಧಾನ) ಹಿಂಸೆಯ ಸ್ವರೂಪವನ್ನು ಅನನ್ಯವೆಂಬಂತೆ ಚಿತ್ರಿಸಿದ್ದಾರೆ. ನೀರದೀವಿಗೆಯ ಕೇಂದ್ರಭಾಗ ಇದಾಗಿದೆ. ಇಲ್ಲಿ ಮುಖ್ಯ ಪಠ್ಯಗಳೆಂದರೆ ಜನಪದ ಆಚರಣೆಗಳು.

ಅಧ್ಯಾಯ ಎಂಟರಲ್ಲಿ ನೀರಿನ ವಿವಿಧ ರೂಪಗಳಾದ ಗಂಗಮ್ಮ, ಮಳೆ, ನದಿ, ತೀರ್ಥ ಮತ್ತು ನೀರು – ಇವುಗಳ ಸ್ವರೂಪ ಏನೆಂಬುದನ್ನು ಕನ್ನಡ ಜನಪದ ಸಾಹಿತ್ಯ ಹಾಗೂ ಆಚರಣೆಗಳ ಮೂಲಕ ಆಪ್ತವಾಗಿ ಪರಿಚಯಿಸುತ್ತಾರೆ.

ಜಲ ಸಂಸ್ಕೃತಿ ಎಂದರೆ ನೀರಿನ ವಿವಿಧ ರೂಪಗಳ ಪಾವಿತ್ರ್ಯತೆಯ ಪರಿಕಲ್ಪನೆಯೇ ಆಗಿದೆ.

ಇನ್ನು ಡಾ॥ ನಾರಾಯಣಸ್ವಾಮಿಯವರ ಗಮನಕ್ಕೆ ಬಾರದೆ ಇರುವ ಒಂದೆರಡು ವಿಷಯಗಳನ್ನು ಇಲ್ಲಿ ಪೂರಕವಾಗಿ ಪ್ರಸ್ತಾಪಿಸಬಹುದೇನೊ. ಒಂದನೆಯದಾಗಿ, ದೇವಿ ಮಹಾತ್ಮೆ ಬಗ್ಗೆ: ಆದಿಶಕ್ತಿ ಸ್ವರೂಪಳಾದ ದೇವಿ ಬ್ರಹ್ಮಾಂಡಕ್ಕೆ ಮೂಲಸ್ವರೂಪಳು; ಈಕೆ ಪುರುಷ ಸಂಸರ್ಗ ವಿಲ್ಲದೆ ಮೂರು ಮೊಟ್ಟೆಗಳನ್ನು ಇಟ್ಟು ಹರಿ, ಹರ, ವಿರಂಚಿ ಗಳೆಂಬ ತ್ರಿವಳಿ ಮಕ್ಕಳನ್ನು ಪಡೆದಳು ಎಂಬುದನ್ನು ಎಲ್ಲಮ್ಮ ರೇಣುಕೆಯ ಸಂದರ್ಭದಲ್ಲಿ ಉಲ್ಲೇಖಿಸಲು ಅರ್ಹವಾಗಿತ್ತು.

ಎರಡನೆಯದಾಗಿ, ಅಗ್ನಿ ಸಂಸ್ಕೃತಿ ವ್ಯಕ್ತಿನಿಷ್ಠವಾದುದು ಎಂಬುದನ್ನು ಪ್ರತಿಪಾದಿಸಲು ಉಪನಿಷತ್ತಿನಲ್ಲಿಯೇ ಉಕ್ತವಾಗಿರುವ ನಚಿಕೇತನ ಕಥೆಯನ್ನು ಉಲ್ಲೇಖಿಸಬಹುದಿತ್ತು. ನಚಿಕೇತ ವಾಜಸ್ರವಸನೆಂಬ ಯಾಜ್ಞಿಕನ ಮಗ. ಈತನ ತಂದೆ ವಿಶ್ವಜಿತ್ ಯಾಗ ಮಾಡುವಲ್ಲಿ ಮಗನನ್ನೇ ಅಗ್ನಿಗೆ ಆಹುತಿ ನೀಡುತ್ತಾನೆ ಎಂಬುದು ಗಮನಾರ್ಹ.

ಮೂರನೆಯದಾಗಿ, 'ಕೆರೆಗೆ ಹಾರ'ದಲ್ಲಿ ಫ್ಯೂಡಲ್ ಮಲ್ಲನ ಗೌಡನಿಗೆ 'ಸಾಮೂಹಿಕ ದೃಷ್ಟಿ ಹಾಗೂ ಜವಾಬ್ದಾರಿ' ಇತ್ತೆಂದು ಹೇಳುವುದಕ್ಕೆ ಆದರಲ್ಲಿ ಆಧಾರವಿಲ್ಲ. ಆದ್ದರಿಂದ ಅವನಲ್ಲಿಲ್ಲದ ಮೌಲ್ಯವನ್ನು ವೃಥಾ ಆರೋಪಿಸುವುದು 'ಜಲ ಸಂಸ್ಕೃತಿ'ಯ ಹಿನ್ನೆಲೆಯಲ್ಲಿ ಸರಿಕಾಣದು. (ಪು. ೧೨೧). ಏಕೆಂದರೆ ಹೆಣ್ಣನ್ನು ಹಿಂಸೆಗೊಳಪಡಿಸುವಲ್ಲಿ ಈತನೂ ಅಗ್ನಿ ಸಂಸ್ಕೃತಿಗೆ ವಾರಸುದಾರನಾದ ಪುರುಷನೇ ಆಗಿದ್ದಾನೆ. ಪ್ರೊ॥ ಜಿ. ಎಸ್. ಸಿದ್ಧರಾಮಯ್ಯನವರಿಗೂ ಕೂಡ 'ಕೆರೆಗೆ ಹಾರ'ವನ್ನು ಕುರಿತು ಎಂಬ ತಮ್ಮ ಕಿರು ಕೃತಿಯಲ್ಲಿ ಇದೇ ಅಭಿಪ್ರಾಯವಿದ್ದು ನಾರಾಯಣಸ್ವಾಮಿಗಳು ಅವರನ್ನು ಅನುಮೋದಿಸಿದ್ದಾರೆ. ಆದರೆ ಇನ್ನೂ ಅಲಿಖಿತವಾಗಿರುವ ಜನಪದ ಕತೆಗಳಲ್ಲಿ ಗೌಡನು ತನ್ನ ಸೊಸೆಗೆ ಬದಲಾಗಿ ಆಳುಮಗನ ಹೆಂಡತಿ ದಲಿತ ಹೆಣ್ಣನ್ನು ಕೆರೆಗೆ ಬಲಿ ಕೊಟ್ಟಿರುವ ಐತಿಹ್ಯಗಳುಂಟು. ಎಂದರೆ ಬಲಿದಾನವೆಂಬ ದಲಿತ ಹೆಣ್ಣಿನ ಪರವಾದ ಒಂದು ಮೌಲ್ಯವನ್ನು ಅವಳ ಒಡೆಯರ ಲೋಕಕ್ಕೆ ಹೈಜಾಕ್ (ಅಪಹರಣ) ಮಾಡಿದಂತೆ ಭಾಸವಾಗುತ್ತದೆ. ಆದ್ದರಿಂದ ಜಲ ಸಂಸ್ಕೃತಿಯಲ್ಲಿಯೂ ಇದ್ದಿರಬಹುದಾದ ಗಂಡಿನ ಇಂಥ ಹಿಂಸಾತಾರತಮ್ಯ ಸಂಗತಿಗಳನ್ನು 'ನೀರದೀವಿಗೆ'ಯಲ್ಲಿ ಪ್ರಸ್ತಾಪಿಸಬಹುದಿತ್ತು ಎಂಬುದು ನನ್ನ ಅನಿಸಿಕೆ.

ಇದು ಏನೇ ಇರಲಿ, ಇಂಥ ಹಲವು ಬಗೆಯ ಚಿಂತನ-ಮಂಥನಕ್ಕೆ 'ನೀರ ದೀವಿಗೆ' ಓದುಗರನ್ನು ಆಹ್ವಾನಿಸುತ್ತದೆ. ಸಂಸ್ಕೃತಿ ಸಂದರ್ಭದ ಚರ್ಚೆಗಳೇ ಹೀಗೆ. ಕಡೆಯದಾಗಿ ಉಪಸಂಹಾರ ಮಾಡುತ್ತ ಡಾ॥ ನಾರಾಯಣಸ್ವಾಮಿಯವರು ಹೇಳುವ ಇವತ್ತಿನ ಜಾಗತಿಕ ಸಮಸ್ಯೆಗಳಿಗೆ 'ಜಲ ಸಂಸ್ಕೃತಿ'ಯಲ್ಲಿ ಪರಿಹಾರೋಪಾಯಗಳು ಉಂಟು ಎಂಬುದರಲ್ಲಿ ಎರಡು ಮಾತಿಲ್ಲ. ಸಾಮ್ರಾಜ್ಯಶಾಹಿ ಶಕ್ತಿಗಳು ತೃತೀಯ ಜಗತ್ತಿನ ರಾಷ್ಟ್ರಗಳನ್ನು ಅಗ್ನಿ ಸಂಸ್ಕೃತಿಯ ಮೂಲಕ ಆಪೋಶನಗೊಳ್ಳುತ್ತ ಅವುಗಳನ್ನು ಸಾಂಸ್ಕೃತಿಕವಾಗಿ ಮುಖಹೀನಗೊಳಿಸಿ, ಅವುಗಳ ಅಂತಃಸತ್ವವನ್ನು ಛಿದ್ರಗೊಳಿಸಿ ತಮ್ಮ ಪಾರುಪತ್ಯವನ್ನು ಸ್ಥಾಪಿಸುತ್ತಿವೆ. ವಾಸನಾಮೂಲದಿಂದ ಈ ಪ್ರಕ್ರಿಯೆಗೆ ತಮ್ಮ ಕುಮ್ಮಕ್ಕು ನೀಡುತ್ತಿರುವ ಸಂಘ ಪರಿವಾರದ ನಮ್ಮ ಜನ ಸ್ವದೇಶಿ ಮಂತ್ರವನ್ನು ಜಪಿಸುತ್ತಲೇ ಆರ್ಥಿಕ ಸಾಮ್ರಾಜ್ಯ ಶಾಹಿಗಳಿಗೆ ಮಣೆ ಹಾಕುತ್ತಿದ್ದಾರೆ. ಇಂಥ ಅಪಾಯದ ಸ್ಥಿತಿಯಲ್ಲಿ ರಾಷ್ಟ್ರದ ಮುಂದಿರುವ ಒಂದೇ ದಾರಿ ಎಂದರೆ ಮತ್ತೆ ನಮ್ಮ ಜಾನಪದಕ್ಕೆ ಹಿಂತಿರುಗುವುದು. ''ಅಂದರೆ ಆಚರಣೆ, ನಂಬಿಕೆ, ಮಂತ್ರಾಚರಣೆ, ವೈದ್ಯಪದ್ಧತಿ, ಕೃಷಿ ಪದ್ಧತಿ ಮುಂತಾದವುಗಳನ್ನು ಅಧ್ಯಯನ ಮಾಡುವ ಮೂಲಕ ತಮ್ಮ ಸಾಂಸ್ಕೃತಿಕ ವಲಯಗಳಿಗೆ ಹಿಂತಿರುಗುವುದು.'' ಜಾಗತೀಕರಣದ ವಿಕಾರಗಳನ್ನು ಗೆಲ್ಲಲು ಇದನ್ನು ಬಿಟ್ಟರೆ ಅನ್ಯ ಮಾರ್ಗವಿಲ್ಲ ಎಂಬ ಲೇಖಕರ ಚಿಂತನೆ ಉಚಿತವಾಗಿದೆ.

**ಶಿವರಾಮಯ್ಯ**
ನಂ. ೧೭೨, ಐಸೆಕ್‌ರೋಡ್
ನಾಗರಭಾವಿ, ಬೆಂಗಳೂರು-೫೬೦ ೦೭೨

# ಸರ್ವೆ ಮಾಡಲು ಬಂದು ಕೈಫಿಯತ್ತುಗಳನ್ನು ಸಂಗ್ರಹಿಸಿದ ಕರ್ನಲ್ ಕಾಲಿನ್ ಮೆಕೆಂಜಿ

ಡಾ|| ಎಚ್. ಎಸ್. ಗೋಪಾಲ ರಾವ್

**ಕ**ರ್ನಲ್ ಮೆಕೆಂಜಿಯನ್ನು ಇತಿಹಾಸಕಾರರ ಗುಂಪಿಗೆ ಸೇರಿಸಲಾಗುವುದಿಲ್ಲ. ಆತನ ವೃತ್ತಿ ಮತ್ತು ಪ್ರವೃತ್ತಿಗಳಿಗೆ ಅರ್ಥಾತ್ ಸಂಬಂಧ ಇರಲಿಲ್ಲ. ಆದರೆ ಅವನ ಅಗಾಧ ಕೆಲಸವನ್ನು ಕರ್ನಾಟಕದ ಬಗ್ಗೆ ಕೆಲಸ ಮಾಡುವ ಯಾವ ಸಂಶೋಧಕನೂ ಅಲ್ಲಗಳೆದು ಮುಂದೆ ಸಾಗುವಂತಿಲ್ಲ.

ಸೈನ್ಯದಲ್ಲಿ ಅಧಿಕಾರಿಯಾಗಿ ಕೆಲಸ ಮಾಡಿದ ಮೆಕೆಂಜಿ ಭಾರತಕ್ಕೆ ಬಂದದ್ದು ಹಣ ಗಳಿಸುವ ಸಲುವಾಗಿ: ಆ ಕಾಲದ ಅನೇಕ ಬ್ರಿಟಿಷ್ ತರುಣರಿಗೆ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಕೆಲಸ ಪಡೆದು ಭಾರತಕ್ಕೆ ಬಂದು ಇಲ್ಲಿ ಹಣ ಗಳಿಸಿ, ಕೂಡಿಟ್ಟು, ನಿವೃತ್ತಿಯ ನಂತರ ಸುಖ ಜೀವನ ನಡೆಸುವ ಹಂಬಲವೇ ಪ್ರಮುಖವಾಗಿತ್ತು ಎಂದು ತಿಳಿಯಲಾಗಿದೆ. ಅಂತಹ ಹಂಬಲ ಹೊತ್ತು ಭಾರತಕ್ಕೆ ಬಂದವನೇ ಕಾಲಿನ್ ಮೆಕೆಂಜಿ.

ತನ್ನ ಮೂವತ್ತನೆಯ ವಯಸ್ಸಿನಲ್ಲಿ ಭಾರತಕ್ಕೆ ಬಂದ ಕಾಲಿನ್ ಮೆಕೆಂಜಿ, ೧೭೪೮ರಲ್ಲಿ ಮಾರ್ಡೋಕ್ ಮೆಕೆಂಜಿ ಮತ್ತು ಬಾರ್ಬರಾ ಅವರ ಎರಡನೆಯ ಸಂತಾನವಾಗಿ ಜನ್ಮ ತಾಳಿದ. ಅವನ ಅಣ್ಣ ಅಲೆಕ್ಸಾಂಡರ್ ಮತ್ತು ತಮ್ಮ ಕೆನೆತ್. ಇದ್ದ ಒಬ್ಬ ತಂಗಿ ಮೇರಿಯ ಬಗ್ಗೆ ಕಾಲಿನ್‌ಗೆ ಪ್ರೀತಿ ಹೆಚ್ಚು. ಅವನು ಹುಟ್ಟಿದ್ದು ಲೂಯಿ ದ್ವೀಪದ ಸಣ್ಣ ಪಟ್ಟಣ ಸೋರೋ ವೇಲಿಯಲ್ಲಿ. ಚಿಕ್ಕ ವಯಸ್ಸಿನಲ್ಲೇ ಅವನಿಗಿದ್ದ ಆಸೆ ಹಣ ಮತ್ತು ಹೆಸರನ್ನು ಗಳಿಸುವುದು. ಅದಕ್ಕೆ ತಕ್ಕಂತೆ ತನ್ನ ಜೀವನವನ್ನು ರೂಪಿಸಿಕೊಂಡವನು ಕಾಲಿನ್. ಕರ್ನಲ್ ಕಾಲಿನ್ ಮೆಕೆಂಜಿ ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಸರ್ವೇಕ್ಷಕನ ಕೆಲಸ ಮಾಡಿ, ತನ್ನ ಹಿರಿಯ ಅಧಿಕಾರಿಗಳಿಂದ ಮೆಚ್ಚುಗೆ ಪಡೆದಿದ್ದಾನೆ. ಆದರೆ ಈಗಲೂ ಅವನು ಭಾರತೀಯ ಸಂಶೋಧಕರ ನೆನಪಿನಲ್ಲಿ ಉಳಿದಿರುವುದು ಅವನು ಮಾಡಿದ ಹಸ್ತಪ್ರತಿಗಳ ಸರ್ವೇಕ್ಷಣೆ ಮತ್ತು ಅವುಗಳ ಸಂಗ್ರಹಣ ಕಾರ್ಯದಿಂದ ಎಂದು ಯಾವುದೇ ಅನುಮಾನವಿಲ್ಲದೆ ಹೇಳಬಹುದು.

ಮೊದಲಿಗೆ ಮೆಕೆಂಜಿಯು ಲಾರ್ಡ್ ನೇಪಿಯರ್‌ನ ಬಳಿ ಸಂಶೋಧನೆಗೆ ತೊಡಗಿದ. ಆಗ ಲಾರ್ಡ್ ನೇಪಿಯರನು ಇಂಗ್ಲಿಷ್ ಲಾಗರಿತಮ್ ಅನ್ನು ಸಿದ್ಧಪಡಿಸಿದ್ದ ಜಾನ್ ನೇಪಿಯರ್‌ನ ಆತ್ಮಕತೆ ಬರೆಯುತ್ತಿದ್ದ. ಗಣಿತಶಾಸ್ತ್ರಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ಇರುವ ಮಾಹಿತಿಯನ್ನು ತನ್ನ ಶಿಷ್ಯ ಕಾಲಿನ್ ಮೆಕೆಂಜಿ ಒದಗಿಸಿಕೊಡಲಿ ಎಂಬುದು ಲಾರ್ಡ್ ನೇಪಿಯರ್‌ನ ಅಪೇಕ್ಷೆ ಆಗಿತ್ತು. ಮೆಕೆಂಜಿಗೆ ಬೇಕಾಗಿದ್ದುದೂ ಅಂತಹುದೇ ಒಂದು ಅವಕಾಶ. ತನ್ನಷ್ಟಕ್ಕೆ ತಾನೇ ಒದಗಿಬಂದ ಅವಕಾಶವನ್ನು ಮೆಕೆಂಜಿ ಸದುಪಯೋಗ ಮಾಡಿಕೊಂಡ. ಕಾಲಿನ್ ಮೆಕೆಂಜಿ ಮದ್ರಾಸ್ ಆಧಿಪತ್ಯದಲ್ಲಿ ಎಂಜಿನಿಯರ್ ಆಗಿ ನೇಮಕಗೊಂಡು, ೨-೯-೧೭೮೩ ರಂದು ಮದ್ರಾಸ್ ತಲುಪಿದ. ಆ ಸಮಯದಲ್ಲಿ ಭಾರತದಲ್ಲಿ ಗವರ್ನರ್ ಜನರಲ್ ಆಗಿದ್ದವನು ವಾರೆನ್ ಹೇಸ್ಟಿಂಗ್ಸ್. ಅದೇ ಹೊತ್ತಿಗೆ ಭಾರತದಲ್ಲಿ ಬ್ರಿಟಿಷರು ಟಿಪ್ಪುವಿನ ಪ್ರಬಲ ವಿರೋಧವನ್ನು ಎದುರಿಸುತ್ತಿದ್ದರು. ಲಾಗರಿತಮ್‌ಗೆ ಸಂಬಂಧಿಸಿದ ಮಾಹಿತಿ ಸಂಗ್ರಹಣೆಗಾಗಿ ಮೆಕೆಂಜಿಯು ಮಧುರೆಗೆ ಹೋಗಿದ್ದಾಗ ಅಲ್ಲಿ ಅವನು ಕಂಡ ಪಂಡಿತ ಮಂಡಳಿಯ ಬಗ್ಗೆ ಗೌರವ ಮತ್ತು ಅವರ ಜ್ಞಾನದ ವಿಚಾರದಲ್ಲಿ ಅಪಾರ ವಿಶ್ವಾಸ ಹುಟ್ಟಿತು.

ಮೆಕೆಂಜಿಯು ತಾನು ನೇಮಕಗೊಂಡಿದ್ದ ಕೆಲಸದಲ್ಲೂ ಸಹ ಒಳ್ಳೆಯ ಹೆಸರನ್ನು ಪಡೆದಿದ್ದ; ಅವನ ಕೆಲಸದ ಬಗ್ಗೆ ಅವನ ಹಿರಿಯ ಅಧಿಕಾರಿಗಳಿಗೆ ನಂಬಿಕೆ ಮತ್ತು ವಿಶ್ವಾಸ ಗಳಿದ್ದವು. ೧೭೮೩ರಲ್ಲಿ ಸೈನ್ಯದ ಎಂಜಿನಿಯರಿಂಗ್ ವಿಭಾಗದಲ್ಲಿ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಮೆಕೆಂಜಿಯು ೧೭೮೬ರಲ್ಲಿ ಮೇಲ್ವಿಚಾರಣಾಧಿಕಾರಿಯಾದ. ೧೭೮೯ರಲ್ಲಿ ಲೆಫ್ಟಿನೆಂಟ್ ಹುದ್ದೆಗೆ ಏರಿದ ಮೆಕೆಂಜಿಯು ೧೭೯೩ರಲ್ಲಿ ಕ್ಯಾಪ್ಟನ್ ಆದ. ನಂತರ ೧೮೦೬ರಲ್ಲಿ ಮೇಜರ್ ಹುದ್ದೆಗೂ, ೧೮೦೯ರಲ್ಲಿ ಬ್ರೆವೆಟ್ ಲೆಫ್ಟಿನೆಂಟ್ ಹುದ್ದೆಗೂ, ೧೮೧೦ರಲ್ಲಿ ರೆಜಿಮೆಂಟ್‌ನ ಲೆಫ್ಟಿನೆಂಟ್ ಹುದ್ದೆಗೂ, ಅಂತಿಮವಾಗಿ ೧೮೧೯ರಲ್ಲಿ ಕರ್ನಲ್ ಹುದ್ದೆಗೂ ಬಡ್ತಿ ಪಡೆದ ಮೆಕೆಂಜಿಯು ತನ್ನ ವೃತ್ತಿಯಲ್ಲಿ ತನ್ನ ಹಿರಿಯ ಅಧಿಕಾರಿಗಳ ವಿಶ್ವಾಸವನ್ನು ಗಳಿಸಿದ್ದ. ನಿವೃತ್ತನಾದಾಗ ಮೆಕೆಂಜಿಯು ಭಾರತದ ಸರ್ವೆಯರ್ ಜನರಲ್ ಆಗಿದ್ದ.

ಮೆಕೆಂಜಿಯ ವೃತ್ತಿ ಜೀವನದ ಬಗ್ಗೆ ನಾವು ಆಸಕ್ತಿ ವಹಿಸಬೇಕಾದದ್ದು ಪ್ರಸ್ತುತವಲ್ಲ; ಅವನ ಪ್ರವೃತ್ತಿಯೇ ನಮಗೆ ಮುಖ್ಯ ಮತ್ತು ಆ ನಿಟ್ಟಿನಲ್ಲಿ ಅವನ ಸಾಧನೆಗಳೇ ನಮಗೆ ವಿಶೇಷ ಮಹತ್ವದವು. ಟಿಪ್ಪೂ ಸುಲ್ತಾನನನ್ನು ಸೋಲಿಸಿದ ಬಳಿಕ ಬ್ರಿಟಿಷರು ಹೈದರಾಬಾದ್ ನಿಜಾಮನೊಡನೆ ಪ್ರದೇಶಗಳ ಹಂಚಿಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಆ ಕೆಲಸವನ್ನು ಸುಲಭ ಮಾಡಿಕೊಟ್ಟದ್ದು ಮೆಕೆಂಜಿಯ ಸರ್ವೇಕ್ಷಣೆ.

ಇಡೀ ಭಾರತವನ್ನು, ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತವನ್ನು ಸರ್ವೆಯ ನೆಪದಲ್ಲಿ ಚೆನ್ನಾಗಿ ಸುತ್ತಿದ ಮೆಕೆಂಜಿಯು ತಾನು ಹೋದೆಡೆಯಲ್ಲೆಲ್ಲಾ ಸ್ಥಳೀಯರ ಬಳಿ ಆ ಊರಿನ, ಆ ಪ್ರದೇಶದ ಇತಿಹಾಸವನ್ನು ತಿಳಿಯಲು ಪ್ರಯತ್ನಿಸುತ್ತಿದ್ದ. ಸ್ಥಳೀಯರು ಹೇಳುವುದೆಲ್ಲವೂ ಇತಿಹಾಸವಲ್ಲ ಎಂದು ಅವನಿಗೆ ತಿಳಿದಿದ್ದರೂ, ಅಂತಹ ಕತೆಗಳಲ್ಲಿ ಇರುವ ಇತಿಹಾಸದ ಎಳೆಗಳನ್ನು ತಿಳಿಯಲು ಅವನ ಶ್ರಮ ಅವಕಾಶ ನೀಡಿತು. ಇತಿಹಾಸವನ್ನು ತಿಳಿಯುವ ತನ್ನ ಪ್ರಯತ್ನದಲ್ಲಿ ಮೆಕೆಂಜಿಯು ಐತಿಹ್ಯ, ಸ್ಥಳ ಪುರಾಣ, ಜಾನಪದ ಕಥೆಗಳು ಇತ್ಯಾದಿ ವಾಕ್‌ರೂಪದ ನೆನಪುಗಳನ್ನು ಮತ್ತು ಆಯಾ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳು ಮತ್ತು ಆಯುಧ ಇತ್ಯಾದಿ ವಾಸ್ತು ವಿಶೇಷಗಳ ಮೂಲಕ ಪ್ರಾದೇಶಿಕ ಇತಿಹಾಸವನ್ನು ಸಂಗ್ರಹಿಸಿ, ಪ್ರಕಟಿಸಿ ಭಾರತದ ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸಕ್ಕೆ ದಾಖಲೆಯ ರೂಪವನ್ನು ದೊರಕಿಸಿಕೊಟ್ಟಿದ್ದಾನೆ.

ವೃತ್ತಿಯ ಜೊತೆಗೆ ಹಮ್ಮಿಕೊಂಡಿದ್ದ ಪ್ರವೃತ್ತಿಗೆ ಮೊದ ಮೊದಲು ಮೇಲಧಿಕಾರಿಗಳಿಂದ ಪ್ರೋತ್ಸಾಹ ದೊರೆಯಲಿಲ್ಲ. ಆದರೂ ಮೆಕೆಂಜಿಯ ಕೆಲಸ ನಿಲ್ಲಲಿಲ್ಲ. ನಂತರದ ದಿನಗಳಲ್ಲಿ ಬ್ರಿಟಿಷ್ ಸರ್ಕಾರವು ಅವನ ವೃತ್ತಿಯೇತರ ಕೆಲಸಗಳನ್ನೂ ಗುರುತಿಸಿ ಗೌರವಿಸಿತು ಮಾತ್ರವಲ್ಲದೆ ಆ ಕೆಲಸಗಳಿಗೂ ಹಣ ಸಹಾಯ ಮಾಡಿತು. ಒಮ್ಮೆ ಭಾರತಕ್ಕೆ ಬಂದ ಮೆಕೆಂಜಿಯು ನಿವೃತ್ತಿಯವರೆಗೆ ಸುಮಾರು ೩೪ ವರ್ಷಗಳಷ್ಟು ದೀರ್ಘಕಾಲ ಒಮ್ಮೆಯೂ ಸ್ವದೇಶಕ್ಕೆ ಹೋಗಲಿಲ್ಲ; ಇದರಿಂದ ಅವನ ಬಿಡುವಿಲ್ಲದ ಕೆಲಸಗಳನ್ನು ಗುರುತಿಸ ಬಹುದು. ವೃತ್ತಿ ಜೀವನದ ಸರ್ವೇಕ್ಷಣೆ, ಪ್ರವೃತ್ತಿಯ ದೇಶೀಯ ಇತಿಹಾಸ ಮತ್ತು ಸಂಸ್ಕೃತಿಗಳ ದಾಖಲೆಗಳ ಸಂಗ್ರಹಣೆ ಇತ್ಯಾದಿಗಳಿಗಾಗಿಯೇ ತನ್ನ ಬದುಕಿನ ಬಹು ಭಾಗವನ್ನು ವಿನಿಯೋಗಿಸಿದ ಮೆಕೆಂಜಿಗೆ ಬಿಡುವು ಎನ್ನುವುದು ಬಹುತೇಕ ಅರ್ಥ ಕೋಶದಲ್ಲಿ ಮಾತ್ರ ಕಂಡ ಶಬ್ದ ಎನಿಸುತ್ತದೆ.

ತನ್ನ ಪ್ರವೃತ್ತಿಯ ಕೆಲಸಗಳಿಗಾಗಿಯೇ ಮೆಕೆಂಜಿಯು ದೇಶೀಯ ಪಂಡಿತರ ಒಂದು ಕಚೇರಿಯನ್ನೇ ಸ್ಥಾಪಿಸಿದ್ದ. ಹಳೆಯ ಕಾವ್ಯಗಳು, ಶಾಸನಗಳು ಇತ್ಯಾದಿಗಳನ್ನು ಓದಿ, ತನಗೆ ಅರ್ಥ ತಿಳಿಸಲು ಮತ್ತು ಅವುಗಳ ಪ್ರತಿಗಳನ್ನು ತಯಾರಿಸಲು ಮೆಕೆಂಜಿಯು ಪಂಡಿತರನ್ನು ನೇಮಿಸಿ ಕೊಂಡಿದ್ದ. ಅಂತಹ ಸಿಬ್ಬಂದಿಯಲ್ಲಿ ಕವೆಲ್ಲಿ ಬೋರಯ್ಯ ಎಂಬುವವನು ವಿಶೇಷ ಮನ್ನಣೆ ಪಡೆದಿದ್ದಂತೆ ತೋರುತ್ತದೆ. ಕವೆಲ್ಲಿ ಬೋರಯ್ಯನು ಮೆಕೆಂಜಿಗೆ ಹಳಗನ್ನಡ ಕಾವ್ಯ, ಕೈಬರಹದ ದಾಖಲೆಗಳು, ಶಿಲಾಶಾಸನಗಳು ಇತ್ಯಾದಿಗಳ ಓದು, ಅಧ್ಯಯನ ಮತ್ತು ಅವಶ್ಯಕ ಭಾಷಾಂತರಗಳ ವಿಷಯದಲ್ಲಿ ಸಹಾಯಕನಾಗಿದ್ದುದು ಮಾತ್ರವಲ್ಲದೆ, ಮೆಕೆಂಜಿಯ ಜೊತೆಗೆ ಯುದ್ಧಭೂಮಿಗೂ ಹೋಗಿ, ಅಲ್ಲಿಯೂ ತನ್ನ ಕೆಲಸವನ್ನು ಮುಂದುವರಿಸುತ್ತಿದ್ದಂತೆ ತೋರುತ್ತದೆ. ಆದರೆ ಕವೆಲ್ಲಿ ಬೋರಯ್ಯನು ೧೮೦೩ರಲ್ಲಿ ತನ್ನ ೨೬ನೆಯ ವಯಸ್ಸಿನಲ್ಲೇ ತೀರಿಕೊಂಡ. ತೀರಿಕೊಳ್ಳುವ ಮೊದಲು ತನ್ನ ತಮ್ಮಂದಿರು ಮತ್ತು ಇನ್ನೂ ಕೆಲವು ತರುಣರನ್ನು ಮೆಕೆಂಜಿಯ ಕೆಲಸಕ್ಕೆ ಅಣಿ ಮಾಡಿದ್ದ. ಅವರಲ್ಲಿ ಮುಖ್ಯನಾದವನು ಕವೆಲ್ಲಿ ವೆಂಕಟ ಲೆಚ್ಚಯ್ಯ.

ಮೆಕೆಂಜಿಯು ಸುಮಾರು ೧೭೦೦ ಶಾಸನಗಳು ಮತ್ತು ಸುಮಾರು ೬೦೦ ಬೇರೆ ಬೇರೆ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದ. ತಾನು ಸಂಗಹಿಸಿದ್ದ ಕನ್ನಡ ಕೃತಿಗಳನ್ನು ಮೆಕೆಂಜಿಯು ಇತಿಹಾಸ, ಕಾವ್ಯ, ಜೈನಶಾಸ್ತ್ರ ಇತ್ಯಾದಿ ಗುಂಪುಗಳಾಗಿ ವಿಂಗಡಿಸಿದ್ದರೂ ಸಹ, ಆ ವಿಂಗಡಣೆಯು ಸರಿಯಾಗಿಲ್ಲ ಎಂದು ತಿಳಿಯಲಾಗಿದೆ. ಮೆಕೆಂಜಿಯ

ಸಂಗ್ರಹದಲ್ಲಿನ ಕನ್ನಡ ಹಸ್ತಪ್ರತಿಗಳ ವಿವರಗಳನ್ನು ವಿಲ್ಸನ್ ಎಂಬಾತನು 'ಮೆಕೆಂಜಿ ಸಂಗ್ರಹ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾನೆ.

ಮೆಕೆಂಜಿಯು ತನ್ನ ವೃತ್ತಿಗೆ ಸಂಬಂಧಿಸಿದ ಕೆಲಸಕ್ಕೆ ಹೋದ ಸ್ಥಳಗಳಲ್ಲೆಲ್ಲಾ, ಅಲ್ಲಿಯ ಪಂಡಿತರು ಮತ್ತು ವಿದ್ಯಾವಂತರ ಜೊತೆ ಬೆರೆತು ಸ್ಥಳಿಯ ಇತಿಹಾಸ ಮತ್ತು ಅದಕ್ಕೆ ಸಂಬಂಧಿಸಿದ ಶಾಸನಗಳು, ಕಡತಗಳು, ನಾಣ್ಯಗಳು, ಸ್ಮಾರಕಗಳು, ಹಸ್ತಪ್ರತಿಗಳು, ಕೈಫಿಯತ್ತುಗಳು, ಐತಿಹ್ಯಗಳು, ಜನಪದ ಕಥೆಗಳು, ಕಾವ್ಯಗಳು ಇತ್ಯಾದಿಗಳ ಬಗ್ಗೆ ಮಾಹಿತಿ ಪಡೆಯುತ್ತಿದ್ದ. ಮಾಹಿತಿ ನೀಡಿದ್ದಕ್ಕಾಗಿ ಸಂಭಾವನೆ ನೀಡುತ್ತಿದ್ದ. ಬಹುತೇಕ ಈ ಸಂಭಾವನೆಯ ಆಸೆಯಿಂದಲೇ ಎಷ್ಟೋ ಸ್ಥಳಗಳಿಗೆ ಸಂಬಂಧಿಸಿದಂತೆ ಒಂದೇ ವಿಷಯವನ್ನು ಬೇರೆ ಬೇರೆ ಜನರು ಹಲವು ಬದಲಾವಣೆಗಳೊಡನೆ ನಿರೂಪಿಸಿರುವುದನ್ನು ಗಮನಿಸಬಹುದು.

ಇಂತಹ ಒಂದೇ ಸ್ವರೂಪದ ಅಥವಾ ಒಂದೇ ವಿಷಯಕ್ಕೆ ಸಂಬಂಧಿಸಿದ ಹಲವು ದಾಖಲೆಗಳಲ್ಲಿ ಸತ್ಯವನ್ನು ಹುಡುಕುವ ಕೆಲಸ ಸುಲಭವಲ್ಲವಾದರೂ, ಯಾವ ದಾಖಲೆಯೂ ಇಲ್ಲ ಎಂದು ಕೈಕಟ್ಟಿ ಕುಳಿತುಕೊಳ್ಳುವುದಕ್ಕಿಂತ ದೊರೆತ ದಾಖಲೆಗಳಿಂದ ಸತ್ಯಕ್ಕೆ ಸಮೀಪವಾದ ವಿಷಯಗಳನ್ನು ಹೆಕ್ಕಿ ತೆಗೆಯುವ ಕೆಲಸ ಸುಲಭವಾಗುತ್ತದೆ. ಕರ್ನಾಟಕದ ಪ್ರದೇಶಕ್ಕೆ ಸಂಬಂಧಿಸಿದ, ಅದರಲ್ಲೂ ವಿಶೇಷವಾಗಿ ವಿಜಯನಗರ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ದಾಖಲೆಗಳು ಕನ್ನಡ ಮತ್ತು ತೆಲುಗು ಲಿಪಿ ಮತ್ತು ಭಾಷೆಯಲ್ಲೇ ಹೆಚ್ಚಾಗಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ.

ಮೆಕೆಂಜಿ ಸಂಗ್ರಹಿಸಿದ್ದ ಅನೇಕ ಕೈಫಿಯತ್ತುಗಳು ಪ್ರಕಟವಾಗಿ, ವಿದ್ವಾಂಸರ ಅಧ್ಯಯನಕ್ಕೆ ಲಭ್ಯವಾಗಿವೆ. ಮೆಕೆಂಜಿಯು ಮೈಸೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಸುಮಾರು ೫೩, ಹಿಂದಿನ ದಕ್ಷಿಣ-ಉತ್ತರ ಕನ್ನಡ ಜಿಲ್ಲೆಗಳ ಸುಮಾರು ೪೭, ಬಳ್ಳಾರಿ ಪ್ರದೇಶದ ಸುಮಾರು ೧೪ ಮತ್ತು ಇತರ ಎಂದರೆ ವಿಶೇಷವಾಗಿ ಕೆಲವು ಜಾತಿಗಳನ್ನು ಕುರಿತಂತೆಯೇ ಸಂಗ್ರಹಿಸಿದ್ದ ಸುಮಾರು ೨೦, ಹೀಗೆ ಒಟ್ಟು ೧೩೪ ಕೈಫಿಯತ್ತುಗಳನ್ನು, ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದೆ. ಇವುಗಳಲ್ಲಿ ಪುರಾಣ ಮತ್ತು ಐತಿಹ್ಯಗಳೇ ಹೆಚ್ಚು ಮಹತ್ವ ಪಡೆದಿರುವುದನ್ನು ಗಮನಿಸಬಹುದು. ಇಲ್ಲಿನ ರಾಜಕೀಯ ವಿಚಾರಗಳೂ, ಪುರಾಣ ಮತ್ತು ಐತಿಹ್ಯಗಳಿಂದ ಹೊರತಾಗಿಲ್ಲ. ಆದರೆ ಸಮಕಾಲೀನ ಸಂಗತಿಗಳು ಮತ್ತು ಘಟನೆಗಳು ಉತ್ಪ್ರೇಕ್ಷೆಯಿಂದ ಹೊರತಾಗಿರುವುದನ್ನು ಗಮನಿಸಿದಾಗ, ಕೈಫಿಯತ್ತುಗಳನ್ನು ಸಿದ್ಧಪಡಿಸಿದ ಸ್ಥಳೀಯರಿಗೆ ಸತ್ಯ ವಿಚಾರಗಳನ್ನು ತಿಳಿಸಲು ಯಾವ ಸಂಕೋಚ ಅಥವಾ ಮುಜುಗರವೂ ಇರಲಿಲ್ಲ; ಆದರೆ ಹಿಂದಿನ ಸಂಗತಿಗಳ ಬಗ್ಗೆ ತಾವು ಕೇಳಿ ತಿಳಿದಿದ್ದ ವಿಷಯಗಳನ್ನೇ ಸತ್ಯ ಎಂದು ತಿಳಿದಿದ್ದರು ಎಂದು ಸ್ಪಷ್ಟವಾಗುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನ ಮಾಡುವಾಗ ಮೆಕೆಂಜಿಯ ನೆನಪು ಮಾಡಿಕೊಡುವವನು 'ರಾಜಾವಳೀ ಕಥೆ' ಬರೆದ ದೇವಚಂದ್ರ. ತನ್ನ ವೃತ್ತಿ ಜೀವನದ ಸರ್ವೆ ಕೆಲಸಕ್ಕಾಗಿ ಮೈಸೂರು ಜಿಲ್ಲೆಯ ಕನಕಗಿರಿಗೆ ಮೆಕೆಂಜಿ ೧೮೦೪ರಲ್ಲಿ ಬಂದಿದ್ದಾಗ, ಜೊತೆಗೆ ಕವೆಲ್ಲಿ ಲಕ್ಷ್ಮಣರಾಯನನ್ನೂ ಕರೆತಂದಿದ್ದ. ಕನಕಗಿರಿಯಲ್ಲಿ ಮೆಕೆಂಜಿಗೆ ದೇವಚಂದ್ರನ ಪರಿಚಯವಾಗಿ, ತನ್ನ ಎಂದಿನ ಸಹಜ ಆಸಕ್ತಿಯಿಂದ ಯಾವುದಾದರೂ ಸ್ಥಳಪುರಾಣ ಇದೆಯೆ ಎಂದು ಪ್ರಶ್ನಿಸಿದ. ದೇವಚಂದ್ರನು ಆ ಹೊತ್ತಿಗಾಗಲೇ ರಚಿಸಿದ್ದ 'ಪೂಜ್ಯಪಾದ ಚರಿತೆ'ಯನ್ನು ಓದಿಸಿ ಕೇಳಿದ ಮೆಕೆಂಜಿ ಸ್ಥಳಪುರಾಣವನ್ನು ಬರೆದುಕೊಡಲು ಹೇಳಿದ ಮತ್ತು ೨೫ ಕುಂಪಣಿ ರೂಪಾಯಿಗಳನ್ನು ಮುಂಗಡ ಸಂಭಾವನೆಯಾಗಿಯೂ ಕೊಟ್ಟಿದ್ದ. ದೇವಚಂದ್ರ ಕರ್ನಾಟ ದೇಶದ ಚಾರಿತ್ರಿಕ ವಿಷಯಗಳನ್ನೆಲ್ಲ ಬರೆಯುವ ಕೆಲಸವನ್ನು ಆರಂಭಿಸಿದ. ಅದು ಮುಗಿಯುವ ಹೊತ್ತಿಗೆ ಮೆಕೆಂಜಿ ಮೈಸೂರು ಸಂಸ್ಥಾನದಿಂದ ದೂರ ಹೋಗಿದ್ದ. ದೇವಚಂದ್ರ 'ರಾಜಾವಳಿ ಕಥೆ'ಯನ್ನು ಬರೆದು ಮುಗಿಸಿ, ಮೆಕೆಂಜಿಯ ಬರವನ್ನು ನಿರೀಕ್ಷಿಸಿದ. ಮೆಕೆಂಜಿ ಬರಲಿಲ್ಲ. ಆ ಕಾರಣದಿಂದಲೇ 'ರಾಜಾವಳೀ ಕಥೆ'ಯ ಪ್ರಕಟಣೆ ವಿಳಂಬವಾಯಿತೆಂಬ ಅಭಿಪ್ರಾಯವಿದೆ.

ಮೆಕೆಂಜಿಯೇ ತಾನು ಸಂಗ್ರಹಿಸಿದ್ದನ್ನೆಲ್ಲ ಓದಿರಲಿಲ್ಲ ಎಂದು ತಿಳಿಯಲಾಗಿದೆ. ಆದರೆ ಅವನ ಸಂಗ್ರಹದಿಂದ ನಂತರದ ಭಾರತೀಯ ಮತ್ತು ಬ್ರಿಟಿಷ್ ವಿದ್ವಾಂಸರೆಲ್ಲರೂ ದಾಖಲೆಗಳನ್ನು ಬಳಸಿಕೊಂಡಿದ್ದಾರೆ ಮತ್ತು ಆಯಾ ಸಂದರ್ಭಗಳಲ್ಲಿ ಮೆಕೆಂಜಿಯನ್ನು ಸ್ಮರಿಸಿಕೊಂಡಿದ್ದಾರೆ. ಮೆಕೆಂಜಿಯು ಸ್ವಂತವಾಗಿ ಎಷ್ಟು ಬರೆದಿದ್ದಾನೆ ಎಂಬ ಮಾತಿಗಿಂತ ಅವನು ಎಷ್ಟು ಮೂಲ ದಾಖಲೆಗಳನ್ನು ಸಂಗ್ರಹಿಸಿದ್ದ ಎನ್ನುವ ವಿಚಾರವನ್ನು ತಿಳಿದಾಗ ಆಶ್ಚರ್ಯವಾಗುತ್ತದೆ. ಅವನ ಸಂಗ್ರಹಗಳಲ್ಲಿ ಕೆಲವನ್ನಾದರೂ ನಮ್ಮ ಈಗಿನ ವಿದ್ವಾಂಸರು ಬೆಳಕಿಗೆ ತರುತ್ತಿದ್ದಾರೆ ಎಂಬುದು ನಾವು ಅವನಿಗೆ ಸಲ್ಲಿಸುವ ಗೌರವ ಎಂದೇ ತಿಳಿಯಬೇಕಾಗಿದೆ.


**ಡಾ|| ಎಚ್. ಎಸ್. ಗೋಪಾಲರಾವ್**
'ಸ್ವಸ್ತಿಶ್ರೀ ಸ್ಕಂದ', ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨ ೧೨೩


## ಭ್ರಮೆ

ಪುಷ್ಪ ಸೌಂದರ್ಯ
ಸೆಳೆಯಲು
ಭ್ರಮರಗಳನ್ನು ;
ಭ್ರಮಿಸುತ್ತೇವೆ
ನಮ್ಮನ್ನು ಎಂದು !

## ಮೌನ

ಎಚ್ಚರದಿಂದಿರಬೇಕು :
ಸಮ್ಮತಿಯ ಲಕ್ಷಣದಂತೆ
ಅಸಮ್ಮತಿಯ
ಲಕ್ಷಣವೂ ಆಗಬಹುದು,
ಮೌನ !

## ಬದ್ಧತೆ

ಶಬ್ದ
ನಿಶ್ಶಬ್ದ,
ಶಬ್ದದೊಳಗಿನ ನಿಶ್ಶಬ್ದ,
ನಿಶ್ಶಬ್ದದೊಳಗಿನ ಶಬ್ದ–
ಒಬ್ಬೊಬ್ಬರ ಬದುಕು
ಒಂದೊಂದಕ್ಕೆ ಬದ್ಧ !


ಸಿ.ಪಿ.ಕೆ.
ಮೈಸೂರು - ೧೨


## 'ಇತ್ತು'ಗಳ ಸುತ್ತ

**ಹ**ದಿನೆಂಟನೆಯ ಶತಮಾನದಲ್ಲಿದ್ದ ಶಂಕರಯ್ಯ ಈಗಲೂ ಬದುಕಿದ್ದಾರೆ !

ಶಂಕರಯ್ಯನವರ ಶಬ್ದ ಭಂಡಾರದಲ್ಲಿ ಇತ್ತು ಎನ್ನುವುದೊಂದನ್ನು ಉಳಿದರೆ ಬೇರೇನೂ ಇಲ್ಲ. ಒಂದು ದಿನ ನಾನೊಂದು ಹೊಸ ರೇಡಿಯೋ ತಂದಿದ್ದೆ. ''ಇದೇನೋ ಮರಿ, ಇದು ನಮ್ಮಲ್ಲಿ ಮೊದಲೇ ಇತ್ತು. ಆಕಾಶವಾಣಿ ಅಂತ ಅದಕ್ಕೆ ಹೆಸರು. ಈಗ ನೋಡು ಅದೇ ಹೆಸರನ್ನು ಮತ್ತೆ ಇರಿಸಿದ್ದಾರೆ'' ಎಂದುಬಿಟ್ಟರು ಶಂಕರಯ್ಯನವರು. ಮತ್ತೊಮ್ಮೆ ಕಲರ್ ಟಿವಿ ತಂದರೆ, ''ಅಯ್ಯೋ ಮರುಳೇ ಕೃಷ್ಣ ಈ ಮಾಯಾ ಕನ್ನಡಿಯನ್ನು ಉಪಯೋಗಿಸಿದ್ದ ಎಂಬುದು ತಿಳಿದಿಲ್ಲವೇ ?'' ಎನ್ನುವರು. ಹೀಗೆ ದೂರದರ್ಶಕವೆಂದರೆ ದಿವ್ಯಜ್ಞಾನ ದೃಷ್ಟಿ, ಅಣ್ವಸ್ತ್ರವೆಂದರೆ ಬ್ರಹ್ಮಾಸ್ತ್ರ ಎನ್ನುವ ಶಂಕರಯ್ಯನವರಿಗೆ, ಈವತ್ತು ಇರುವುದನ್ನು ಮೀರಿ ಹಿಂದೆ ಇದ್ದ ವಿಷಯಗಳೊಂದೂ ತಿಳಿದಿಲ್ಲ, ಒಂದನ್ನುಳಿದು. ಅದು ಸಂಜೀವಿನಿ ! ಒಂದು ದಿನ ನಾನು ಕೇಳಿದೆ ''ತಾತಾ ಸಂಜೀವಿನಿ ನಮ್ಮಲ್ಲಿ ಮೊದಲೇ ಇತ್ತು. ಪಶ್ಚಿಮದವರು ಒಂದು ವೇಳೆ ಅದನ್ನು ಪುನಃ ಕಂಡುಹಿಡಿದುಬಿಟ್ಟರೆ, 'ಅದು ನಮ್ಮಲ್ಲಿತ್ತು' ಎಂಬ ಪ್ರಶ್ನೆಯೇ ಬೇಡ. ನಾವೇ ಮೊದಲು ಕಂಡುಹಿಡಿದು, 'ನೋಡಿ, ನಮ್ಮಲ್ಲಿ ಇದು ಇದೆ. ತೆಗೆದುಕೊಳ್ಳಿ' ಎಂದು ಪಶ್ಚಿಮದವರಿಗೆ ಕೊಟ್ಟುಬಿಡೋಣ'' ಎಂದೆ. ''ಎಲ್ಲ ದೈವ ಸಂಕಲ್ಪ'' ಎಂದು ಮೌನವಾದರು ಶಂಕರಯ್ಯನವರು !

– **ಅರವಿಂದ ಚೊಕ್ಕಾಡಿ**

# ವಿಷ್ಣುವಿಗೆ ಒಂದು ಕಿವಿಮಾತು

**ಜಿ.** ಪಿ. ರಾಜರತ್ನಂ ಅವರ 'ಬ್ರಮ್ಮ ನಿಂಗೆ ಜೋಡಿಸ್ತೀನಿ ಎಂಡ ಮುಟ್ಟಿದ್ ಕೈನ' ಪದ್ಯವನ್ನು ಕೇಳಿರದ ಕನ್ನಡಿಗರು ಇರಲಾರರು. 'ರತ್ನನ ಪದಗಳು' ಸಂಕಲನದ 'ಪ್ರಾರ್ತನೆ' ಎಂಬ ಹೆಸರಿನ ಪದ್ಯ ಅದು. ಆದರೆ ಇದೇ ಸಂಕಲನದ ಇತರ ರತ್ನಗಳ ಪರಿಚಯ ಹೆಚ್ಚು ಜನರಿಗೆ ಇರಲಾರದು. ಅಂತಹ ಒಂದು ರತ್ನನ ರತ್ನ ''ಯಿಸ್ನು ಪಡಚ.'' ತನಗಿರುವ ಶಕ್ತಿಯನ್ನು ಸದುಪಯೋಗ (ಕುಡುಕನ ದೃಷ್ಟಿಯಲ್ಲಿ ಸದುಪಯೋಗ ಏನಿರಬಹುದು ಊಹಿಸುವಿರಾ !) ಪಡಿಸಿಕೊಳ್ಳದ ಮೂಢನೆಂದು ವಿಷ್ಣುವನ್ನು ಮೂದಲಿಸುತ್ತಾ, ನನಗೆ ಅವನ ಶಕ್ತಿಯಿದ್ದಿದ್ದರೆ– ಅಥವಾ ನಾನೇ ಅವನಾಗಿದ್ದಿದ್ದರೆ – ಏನೇನು ಮಾಡುತ್ತಿದ್ದೆ ಎಂದು 'ಎಂಡ್ಕುಡುಕ ರತ್ನ' ಕಲ್ಪಿಸಿಕೊಳ್ಳುತ್ತಾನೆ. ತಿಳಿಹಾಸ್ಯ ಸೂಸುವ ಈ ಕಲ್ಪನಾ ವೈಖರಿಯನ್ನು ನಮ್ಮ ಮುಂದೆ ಹರಡುತ್ತದೆ 'ಯಿಸ್ನು ಪಡಚ.'



ಎಂಡ್ಕುಡುಕ ರತ್ನ ಕುಡುಕ ಹೌದು. ಆದರೆ ಅವನು ನಾವು - ನೀವು ಬೀದಿಯಲ್ಲಿ ಕಾಣುವ ಕಳಪೆಮಟ್ಟದ ಕುಡುಕನಲ್ಲ. ಈ ಕುಡುಕ ರತ್ನ ವಿಚಾರವಂತ, ಕನ್ನಡಾಭಿಮಾನಿ, ದೈವಭಕ್ತ. 'ನಂಜಿ ನನ್ನಪರಂಜಿ' ಎಂದು ಪತ್ನಿಯನ್ನು ರಂಜಿಸುವ ಪ್ರೀತಿ ಸೂಸುವ ಪತಿ. ದಿನವೆಲ್ಲ ಬೆವರಿಳಿಸಿ ಗಳಿಸಿದ್ದ ರಲ್ಲಿ, ಕೊಂಚ ಮಾತ್ರವನ್ನು ಮುರಿಸಿ, ಏರಿಸುವ ಬುಂಡೆ ಎಂಡ ಅವನ ಬಡಬದುಕಿನ ಇತರ ಸವಿಗಳಿಗೆ ಕೊಂಚ ಒಗ್ಗರಣೆ ಮಾತ್ರ.

ಒಮ್ಮೊಮ್ಮೆ 'ಏನೋ ಕುಸಿಯಾದಾಗ-ಮತ್ತೆಚ್ಚಿ ಒದಾಗ' ಅವನು ಈ ಪ್ರಪಂಚವನ್ನು ದಾಟಿ ತನ್ನ ಕಲ್ಪನಾ ಪ್ರಪಂಚದಲ್ಲಿ ತೇಲಾಡುತ್ತಾನೆ. ಆಗ ಅವನ ಬಾಯಿಂದ ಉದುರುತ್ತವೆ ಪದಗಳೆಂಬ ರತ್ನಗಳು. 'ಅಂಗೇನೆ ಪರಪಂಚದ್ ಅಂಚ ದಾಟ್ಕಂಡಿ ಆರಾಡ್ತ ಕನ್ನಡದಲ್ ಪದವಾಡ್ತ ಇಗ್ಗೋದು ರತ್ನನ್ ಪರ್ಪಂಚ.' ಅಂತಹ ಒಂದು ಸಮಯದಲ್ಲಿ ರತ್ನನ ದೃಷ್ಟಿಗೆ ಸಿಕ್ಕವನು ವಿಷ್ಣು. ರತ್ನ ವಿಷ್ಣುವನ್ನು ಅನ್ನುವುದು ಸಹ ನಾವು ನಮ್ಮ ಹಿರಿಯರನ್ನೋ, ಪ್ರೀತಿಪಾತ್ರರನ್ನೋ ಹಾಸ್ಯಕ್ಕಾಗಿ ಅಣಕಿಸಿ ಅನ್ನುವ ರೀತಿಯದು. ತುಚ್ಛ ಅಪಹೇಳನವಲ್ಲ.

*ಪದವಿ ನೋಡ್ಕೊಂಡ್ ದೊಡ್ಡೋನ್ ಅನ್ನೋದ್*
*ಲೋಕಕ್ ಒಂದ್ ಆಳ್ ರೋಗ !*
*ಇದನ್ ಕಾಣ್ಬೈದ್ ಎಲ್ಲಾರೂನೆ*
*ಇಸ್ನೂನ್ ಒಗಳೋದ್ರಾಗ*

– ಎಂದು ಪ್ರಾರಂಭಿಸಿ ಪದವಿಯಿಂದ ವಿಷ್ಣು ದೊಡ್ಡವನೇ ಹೊರತು, ಬುದ್ಧಿ ಅವನಿಗೆ ಅಷ್ಟೇನೂ ಇಲ್ಲ ಎನ್ನುತ್ತಾನೆ ರತ್ನ. ಅವನಿಗೆ ಹಾಗೇಕನ್ನಿಸಿತು ? ವಿವರಣೆಗೆ ಈ ಸಾಲುಗಳನ್ನು ನೋಡಿ.

''ಏನ್ ಯಿಸ್ನೂನೋ ! ಬೆಪ್ಪಂಗ್ ಬಿದ್ಕೈನ್
ಆಲಿನ್ ಸೌಂದ್ರದ್ ಮದ್ದ ! (ಹಾಲಿನ ಸಮುದ್ರದ ಮಧ್ಯೆ)''

ಹಾಲಿನಲ್ಲಿ ಬೆರಳದ್ದಿ ಹಾಲು ಚೀಪುವ ಹಸುಗೂಸೆ ಅವನು ? ಅಲ್ಲದೆ, ಒಂದುವೇಳೆ ಆ ಹಾಲು ಒಡೆದು ಸಮುದ್ರಕ್ಕೆ ಹುಳಬಿದ್ದರೆ, ಮಧ್ಯೆ ಮಲಗಿದವನ ಪಾಡೇನು ?

''ಯೋಚ್ನೆ ಬೇಡ್ವ - ಯಾವಾಗ್ನಾರ
ಆಲ್ ಒಡದ್ ಉಳ ಬಿದ್ರೆ !''

ವಿಷ್ಣುವಿಗಿರುವ ಶಕ್ತಿಯನ್ನು ಉಪಯೋಗಿಸಿ ಏನೇನು ಮಾಡಬಹುದಿತ್ತು ! ಸುಮ್ಮನೆ ಹಾಲಿನ ಸಮುದ್ರದಲ್ಲಿ ಬೆಪ್ಪನಂತೆ ಮಲಗಿದ್ದಾನಲ್ಲ ಎಂದು ರತ್ನನ ವಿಷಾದ. ಛೇ, ನಾನಾದರೂ ವಿಷ್ಣುವಾಗಿದ್ದಿದ್ದರೆ !

''ನಾನೇನಾರ ಯಿಸ್ನಾಗಿದ್ರೆ
ಗೊತ್ತಾ ಏನ್ ಮಾಡ್ತಿದ್ದೆ ?
ಯೆಂಡದ್ ಸೌಂದ್ರದ
ಮದ್ದಕ್ಕೋಗಿ ಝೂಂಡ ಆಕ್ಬುಡ್ತಿದ್ದೆ !''

''ಸೇಸನ್ ಸಾವಿರ ತಲೆಗಳ್ನೂವೆ
ಸಾಲಾ ಈಸ್ಕೊಂಡ್ಬುಟ್ಟು
ಸೌಂದ್ರಕ್ ಬಾಯ್ ಇಟ್
ಈರ್ದಾಂತ್ ಅಂದ್ರೆ, ಸೌಂದ್ರಕ್ ಸೌಂದ್ರೆ ಭಟ್ಟು !''

ಒಂದು ಸಮುದ್ರ ಯೆಂಡ ಖಾಲಿ ಮಾಡಿ ಮುಗಿಯಿತೇ ಕವಿಯ ಕಲ್ಪನೆ ?

''ದೊಡ್ಡ ಒಂದ್ ಸೌಂದ್ರ ಕಾಲಿ ಆದ್ರೆ, ಇನ್ನಾ ಅವೆ ಆರು !'' ಸಪ್ತ ಸಮುದ್ರಗಳಲ್ಲಿ ಒಂದು ಮುಗಿಯಿತು. ಉಳಿದವನ್ನು ಹೇಗೆ ಉಪಯೋಗಿಸಬಹುದು ? ಕವಿಯಲ್ಲಿರುವ ಕುಡುಕ ಯೋಚಿಸುತ್ತಾನೆ. ಸೂಚಿಸುತ್ತಾನೆ.

''ಮಿಕ್ಕಿದ್ ಆರ್ನು ಮುಂದ್ ಇಟ್ಕೊಂಡಿ ಭೂ ಮಂತ್ರಾಂವೆ, ಆತು !
ಯಿಸ್ನೂ ಆದೋನ್ ಸಕ್ತೀಂತ್ ಅಂದ್ರೆ ಎಲ್ಲಾ ಯೆಂಡ್ ಆಗೋಯ್ತು !''

ಇಷ್ಟೆಲ್ಲಾ ಮಾಡಬಲ್ಲವನು ಬೆಪ್ಪನಂತೆ ಹಾಲಿನ ಮಧ್ಯೆ ಮಲಗುವುದೇ ? ಎಂದು ರತ್ನನ ಪರಿತಾಪ. ತನಗೆ ಇಂತಹ ಅಪಾರ ಬುದ್ಧಿಯಿದೆ. ಆದರೆ ಅವರಿಂದೇನು ? ಆ ಶಕ್ತಿಯಿಲ್ಲವೇ ಎಂಬ ವಿಷಾದ.

''ಬುದ್ದಿ ಇದ್ದೋರ್ಗೆ ಎಲ್ಲೈತ್ ಸಕ್ತಿ ? ಏನೇಳ್ಕೊಂಡ್ ಏನ್ ಬತ್ತು !'' ಹೋಗಲಿ ಈಗೇನು ಮಾಡುವುದು ? ವಿಷ್ಣುವಿಗೂ-ರತ್ನನಿಗೂ ಸೇರಿ ಒಂದು ಜಾಯಿಂಟ್ ವೆಂಚರ್ ಸಾಧ್ಯವೇ ?

''ದೊಡ್ಡೋನ್ ಯಿಸ್ನು ಕಲ್ಯೋಬಾರ್ದ ಚಿಕ್ಕೋನ್ ಕುಡುಕನ ಸೇರಿ !'' ಅಂತಹ ದೊಡ್ಡ ಪದವಿಯವನ ಘನತೆ ಅವನನ್ನು ಈ ಚಿಕ್ಕ ಮನುಷ್ಯನ ಜತೆ ಸೇರಿ ಬುದ್ಧಿ ಕಲಿಯಲು ಬಿಟ್ಟೀತೆ ?''ಚಿ. ಚಿ. ಚಿ. ಚಿ ಎಲ್ಲಾರ್ ಉಂಟ ! ಆಲ್ನಲ್ಲೆ ಔನ್ ಗೋರಿ ! ಅಲ್ಲಿಗಾಯಿತು ಯಿಸ್ನುವಿನ ಯೋಗ್ಯತೆಯ ನಿರ್ಧಾರ. ''ಯಿಸ್ನು ಪಡಚ.''


ಎಂ. ಎಸ್. ರಘುನಂದನ
ನಂ. ೧, ನೆಲಮಹಡಿ ಸ್ವದತ್ತ ಅಪಾರ್ಟ್‌ಮೆಂಟ್, ಆಲ್ದಾನಗರ, ಪಾಂಡಾ, ಗೋವಾ - ೪೦೩ ೪೦೧




## ಪ್ರೇಮ-ವಿರಹ

ಪೂರ್ವದಲ್ಲಿ
ತರಹೇವಾರಿ ಬಣ್ಣಗಳ
ಹೊತ್ತ ಚುಕ್ಕಿ ಚಲಿಸಿದಾಗ
ನನ್ನೆದೆಯಲ್ಲಿ ಪ್ರೇಮಾಂಕುರ
ಪಶ್ಚಿಮದಲ್ಲಿ
ಕರಾಳ ಕಪ್ಪು ಎಲ್ಲಾ ಬಣ್ಣಗಳ
ಹಿಡಿಯಾಗಿ ನುಂಗಿ ತೇಗಿದಾಗ
ನನ್ನೆದೆಯಲ್ಲಿ ವಿರಹ


ವಿಶ್ವನಾಥ ಎಲ್. ವೇಮಗಲ್
ಶಿಕ್ಷಕರು, ವೇಮಗಲ್ಲು - ೫೬೩ ೧೩೭

# ಬಸವಪ್ರಜ್ಞೆ

# ದಲಿತರ ಬಿಡುಗಡೆ ಮತ್ತು ಬಂಧನ

**ಡಾ॥ ರಂಗರಾಜ ವನದುರ್ಗ**

'ದಲಿತ'ರೆಂದರೆ ಅಸ್ಪೃಶ್ಯರೆಂದು ಕೆಲವರು ವಾದಿಸಿದರೆ; ಅವರು ಎಲ್ಲಾ ಜಾತಿ ಜನಾಂಗದ 'ಶೋಷಿತ'ರೆಂದು ಇನ್ನು ಕೆಲವರು ಪ್ರತಿಪಾದಿಸಿದ್ದಾರೆ. ಇವರಿಬ್ಬರು ಹೇಳಲು ಉದ್ದೇಶಿಸಿರುವ ಜನವರ್ಗಕ್ಕೆ ಸಮಸ್ಯೆಗಳು ಮಾತ್ರ ನೂರಾರು. ಈ ಸಮಸ್ಯೆಗಳು ಉಂಟುಮಾಡಿರುವ ಅನುಭವಗಳು ಸಹ ಪತ್ತಾರು. ಅಸ್ಪೃಶ್ಯರಿಗೆ ಆಗಿರುವ ಅಪಮಾನ, ಅವಮಾನಗಳನ್ನು ಶೂದ್ರರು, ಶೋಷಿತರೂ ಅನುಭವಿಸಿರಬಹುದು. ಆದರೆ, ಆ ಅನುಭವದಲ್ಲಿ ಖಂಡಿತ ವ್ಯತ್ಯಾಸವಿದೆ. ಅಸ್ಪೃಶ್ಯರಿಗೆ ಆದದ್ದು ಅತ್ಯಂತ ಅಪಾಯಕಾರಿ, ಆತಂಕಕಾರಿಯಾದದ್ದು.

ಪ್ರಧಾನವಾಗಿ 'ದಲಿತ'ರನ್ನು ಅಸ್ಪೃಶ್ಯರೆಂದು ಭಾವಿಸುವುದಾದರೆ, ಇವರಿಗಿರುವ ಸಮಸ್ಯೆ ಅನೇಕ. ಅವು ಹತ್ತಾರು ಮಗ್ಗುಲುಗಳಲ್ಲಿ ಇವರನ್ನು ಅದುಮಿಡುತ್ತಿವೆ. ಏಕೆಂದರೆ, ಇವತ್ತಿನ ದಲಿತರಿಗೆ ಕೆಲವರೇ ವೈರಿಗಳಾಗಿ ಉಳಿದಿಲ್ಲ. ಅವರ ಸಂಖ್ಯೆ ಈಗ ಹತ್ತಾರು - ಹಲವಾರು. ಎಡಬಲಗಳ ಜಗ್ಗಾಟದಲ್ಲಿ ಮೂಲ ಧ್ಯೇಯ (ದೇಹ) ಮುರಿದು ಬೀಳುತ್ತಿದೆ. ಒಳಮೀಸಲಾತಿಯ ಒತ್ತಡದಿಂದ ಬಿಟ್ಟ ಬಿರುಕು ಇನ್ನಷ್ಟು ಅಗಲಗೊಳ್ಳುತ್ತಿದೆ. ಇದರಿಂದ, ದಲಿತ ಸಮುದಾಯವು ಹೊರಗಿನ ವೈರಿ ಗುದ್ದಿದಾಗೊಮ್ಮೆ ಗಟ್ಟಿಗೊಂಡರೆ; ಒಳಗಿನ ವೈರಿ ಎದ್ದಾಗೊಮ್ಮೆ ಹೈರಾಣಾಗುತ್ತಿದೆ.

ವಿಶೇಷವೆಂದರೆ, ಕೆಲವು ದಲಿತರು ಜಾಗತೀಕರಣದಲ್ಲಿ ತಮಗೆ ಭವ್ಯ ಭವಿಷ್ಯವಿದೆಯೆಂದು ಭ್ರಮಿಸಿಕೊಂಡರೆ; ಇನ್ನು ಕೆಲವರು ಪರಂಪರೆಯಲ್ಲಿ ತಮಗೆ ಭವ್ಯ ಇತಿಹಾಸವಿದೆಯೆಂದು ಕನವರಿಸುತ್ತಿದ್ದಾರೆ. ಅಚ್ಚರಿಯ ವಿಷಯವೆಂದರೆ ಇವರಿಬ್ಬರೂ ವರ್ತಮಾನದಲ್ಲಿ ಬೇರು ಬಿಡುತ್ತಿಲ್ಲ. 'ಭೂತ' ಮತ್ತು 'ಭವಿಷ್ಯತ್ತು'ಗಳು ಇವತ್ತಿನ ದಲಿತರಿಗೆ ಒಂದೊಂದು ತುದಿಯ 'ಅತಿ'ಗಳಾಗುತ್ತಿವೆ. ನಿಜ, ಡಿ. ಆರ್. ನಾಗರಾಜ ಹಿಂದೊಮ್ಮೆ ವಿಸ್ಮೃತಿವಾದದ ಮೂಲಕ 'ದಲಿತರು, ಶೋಷಿತರು, ಶೂದ್ರರಿಗೆ ಪರಂಪರೆ ಪ್ರಜ್ಞೆ ಬೇಕು. ಅಲ್ಲಿ ಇವರ ಅನನ್ಯತೆಯ ಬೇರುಗಳು ಸಮೃದ್ಧವಾಗಿವೆ' ಎಂದಿದ್ದರು. ಅದನ್ನೇ ನಾವಿಂದು ದೇಶಿ ನೆಲೆಯ ಹುಡುಕಾಟವೆಂದು ಗ್ರಹಿಸಿದ್ದೇವೆ. ಇದೆಲ್ಲವು ಹೌದು. ಆದರೆ, ಜಾಗತೀಕರಣದಲ್ಲಿ ತಮ್ಮನ್ನು ತೆರೆದುಕೊಳ್ಳುತ್ತಿರುವ ಇಂದಿನ ದಲಿತರ ವಾದವೇ ಬೇರೆಯಿದೆ. ಪರಂಪರೆಯಲ್ಲಿ ತಮಗಾದ ಮಾಯದ 'ಗಾಯ'ಗಳಿಗೆ ಜಾಗತೀಕರಣದಲ್ಲಿ 'ಮುಲಾಮು' ಪಡೆಯುತ್ತಿದ್ದೇವೆ. ಇದು ತಪ್ಪೆ? ಅವರ ಪ್ರಶ್ನೆ. ಜಾತಿ, ಕುಲ, ಗೋತ್ರಗಳನ್ನು ಕರಗಿಸುವ ಶಕ್ತಿ ಜಾಗತೀಕರಣಕ್ಕಿದೆ. ಆ ಮೂಲಕ ಕುಲ ಕಸುಬುಗಳು ಹುಟ್ಟುಹಾಕಿರುವ ನೋವುಗಳನ್ನು ಮರೆಯುವುದು ಸಹ ದಲಿತರಲ್ಲಿ ಆದ್ಯತೆಯಾಗಿದೆ. ವಿಚಿತ್ರವೆಂದರೆ, 'ಪಾರಂಪರಿಕ' ಮತ್ತು 'ಜಾಗತಿಕ' ಗಳೆರಡೂ ದಲಿತರಲ್ಲಿ ದ್ವಂದ್ವವನ್ನು ಸೃಷ್ಟಿಸಿವೆ. ಅಂದರೆ, ಇಲ್ಲಿ ದಲಿತರಿಗೆ ಯಾವುದು ಬಂಧನ, ಯಾವುದು ಬಿಡುಗಡೆ ? ಇದು ನಮ್ಮ ಮುಂದಿರುವ ಇನ್ನೊಂದು ಪ್ರಶ್ನೆ.

ಬರಗೂರು ರಾಮಚಂದ್ರಪ್ಪನವರು ಹೇಳುವಂತೆ, ಭಾರತದ ದಲಿತರ, ಶೂದ್ರರ, ಶೋಷಿತರ ಬಿಡುಗಡೆಗೆ ಎರಡು ರೀತಿಯ ಪ್ರಜ್ಞೆಗಳು ಕೆಲಸ ಮಾಡಿವೆ. ಒಂದು ಪಾಪಪ್ರಜ್ಞೆ, ಇನ್ನೊಂದು ಜಾಗೃತಪ್ರಜ್ಞೆ. ಇದನ್ನೇ ನಾನು ಪಶ್ಚಾತ್ತಾಪ ಪ್ರಜ್ಞೆ; ಪ್ರಗತಿಪರ ಪ್ರಜ್ಞೆ ಎಂದು ಕರೆಯಲು ಇಷ್ಟಪಡುತ್ತೇನೆ. ಬುದ್ಧ, ಬಸವ, ಗಾಂಧಿ, ಲೋಹಿಯಾ ಮುಂತಾದವರು ಪಶ್ಚಾತ್ತಾಪ ಪ್ರಜ್ಞೆಯ ಪ್ರತಿ ನಿಧಿಗಳು. ಇವರಿಗೆ ಎಲ್ಲವೂ ಇತ್ತು. ಆದರೆ, ಅದು ಎಲ್ಲರಿಗೂ ಇಲ್ಲವಲ್ಲ ಎಂಬ ಕೊರಗು ಕಾಡಿತ್ತು. ಈ ಕೊರಗೇ ಪಶ್ಚಾತ್ತಾಪ ಪ್ರಜ್ಞೆ. ಇದ್ದದ್ದನ್ನು ಬಿಟ್ಟು ಇಲ್ಲದವರ ಕಡೆಗೆ ನಡೆಯಲು ಪ್ರೇರೇಪಿಸಿತು. ಸಿದ್ಧಾರ್ಥನಿಗೆ ಎಲ್ಲವೂ ಇತ್ತು, ಕೋಟೆ - ಕೊತ್ತಲ, ನೆಲ - ಜಲ, ಸೈನ್ಯ - ಸಂಪತ್ತುಗಳನ್ನೆಲ್ಲ ಧಿಕ್ಕರಿಸಿದ. ಬಸವನೂ ಅಷ್ಟೆ. ಅಗ್ರಹಾರ, ಅಂತಸ್ತು, ಅಧಿಕಾರವನ್ನು ವರ್ಜಿಸಿ ಹೊರಬಂದ. ಗಾಂಧೀಜಿ, ತುಂಡುಬಟ್ಟೆ ಧರಿಸುವ ಮೂಲಕ ಬಡವರಲ್ಲಿ ಗುರುತಿಸಿಕೊಂಡರೆ, ಲೋಹಿಯಾ ಇದ್ದ ಸಂಪತ್ತೆಲ್ಲ ಇಲ್ಲದವರಿಗೆ ದಾನ ಮಾಡಿದ. ಇವೆಲ್ಲ ಸಾಧ್ಯವಾಗಲು ಕಾರಣ ಪಶ್ಚಾತ್ತಾಪ ಪ್ರಜ್ಞೆ ಎಂಬುದು ಗಮನಾರ್ಹ.

ಇದೇ ರೀತಿ ಪ್ರಗತಿಪರ ಪ್ರಜ್ಞೆಗಳು ಸಹ ಬಹು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಿವೆ. ಮುಖ್ಯವಾಗಿ ಪೆರಿಯಾರ್, ಜ್ಯೋತಿಬಾ ಫುಲೆ, ಅಂಬೇಡ್ಕರ್, ದೇವರಾಜ ಅರಸ್, ಬಸವಲಿಂಗಪ್ಪ, ಹಾವನೂರ್ ಮುಂತಾದವರು. ಇವರು ಈ ಪ್ರಜ್ಞೆಯ ಪ್ರತಿನಿಧಿಗಳು. ಇಂಥ ದಲಿತ ಮತ್ತು ಶೋಷಿತರು ಶೂದ್ರ ಸಮುದಾಯದ ಒಡಲಲ್ಲಿ ಹುಟ್ಟಿದ ಒಂದೇ ಕಾರಣಕ್ಕಾಗಿ ಅನೇಕ ಅಪಮಾನಗಳನ್ನು ಅನುಭವಿಸಿದರು. ಈ ಸಂದರ್ಭದಲ್ಲಿ ಸಾಂಸ್ಥಿಕ ದೇವರು-ಧರ್ಮ, ಧಣಿ-ದೊರೆ ಮತ್ತು ಪುರೋಹಿತ-ಪ್ರಭುಗಳು ಹುಟ್ಟುಹಾಕಿದ ಜೀವವಿರೋಧಿ ಶಾಸನಗಳು ಕರಾಳವಾದವು. ಇವೆಲ್ಲವುಗಳ ವಿರುದ್ಧ ಮೊದಲ ಬಾರಿಗೆ ಬಂಡಾಯ ಸಾರಿದ್ದು ಇದೇ ಪ್ರಗತಿಪರ ಪ್ರಜ್ಞೆಗಳು. ಭಾರತದ ಆ ಮೂಲಕ ಕರ್ನಾಟಕದ ಸಂದರ್ಭದಲ್ಲಿ ಇದೊಂದು ಬಹುದೊಡ್ಡ ಬೆಳವಣಿಗೆ.

ಒಟ್ಟಾರೆ, ಇವೆರಡು ಪ್ರಜ್ಞೆಗಳಿಂದ ಒಂದಂಶ ಸ್ಪಷ್ಟವಾಗುತ್ತಿದೆ. ಒಂದು, ಚಲನಶೀಲ ಸಮಾಜದ ನಿರ್ಮಾಣಕ್ಕೆ ಪಶ್ಚಾತ್ತಾಪ ಪ್ರಜ್ಞೆಯ ಹಾಜರಿ ಅತ್ಯಂತ ಅವಶ್ಯವೆಂಬುದು. ಇದರ ಅಂತಿಮಗುರಿ ಪ್ರಗತಿಪರ ಪ್ರಜ್ಞೆಗಳನ್ನು ಹುಟ್ಟುಹಾಕುವುದೇ ಆಗಿದೆ. ಪಶ್ಚಾತ್ತಾಪ ಪ್ರಜ್ಞೆ ಹೆಚ್ಚು ಹೆಚ್ಚು ಆದಷ್ಟು ದಲಿತ/ಶೋಷಿತ ಸಮುದಾಯಕ್ಕೆ ಅನುಕೂಲ. ಇಂಥ ಪ್ರಜ್ಞೆಯ ಬೆಳವಣಿಗೆಗೆ ಪ್ರಗತಿಪರ ಪ್ರಜ್ಞೆ ಸದಾ ಶ್ರಮಿಸಬೇಕಾದದು ಸಹ ಅದರ ಆದ್ಯ ಅನಿವಾರ್ಯ. ಇವೆರಡು ಒಂದಕ್ಕೊಂದು ಅರ್ಥೈಸಿಕೊಂಡು ಬದುಕಿ ಬೆಳೆದ ಕಾಲವೇ ಕರ್ನಾಟಕದ ಹನ್ನೆರಡನೆಯ ಶತಮಾನ. ಅದನ್ನೇ ನಾವಿಂದು ಶರಣರ ಕಾಲ, ಸಂಕ್ರಮಣ ಕಾಲ ಎಂದೆಲ್ಲ ಗುರುತಿಸುತ್ತಿದ್ದೇವೆ.

ದಲಿತರ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಡಾ. ಬಿ. ಆರ್. ಅಂಬೇಡ್ಕರ್ ಅವರದು ಸಿಂಹಪಾಲು. ಇದರಲ್ಲಿ ಎರಡಿಲ್ಲ; ಇರಬಾರದು. ಆದರೆ, ಇದು ಇಪ್ಪತ್ತನೆಯ ಶತಮಾನದ ಮತ್ತು ಇವತ್ತಿನ ಮಾತು. ಹನ್ನೆರಡನೆಯ ಶತಮಾನದಲ್ಲಿಯೇ ಇದರ ಮೊದಲ ಪ್ರಯೋಗಗಳು ಕರ್ನಾಟಕದಲ್ಲಿ ನಡೆದಿವೆ. ಮೇಲಿನ ಎರಡೂ ಪ್ರಜ್ಞೆಗಳು ಸಮತಲವಾಗಿ ಸ್ಪಂದಿಸಿವೆ, ಸಾಧನೆಗಾಗಿ ಶ್ರಮಿಸಿವೆ. ಇವತ್ತಿನ ದಲಿತರಿಗೆ ಸವಾಲಾದ ಸಮಸ್ಯೆಗಳೇ ಅಂದು ಇನ್ನೊಂದು ಬಗೆಯಲ್ಲಿದ್ದವು. ಅಂದು ದಲಿತರಿಗೆ ವಸ್ತ್ರ, ವಸತಿ, ವಿದ್ಯೆ, ವಿಚಾರಗಳು ಸಿಕ್ಕಿರಲಿಲ್ಲ. ಇಂದು ಸಹ ಇವು ಸಮರ್ಪಕವಾಗಿ ದಕ್ಕಿಲ್ಲ. ಅಂದಿದ್ದ ಅಸ್ಪೃಶ್ಯತೆ, ಒಳ-ಹೊರ ಭೇದ, ಮೂಢನಂಬಿಕೆ, ಬಾಲ್ಯ ವಿವಾಹ, ದೆವ್ವಗಳ ಕಾಟ, ದೇವರ ಶೋಷಣೆಗಳು ಇಂದೂ ಮುಂದುವರೆದಿವೆ. ಅವತ್ತಿನ ಪೂಜಾರಿ, ಪುರೋಹಿತ, ಪಟೇಲ್, ಶಾನುಭೋಗ, ಸುಭೇದಾರ, ಜಮೀನುದಾರರೆಲ್ಲ ಇವತ್ತೂ ಇದ್ದಾರೆ. ಇವರೆಲ್ಲ ಮತ್ತೊಂದು ಮುಖವಾಡದಲ್ಲಿ ಮೆರೆಯುತ್ತಿದ್ದಾರೆ. ಅವತ್ತು ಕುಲಕಸುಬುಗಳಾದರೂ ಕೈಗೆ ಕೂಲಿ ಒದಗಿಸಿದ್ದವು. ಇವತ್ತು ಅದೂ ಇಲ್ಲ. ಜಾಗತೀಕರಣದ ಫಲವಾಗಿ, ಇದ್ದ ಗುಡಿಕೈಗಾರಿಕೆಗಳು ಒಕ್ಕಲೆದ್ದು ಹೋಗಿವೆ. ಕೂಲಿಗಾಗಿ, ಕೂಲಿಯ ಕಾಳಿಗಾಗಿ ಒಡ್ಡುವ ಕೈಗಳ ಸಂಖ್ಯೆ ಹೆಚ್ಚಾಗುತ್ತಲೇ ಇದೆ. ಕಂಪ್ಯೂಟರ್, ಖಾಸಗೀಕರಣಗಳು ಮೊದಲು ಕತ್ತರಿಸಿ ಹಾಕಿದ್ದೇ ದಲಿತರ ಇಂಥ ದುಡಿವ ಕೈಗಳನ್ನ. ನೂರು ಕೈಗಳ ಬದಲು ಇವತ್ತು ಸರ್ಕಾರಕ್ಕೆ ಒಂದು ಕಂಪ್ಯೂಟರ್ ಇದ್ದರೆ ಸಾಕು. ಹಾಗಾಗಿ, ಅವರ ಕೈ ಕಂಪ್ಯೂಟರ್ ಮೇಲೆ ಇದ್ದರೆ ಸಾಕು; ಕಾಲು ಅಮೆರಿಕದಲ್ಲಿರುತ್ತವೆ. ಸ್ವಾತಂತ್ರ್ಯ ಸಿಕ್ಕ ಮೇಲೆ ಸರ್ಕಾರ ಬರುತ್ತೆ, ಸರ್ಕಾರ ದಲಿತರ ಕೈಗೆ ನೌಕರಿ ಕೊಡುತ್ತೆ ಎಂಬೆಲ್ಲ ಕನಸು ಗಳಿದ್ದವು. ಆದರೆ, ಖಾಸಗೀಕರಣ ಆ ಎಲ್ಲಾ ಕನಸುಗಳನ್ನು ಒಂದೇ ಏಟಿಗೆ ಹೊಡೆದುರುಳಿಸಿತು. ಅದರಂತೆ, ಇಂದು ಮತ್ತೊಂದು ರೀತಿಯ 'ಅಗ್ರಹಾರದ' ಅರ್ಹತೆಗಳು ಚಾಲ್ತಿಯಲ್ಲಿವೆ. ಅದರದು ಸದಾ 'ಮೆರಿಟ್' 'ಮೆರಿಟ್' ಎಂಬ ಮಂತ್ರಪಠಣ. ಇಲ್ಲಿ ಅವಮಾನ, ಅಪಮಾನ, ಬಡತನ, ದುಡಿಮೆ, ದುಃಖ ಅನುಭವಿಸಿದ ಬೆವರುಗಳೆಲ್ಲ 'ಮೆರಿಟ್' ಮುಂದೆ ಮೊಣಕಾಲೂರಬೇಕು. ಮೆರಿಟ್ ಇಲ್ಲಿ 'ಮೆದುಳೇ' ಹೊರತು 'ಮೈ' ಅಲ್ಲ. ಹೀಗಾಗಿ ಬೆವರಿಗಿಂತ ಬುದ್ಧಿಯದೇ ಇಲ್ಲಿ ಕಾರು-ಬಾರು.

ಹಾಗಾದರೆ, ಈ ಎಲ್ಲಾ ಸವಾಲುಗಳಲ್ಲಿ ಸೋತಿರುವ, ಸಮಸ್ಯೆಗಳಲ್ಲಿ ಬೆಂದಿರುವ, ಕಷ್ಟಗಳಲ್ಲಿ ಕುದ್ದಿರುವ, ಕೀಳರಿಮೆಯಲ್ಲಿ ಕುಬ್ಜರಾಗಿರುವ ದಲಿತರಿಗೆ ದಿಕ್ಕು ಯಾರು? ದಾರಿ ಯಾವುದು? ಧೈರ್ಯ ಯಾರದು? ನಮ್ಮಲ್ಲಿ

ಚಿಂತಕರು, ದಾರ್ಶನಿಕರು, ಸಾಹಿತಿಗಳು, ಸಂಘಟಕರು, ನೇತಾರರು, ನೆರೆಹೊರೆಯವರೆಲ್ಲ ಇದ್ದಾರೆ. ಇವರಿಂದ ದಲಿತರ ಪ್ರಗತಿ ಸಾಧ್ಯವೆ? ವಕೀಲರು, ವರ್ತಕರು, ವೈದ್ಯರು, ರೈತರು, ಕಾರ್ಮಿಕರು, ಶಿಕ್ಷಕರು, ಶಿಷ್ಯರೆಲ್ಲರೂ ಇದ್ದಾರೆ. ಇವರಿಂದ ದಲಿತರ ಬಿಡುಗಡೆ ದಕ್ಕುವುದೆ? ಇವರೆಲ್ಲರನ್ನೂ ಏಕಕಾಲಕ್ಕೆ ಒಳಗೊಳ್ಳಬಲ್ಲ ವ್ಯಕ್ತಿಗಳು ನಮ್ಮ ನಡುವೆ ತಾತ್ವಿಕವಾಗಿ ಜೀವಂತವಾಗಿದ್ದಾರೆ. ಅವರೆಂದರೆ, ಒಂದು ಕಡೆ ಬುದ್ಧ, ಬಸವ, ಅಂಬೇಡ್ಕರ್, ಗಾಂಧಿ, ಪೆರಿಯಾರ್, ಲೋಹಿಯಾ, ರಾಜಾ ರಾಮ್‌ಮೋಹನ ರಾಯ್, ಜ್ಯೋತಿಬಾ ಫುಲೆ ಮುಂತಾದವರು. ಇನ್ನೊಂದು ಕಡೆ ಮಾರ್ಕ್ಸ್, ಮಂಡೆಲಾ, ಮಾವೋ, ಮಾರ್ಟಿನ್ ಲೂಥರ್, ಲೆನಿನ್ ಮತ್ತು ಇತರರು. ಇವರಲ್ಲಿ ದಲಿತರ ಸಮಸ್ಯೆ ಪರಿಹರಿಸಬಲ್ಲ ವ್ಯಕ್ತಿ ಯಾರು? ದಲಿತರಿಗೆ ಕೇಳಿದರೆ, ಅವರು ಅಂಬೇಡ್ಕರ್ ಅವರನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಇದು ಸಾಧು ಮತ್ತು ಸಹಜವೂ ಸಹ. ದಲಿತರ ಇಡೀ ನರಮಂಡಲಕ್ಕೆ ಜಾಗೃತಿಯ 'ವಿದ್ಯುತ್' ಸಂಚಾರ ಮಾಡಿದವರು ಅಂಬೇಡ್ಕರ್. ಇದರಲ್ಲಿ ಎರಡು ಮಾತಿಲ್ಲ. ಆದರೆ ಇಂಥದ್ದೇ ಕೆಲಸವನ್ನು ಒಂಬೈನೂರು ವರ್ಷಗಳ ಹಿಂದೆ ಬಸವಣ್ಣನೂ ಮಾಡಲು ಪ್ರಯತ್ನಿಸಿದ್ದ ಎಂಬುದು ದಾಖಲಾರ್ಹ ಸಂಗತಿ. ದಲಿತರನ್ನು ದೇವಾಲಯದಲ್ಲಿ ಬಿಡದೇ ಇದ್ದಾಗ, ದೇವಾಲಯದಲ್ಲಿದ್ದ ದೇವರನ್ನೇ ದಲಿತರ ಮನೆಗೆ ಕರೆತಂದಾತ ಬಸವಣ್ಣ. ಆದ್ದರಿಂದ ದಲಿತರ ಇವತ್ತಿನ ಸಮಸ್ಯೆಗಳಿಗೂ ಬಸವಣ್ಣನಲ್ಲಿ ಉತ್ತರಗಳಿವೆ. ಈ ಉತ್ತರಗಳು ಹನ್ನೆರಡನೇ ಶತಮಾನದ ಬಸವಣ್ಣನನ್ನು ಮಾತ್ರ ಕೇಂದ್ರೀಕರಿಸಿಕೊಂಡಿವೆ ಎಂಬುದು ಲಕ್ಷಿಸುವುದು ಅವಶ್ಯ.

ಏಕೆಂದರೆ ಬಸವಣ್ಣನ ವ್ಯಕ್ತಿತ್ವದ ವ್ಯಾಪ್ತಿ ಬಹಳ ದೊಡ್ಡದು. ಆತ ಯಾರ ಕೈಗೂ ಸಂಪೂರ್ಣ ಸಿಗಲಾರ. ಉದಾಹರಣೆಗೆ ನಾವು ಇಟ್ಟುಕೊಂಡಿರುವ ಹೆಸರುಗಳನ್ನೇ ಪರಿಶೀಲಿಸಬಹುದು. ಬಸವರಾಜ, ಬಸವಲಿಂಗ, ಬಸವೇಶ, ಬಸವಯ್ಯ, ಬಸವಪ್ಪ, ಬಸವಣ್ಣ ಮುಂತಾಗಿ. ಇಲ್ಲಿ ಬಸವಣ್ಣನನ್ನು ರಾಜನನ್ನಾಗಿ, ಲಿಂಗವನ್ನಾಗಿ, ಈಶನನ್ನಾಗಿ, ಅಯ್ಯನನ್ನಾಗಿ, ಅಪ್ಪನನ್ನಾಗಿ ಹಾಗೂ ಅಣ್ಣನನ್ನಾಗಿ ಸ್ವೀಕರಿಸಿದ್ದೇವೆ. ಅಂದರೆ ನಮ್ಮ ಗ್ರಹಿಕೆಗಳು ಇಷ್ಟೊಂದು ಬಗೆಯಲ್ಲಿ ಭಿನ್ನವಾಗಲು ಕಾರಣ ಆತನ ವೈವಿಧ್ಯಮಯವಾದ ವ್ಯಕ್ತಿತ್ವ ಮತ್ತು ನಮ್ಮ ವಿಭಿನ್ನ ಮನಸ್ಸು. ಹೀಗಾಗಿ ಬಸವಣ್ಣನನ್ನು ದೈವಿಕ ನೆಲೆಯಲ್ಲಿ ಕೆಲವರು, ಸಾಮಾಜಿಕ ನೆಲೆಯಲ್ಲಿ ಕೆಲವರು ಮತ್ತು ಕೌಟುಂಬಿಕ ನೆಲೆಯಲ್ಲಿ ಕೆಲವರು ವ್ಯಾಖ್ಯಾನಿಸಿಕೊಳ್ಳುತ್ತಿದ್ದಾರೆ. ಇನ್ನೂ ಕೆಲವರು ಆತನನ್ನು ಸಾಂಕೇತಿಕವಾಗಿ, ಕ್ರಿಯಾತ್ಮಕವಾಗಿ, ಭಾವುಕವಾಗಿ ಹಾಗೂ ವೈಚಾರಿಕವಾಗಿ ಅರ್ಥೈಸಿಕೊಂಡದ್ದೂ ಉಂಟು. ಆದರೆ ಇಪ್ಪತ್ತೊಂದನೆಯ ಶತಮಾನದ ಈ ಸಂದರ್ಭದಲ್ಲಿ ಬಸವಣ್ಣನನ್ನು ಒಂದೊಂದು ಸಮುದಾಯದವರು ಒಂದೊಂದು ರೀತಿ 'ಒತ್ತುವರಿ' ಮಾಡಿಕೊಳ್ಳುತ್ತಿದ್ದಾರೆ.

*'ಆ ಐನಾರ ಹುಡುಗ*
*ಬಸಯ್ಯ ಅಂತ,*
*ಗೌಡರ ಹುಡುಗ*
*ಬಸನಗೌಡ ಅಂತ*
*ಬಣಜಿಗೇರು ಉಳಿದ ಲಿಂಗಾತ್ರ ಹುಡುಗ್ರು*
*ಬಸರಾಜಂತ,*
*ಆ ಕುರುಬರ ಹುಡುಗ*
*ಬಸಪ್ಪ ಅಂತ,*
*ನಾ ಬಸ್ಯಾ ಅಂತ*
*ಯಾಕಂದ್ರ, ನಾ ಹೊಲ್ಯ ಅಂತ'.*

ಸಿದ್ದನಗೌಡ ಪಾಟೀಲರ 'ನಾ ಬಸ್ಯಾ ಅಂತ' ಕವಿತಾ ಸಂಕಲನದ, ಪದ್ಯವಿದು. ಕವಿ ಇಲ್ಲಿ ಗ್ರಹಿಸಿರುವ 'ವಾಸ್ತವ ಪರಿಸ್ಥಿತಿ' ಹನ್ನೆರಡನೆಯ ಶತಮಾನವನ್ನೇ ಅಣಕಿಸುವಂತಿದೆ. ಆದ್ದರಿಂದ ಇಂದು ಬಸವಣ್ಣನ ನಿಜ ನೆಲೆ ಹುಡುಕುವುದೇ ಕಷ್ಟವಾಗುತ್ತಿದೆ. ಹೀಗಾಗಿ ಹನ್ನೆರಡನೆಯ ಶತಮಾನದ ಬಸವಣ್ಣನಿಗೂ, ಇಪ್ಪತ್ತೊಂದನೆಯ ಶತಮಾನದ ಬಸವಣ್ಣನಿಗೂ ತುಂಬಾ ಅಂತರವಿದೆ.




ಚಿಕ್ಕಬಳ್ಳಾಪುರ ಸರ್ಕಾರಿ ಪದವಿಪೂರ್ವ ಕಾಲೇಜು ಆವರಣದಲ್ಲಿ ಚಿಕ್ಕಬಳ್ಳಾಪುರ ಶೈಕ್ಷಣಿಕ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಆರ್. ವೆಂಕಟರಾಮ್ ಅವರಿಂದ ನವಕರ್ನಾಟಕ ಪುಸ್ತಕ ಪ್ರದರ್ಶನದ ಉದ್ಘಾಟನೆ.

ಒಂದಂತೂ ನಿಜ, ಇಪ್ಪತ್ತೊಂದನೆಯ ಶತಮಾನದ ದಲಿತರ ಸಮಸ್ಯೆಗಳಿಗೆ ಹನ್ನೆರಡನೆಯ ಶತಮಾನದ ಬಸವಣ್ಣನಲ್ಲಿ ಕೆಲ ಪರಿಹಾರಗಳಿವೆ. ಅಂದು ಬಸವ ನಡೆಸಿದ ಸಮಾಜೋಧಾರ್ಮಿಕ ಮತ್ತು ಆರ್ಥಿಕ ವಲಯದ ಕ್ರಾಂತಿ ಇಂದಿಗೂ ಪ್ರಸ್ತುತವಾದುದು. ಇದನ್ನು ಇಂದು ಕೇವಲ ವಾಗ್ವಾದ ವಲಯಕ್ಕೆ ಮಾತ್ರ ಮಿತಿಗೊಳಿಸಬೇಕಿಲ್ಲ; ಜ್ವಲಂತ ಸಮಸ್ಯೆಗಳ ಮೇಲೂ ಪ್ರಯೋಗಿಸಬಹುದು..

ಬಸವಣ್ಣನ ದೃಷ್ಟಿಯಲ್ಲಿ ಅನ್ನದ ಋಣ ಎಲ್ಲಾ ಋಣಕ್ಕಿಂತ ಹೆಚ್ಚಿನದು. ಇದು ಶ್ರೇಣಿಯನ್ನು, ಸಮಾನತೆಯನ್ನು ಸೃಷ್ಟಿಸಬಲ್ಲುದು. ಅಂದರೆ, 'ಅನ್ನ'ವನ್ನು ಬಳಸಿಕೊಳ್ಳುವವರ ಮೇಲೆ ಈ ಸೃಷ್ಟಿ ನಡೆಯುತ್ತದೆ. ದಲಿತ ಸಮುದಾಯಗಳು ಮೊದಲಿನಿಂದಲೂ ಅನ್ನಕ್ಕೆ ಪ್ರಾಶಸ್ತ್ಯ ನೀಡಿವೆ. ವಿಶೇಷವೆಂದರೆ, ಇದು ದಲಿತರ ಮೂಲಭೂತ ಅಗತ್ಯಗಳಲ್ಲಿ ಮೊದಲಿನದು. ಇದೆಲ್ಲವನ್ನೂ ಬಸವಣ್ಣ ಸೂಕ್ಷ್ಮವಾಗಿ ಗಮನಿಸಿದ್ದ. ಆದ್ದರಿಂದ 'ಸಹ ಭೋಜನ' ಸೂತ್ರ ಜಾರಿಗೊಳಿಸುವ ಮೂಲಕ ಎಲ್ಲಾ ಸಮುದಾಯಗಳನ್ನು ಸಮಾನತೆ ಅಡಿಯಲ್ಲಿ ತರಲು ಶ್ರಮಿಸಿದ. ದಲಿತರ ಮನೆಯಲ್ಲಿ ಊಟ ಮಾಡುವ ಮೂಲಕ ಮೇಲ್ಜಾತಿ ಜನರ ಭ್ರಮೆಯನ್ನು ಮುರಿಯುವುದು ಬಸವಣ್ಣನ ಮುಖ್ಯ ಉದ್ದೇಶವಾಗಿತ್ತು. ಆದರೆ, ಮಾದಾರ ಚೆನ್ನಯ್ಯ ಮತ್ತು ಸಂಬಳಿ ನಾಗಿದೇವರ ಮನೆಯಲ್ಲಿ ಬಸವಣ್ಣ ಊಟ ಮಾಡಿದನೆಂಬ ಒಂದೇ ಕಾರಣಕ್ಕೆ ಇಡೀ ಕಲ್ಯಾಣದ 'ವೇದದ ನಡ ನಡುಗಿತು, ಶಾಸ್ತ್ರ ಉರುಳಿತು, ತರ್ಕ ಮುರಿಯಿತು, ಆಗಮ ಅಗಲಿತು'. ಇದಕ್ಕೆಲ್ಲ ಉತ್ತರಿಸಲು ಸಂಬಳಿ ನಾಗಿದೇವನ ಮೈಯಲ್ಲಿ ಹಾಲೇ ಬರಬೇಕಾಯಿತು. ಇಷ್ಟಕ್ಕೆಲ್ಲ ಕಾರಣ, ಕಲ್ಯಾಣದ ಬ್ರಾಹ್ಮಣ್ಯ. ಇಂಥ ಬ್ರಾಹ್ಮಣ್ಯ ಪ್ರಭುತ್ವದ ಕಿವಿ ಕಚ್ಚಿದಾಗ 'ಕಲ್ಯಾಣ' ಉಳಿದಿತ್ತಾದರೂ ಹೇಗೆ? ಆದರೂ ಬಸವ ಬಿಡಲಿಲ್ಲ. ದಲಿತ ಸಮುದಾಯದಲ್ಲಿ ಹುದುಗಿರುವ ಕೀಳರಿಮೆಯನ್ನು ಕಳೆಯಲು, ಸಹಭೋಜನ ಮತ್ತು ಸಹಪಂಕ್ತಿಗಳನ್ನು ಒಂದು ಪ್ರಜ್ಞೆಯಾಗಿ ಕಂಡ. ಇಂಥ ಪ್ರಜ್ಞೆಯ ಆಶಯ ಇಂದಿನ ಹಳ್ಳಿಗಳಲ್ಲಿ ಅತ್ಯಂತ ಅನಿವಾರ್ಯವಾಗಿದೆಯೆಂದು ಬೇರೆ ಹೇಳಬೇಕಿಲ್ಲ. ಏಕೆಂದರೆ, ಡರ್ಬಾನ್‌ನಲ್ಲಿ ಇತ್ತೀಚೆಗೆ ನಡೆದ ಜನಾಂಗಭೇದ ಮತ್ತು ವರ್ಣಭೇದ ನೀತಿವಿರೋಧಿ ಸಮಾವೇಶಕ್ಕೆ ಭಾರತ ಪ್ರತಿಕ್ರಿಯಿಸಿದ ರೀತಿಯೇ ಬೇರೆಯಾಗಿತ್ತು. 'ಈ ನೀತಿ ಇಲ್ಲಿಲ್ಲ, ಅಸ್ಪೃಶ್ಯತೆ ಭಾರತದ ಸಮಸ್ಯೆಯೇ ಅಲ್ಲ' ಎಂಬ ಧ್ವನಿ ಅದರಲ್ಲಿತ್ತು. ಈ ಧ್ವನಿ ದಲಿತರ ಸ್ವಾತಂತ್ರ್ಯಕ್ಕೆ ಮಾಡಿದ ವ್ಯಂಗ್ಯವೇ ಆಗಿತ್ತು. ಅದಕ್ಕೆಂದೇ ಅಂಬೇಡ್ಕರ್ ಅಂದು ದೇಶಕ್ಕಿಂತ ಮೊದಲು ದಲಿತರಿಗೆ ಸ್ವಾತಂತ್ರ್ಯ ಸಿಗಲಿ ಅಂದದ್ದು. ಆದ್ದರಿಂದ ಸದ್ಯದ ಸ್ಥಿತಿಯಲ್ಲಿ ಬಸವಣ್ಣನ 'ಸಹಭೋಜನ' ಸಿದ್ಧಾಂತ ಒಂದು ಆಶಾಕಿರಣವಾಗಬಲ್ಲದು.

ಬಸವಣ್ಣನ ಬಹುಮುಖ್ಯವಾದ ಇನ್ನೊಂದು ತತ್ತ್ವ 'ಅಪವರ್ಗೀಕರಣ'. ಮನುಷ್ಯ 'ದೊಡ್ಡವ' ಆಗಬೇಕಾದರೆ ಮೊದಲು 'ಸಣ್ಣವ'ನಾಗಬೇಕು. ಸೂರ್ಯಚಂದ್ರರು ಇದಕ್ಕೆ ಉತ್ತಮ ಉದಾಹರಣೆ. ಮೇಲೇರಿ ಹೋದಂತೆಲ್ಲಾ ಅವರು 'ಚಿಕ್ಕವ'ರಾಗುತ್ತಾರೆ. ಈ ಸೂಕ್ಷ್ಮ ಬಸವಣ್ಣನಿಗೆ ಗೊತ್ತಿತ್ತು. ಬಸವಣ್ಣನಿಗೆ ಎಲ್ಲವೂ ಇತ್ತು, ಆದರೆ ಅದು ಎಲ್ಲರಿಗೂ ಇಲ್ಲವಲ್ಲ ಎಂಬ ಕೊರಗೂ ಇತ್ತು. ಹಾಗಾಗಿ ಆತ ಇಲ್ಲದವರ ಮಧ್ಯ ಗುರುತಿಸಿಕೊಂಡ.

ಈ ನಾಡಿನಲ್ಲಿ ಹಣ, ಅಧಿಕಾರ, ಅಂತಸ್ತು ಹಾಗೂ ಸಾಂಸ್ಥಿಕ ದೇವರು, ಧರ್ಮಗಳು ಸಿಕ್ಕರೆ ಎರೆಹುಳು ಸಹ ಸರ್ಪಗಳಾಗುತ್ತವೆ. ಆದರೆ, ಬಸವಣ್ಣ ಕೊನೆಯವರೆಗೂ ಎರೆಹುಳು ಆಗಿಯೇ ಉಳಿದ. ಕೆಳವರ್ಗಕ್ಕೆ ಆಹಾರವಾದ. ಆದರೂ ಸಹ ಬಸವಣ್ಣನನ್ನು ಪುರಸತ್ತೆ ಮತ್ತು ಪ್ರಭುಸತ್ತೆಗಳು ಹಿಂಸಿಸುತ್ತಲೇ ಇದ್ದವು. ಆಗ, ಚೆನ್ನಯ್ಯ ಮತ್ತು ಕಕ್ಕಯ್ಯನ ಮನೆಯ ದಾಸ ದಾಸಿಯ ಮಕ್ಕಳು,

*'ಬೆರಣಿಗೆ ಹೋಗಿ ಸಂಗವ ಮಾಡಿದರು*
*ಇವರಿಬ್ಬರಿಗೆ ಹುಟ್ಟಿದ ಮಗ ನಾನು*
*ಕೂಡಲಸಂಗಮನ ಸಾಕ್ಷಿಯಾಗಿ'*

ಎಂದು ಹೇಳುವ ಮೂಲಕ ಪೂರ್ಣ ಕೆಳಗಿಳಿದು ಬರುತ್ತಾನೆ. ಚೆನ್ನಯ್ಯ, ಕಕ್ಕಯ್ಯ ಮತ್ತು ಬೊಮ್ಮಯ್ಯರು ನನ್ನ ಸಾಕ್ಷಾತ್ ಅಪ್ಪ, ಬೊಪ್ಪ, ಅಣ್ಣಂದಿರೆಂದರೂ ಕೆಲವರು ಕೇಳದೇ ಇದ್ದಾಗ 'ಎನ್ನನೇತಕ್ಕರಿಯಿರಿ' ಎಂದು ನೊಂದು ನುಡಿಯುತ್ತಾನೆ. ಸಿರಿಯಾಳನನ್ನು ಶೆಟ್ಟಿ ಎಂದು, ಮಾಚಯ್ಯನನ್ನು ಮಡಿವಾಳನೆಂದು, ಕಕ್ಕಯ್ಯನನ್ನು ಡೋಹರನೆಂದು, ಚೆನ್ನಯ್ಯನನ್ನು ಮಾದಾರನೆಂದು ಕರೆಯದಿರುವ ತನಗೆ ಬ್ರಾಹ್ಮಣನೆಂದೇಕೆ ಕರೆಯುತ್ತೀರೆಂದು ಪ್ರಶ್ನಿಸುತ್ತಾನೆ. 'ಆನು ಹಾರುವನೆಂದರೆ ಕೂಡಲ ಸಂಗಮದೇವ ನಗುವನಯ್ಯ' ಎಂದು ಗೋಗರಿಯುತ್ತಾನೆ. ಈ ಎಲ್ಲಾ ಸಂದರ್ಭದಲ್ಲಿ ಎದ್ದು ಕಾಣುವ ಅಂಶ ಅಪವರ್ಗೀಕರಣ. ಹಣ, ಅಧಿಕಾರ, ಅಂತಸ್ತು, ಜಾತಿ, ಧರ್ಮಗಳಿಂದ ಮೇಲಿದ್ದವರು, ಅದನ್ನು ಬಿಟ್ಟು ಕೆಳಗಿಳಿದು ಬಂದಾಗಲೇ ಶೂದ್ರ ಸಮುದಾಯಗಳಿಗೆ ಆತ್ಮವಿಶ್ವಾಸ ಹುಟ್ಟುತ್ತದೆ. ಬಸವಣ್ಣ ಈ ಕೆಲಸ ಮಾಡಿದ್ದ. 'ಮೇಲಾಗಲೊಲ್ಲೆನು ಕೀಳಾಗಲಲ್ಲದೆ' ಎಂದಿದ್ದ. 'ಕೀಳಿಂಗಲ್ಲದೆ ಹಯನು ಕರೆವುದೇ?' ಎಂದು ಕೇಳಿದ್ದ. 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ, ಕಷ್ಟತನದ ಹೊರೆಯ ಹೊರಿಸದಿರಯ್ಯ' ಎಂದು ನೊಂದಿದ್ದ. ಆದರೂ ವಿಪ್ರರು ಒಪ್ಪದೇ ಇದ್ದಾಗ




'ಏನಯ್ಯ ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯ? ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ' ಎಂದು ಪ್ರತಿಕ್ರಿಯಿಸಿದ್ದ. ಹಾಗಾಗಿ ದೇವಾಲಯದ ಕಳಸ ಪವಿತ್ರವೂ ಅಲ್ಲ, ಮೇಲೂ ಅಲ್ಲ. ಏಕೆಂದರೆ, ಅದು ಕಾಗೆಗುಬ್ಬಿಗಳು ವಿಷ್ಟಿಸುವ ಸ್ಥಳವೆಂದು ಜರೆದು, ತಾನು ಶರಣರ ಪಾದಧೂಳಿಯಾಗಲು ಬಯಸಿದ. ಇದೆಲ್ಲದರ ಆಶಯ, ದಲಿತರಲ್ಲಿ ಆತ್ಮ ವಿಶ್ವಾಸ ಮತ್ತು ಆತ್ಮಪ್ರತ್ಯಯ ಹುಟ್ಟಿಸುವುದೇ ಆಗಿತ್ತು. ಆದ್ದರಿಂದ, ಕೆಳವರ್ಗದವರಲ್ಲಿದ್ದ ಕೀಳರಿಮೆ ಕಳೆಯಲು ಮೇಲ್ವರ್ಗದ ವ್ಯಕ್ತಿಗಳು ಈ ರೀತಿ ಅಪವರ್ಗೀಕರಣಗೊಳ್ಳುವುದು ಅತ್ಯಂತ ಅಗತ್ಯವೆಂಬುದಕ್ಕೆ ಬಸವಣ್ಣನೇ ಸಾಕ್ಷಿ.

ಅಪವರ್ಗೀಕರಣದ ಜೊತೆಜೊತೆಯಲ್ಲಿಯೇ ನಡೆಯಬೇಕಾದ ಇನ್ನೊಂದು ಪ್ರಕ್ರಿಯೆ 'ಮೌಲ್ಯೀಕರಣ'. ದಲಿತ ಸಮುದಾಯಗಳಲ್ಲಿರುವ ಆಕೃತಿಗಳಿಗೆ ಮೇಲ್ವರ್ಗದಷ್ಟೇ ಬೆಲೆ ಮೌಲ್ಯವಿದೆಯೆಂದು ತೋರಿಸುವುದು ಇದರ ಮುಖ್ಯ ಉದ್ದೇಶ. 'ವ್ಯಾಸ ಬೋಯಿತಿ ಮಗ, ಮಾರ್ಕಂಡೇಯ ಮಾತಂಗಿಯ ಮಗ' ಎಂದು ಹೇಳುವಲ್ಲಿ ದಲಿತರಿಗೆ ಇರುವ ಬಹು ದೊಡ್ಡ ಪರಂಪರೆಯನ್ನು ಬಸವಣ್ಣ ಪರಿಚಯಿಸುತ್ತಾನೆ. ಅಗಸ್ತ್ಯ, ದೂರ್ವಾಸ, ಕಶ್ಯಪ, ಕೌಂಡಿಣ್ಯ ರಂಥ ಮಹಾಮುನಿಗಳು ಹುಟ್ಟಿ ಬೆಳೆದದ್ದು ಸಹ ಶೂದ್ರ ಸಮುದಾಯದಲ್ಲಿ ಎಂಬುದನ್ನು ಸಾಬೀತುಪಡಿಸುತ್ತಾನೆ. ದಲಿತ ಮತ್ತು ಶೋಷಿತ ವರ್ಗದಲ್ಲಿ ಆತ್ಮವಿಶ್ವಾಸ ಹುಟ್ಟಿಸುತ್ತಲೇ ಮೇಲ್ಜಾತಿಯ ಭ್ರಮೆಗಳನ್ನು ಇಲ್ಲಿ ಕುಟ್ಟಿ ಪುಡಿ ಮಾಡುವ ಆಶಯವಿದೆ. 'ನಮ್ಮ ಕುಲಕ್ಕೆ ತಿಲಕ ಮಾದಾರ ಚೆನ್ನಯ್ಯ' ಎನ್ನುವಲ್ಲಿ ಇದರ ಸ್ಪಷ್ಟ ಧೋರಣೆ ಅಡಗಿದೆ. ಹಾಗಾದರೆ, ಬಸವನ ವಾರಸುದಾರರಾದ ನಾವು ಏನು ಮಾಡಬೇಕು? ಆಳೆತ್ತರದ ಆಸನಗಳಲ್ಲಿ ವಿರಾಜಮಾನರಾಗಿರುವ ಕೆಲ ಸ್ವಾಮಿಗಳು ಕೆಳಗಿಳಿದು ಕುಳಿತರೆ ಸಾಕು. ಅಡ್ಡಪಲ್ಲಕ್ಕಿ-ಉದ್ದಪಲ್ಲಕ್ಕಿಗಳಲ್ಲಿ ಮೆರವಣಿಗೆ ಮಾಡಿಕೊಳ್ಳುವುದು ಬಿಟ್ಟು 'ನೆಲದಲ್ಲಿ' ನಡೆದರೆ ಸಾಕು. ಗೂಟದ ಕಾರುಗಳಲ್ಲಿ ಗಾಳಿಗಿಂತಲೂ ವೇಗವಾಗಿ ಓಡುವ ರಾಜಕಾರಣಿಗಳು ಸ್ವಲ್ಪ ತಡೆದು, ದಲಿತರ ಕೇರಿಗಳಲ್ಲಿ ನಡೆದಾಡಿದರೆ ಸಾಕು. ಆಗ ದಲಿತರ ಮೌಲ್ಯೀಕರಣಕ್ಕೆ ತನ್ನಿಂದ ತಾನೇ ಬೆಲೆ ಬರುತ್ತದೆ. ಸಾಧ್ಯವಾದ ಸಮಸ್ಯೆಗಳು ಬಗೆಹರಿಯುತ್ತವೆ. ಅಂದು ಬಸವಣ್ಣನಿಗೆ ಯಾರೇ ಶರಣು ಅಂದರೂ, ಅವರಿಗೆ ಆತ ಶರಣು, ಶರಣಾರ್ಥಿ ಹೇಳುತ್ತಿದ್ದ. ಆದರೆ, ಇವತ್ತು ಕಾಲಿಗೆ ಬಿದ್ದು ನಮಸ್ಕರಿಸಿದರೂ ಕೆಲವರಿಗೆ ಆ್ಞಂ-ಹ್ಞೂಂ ಅನ್ನುವಷ್ಟೂ ವ್ಯವಧಾನವಿಲ್ಲ. ಇದು ಖಂಡಿತಾ ಬಸವಪ್ರಜ್ಞೆಗೆ ವಿರೋಧವಾದುದು. ಆದ್ದರಿಂದ, ದಲಿತರನ್ನು ಇವೆಲ್ಲವುಗಳಿಂದ ಬಿಡುಗಡೆಗೊಳಿಸಲು ಮತ್ತು ಅವರನ್ನು ಸರ್ವರೀತಿಯಿಂದಲೂ ಮೌಲ್ಯೀಕರಿಸಲು ಬಸವಣ್ಣನಲ್ಲಿ ಅನೇಕ ದಾರಿಗಳಿವೆ. ಅವು ಮೌಲ್ಯೀಕರಣ ಸಿದ್ಧಾಂತದಲ್ಲಿ ಸಿಗುತ್ತವೆ.

ಬಸವಣ್ಣನ ತತ್ವಗಳಲ್ಲಿ 'ಕಾಯಕ' ಮತ್ತು 'ದಾಸೋಹ'ಗಳಿಗೆ ವಿಶೇಷ ಸ್ಥಾನವಿದೆ. ಕಲ್ಯಾಣದ ಶರಣರ ಕ್ರಾಂತಿಗೆ ಇವುಗಳಿಂದ ಬಹುದೊಡ್ಡ ಕೊಡುಗೆ ಸಂದಿದೆ. ಇದನ್ನು ಶ್ರಮ ಮತ್ತು ಸಂಪತ್ತಿನ ವಿಕೇಂದ್ರೀಕರಣದಲ್ಲಿ ಗುರುತಿಸುತ್ತೇವೆ. ಶ್ರಮದಲ್ಲಿ ಭೇದ-ಭಾವ ಇರಬಾರದು. ಅದನ್ನು ಬೌದ್ಧಿಕ, ದೈಹಿಕವೆಂದು ವಿಭಜಿಸಿದರೆ; ಬುದ್ಧಿ ಮತ್ತು ಬೆವರುಗಳಲ್ಲಿ ವ್ಯತ್ಯಾಸ ಹುಟ್ಟಿಸಿದಂತಾಗುತ್ತದೆ. ಏಕೆಂದರೆ, ಇವೆರಡಕ್ಕೂ ದೇಹ ಎಂಬುದು ಒಂದೇ. ಹಾಗಾಗಿ, 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸಿಗನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ. ಇದು ಬಿಟ್ಟು ಕಿವಿಯಲ್ಲಿ ಹುಟ್ಟಿದವರು ಯಾರೂ ಇಲ್ಲ' ಎಂಬುದು ಬಸವಣ್ಣನ ವಾದ. ಇಲ್ಲಿ ಕಮ್ಮಾರನ ಶ್ರಮಕ್ಕಿಂತ ಹಾರುವನ ಶ್ರಮ ಶ್ರೇಷ್ಠವಲ್ಲ. ಎರಡೂ ಸಮ. ಇದುವೇ 'ಕಾಯಕ' ಪರಿಭಾಷೆ. ಇಂಥ 'ಕಾಯಕ'ದಲ್ಲಿ ವೃತ್ತಿ ಸಮಾನತೆಯ ಸೂತ್ರ ಅಡಗಿದೆ. ಮೇಲು-ಕೀಳು ಮುರಿದು ಸಮತೆ ಸಾಧಿಸಿದೆ. ಏಕಕಾಲಕ್ಕೆ ದೇಹ ಮತ್ತು ಮನಸ್ಸನ್ನು, ಬುದ್ಧಿ ಮತ್ತು ಬೆವರನ್ನು ಒಂದೇಯಾಗಿ ಭಾವಿಸುವ ಶಕ್ತಿ 'ಕಾಯಕ' ಪರಿಕಲ್ಪನೆಗಿದೆ. ಹೀಗಿರುವುದರಿಂದಲೇ ಹನ್ನೆರಡನೆಯ ಶತಮಾನದ ಶರಣರು ತಮ್ಮ ಹೆಸರುಗಳ ಮೊದಲು ವೃತ್ತಿಯನ್ನು ದಾಖಲಿಸಿಕೊಂಡರು. ಕಕ್ಕಯ್ಯನಿಗೆ 'ಡೋಹರ'ಎಂದರೆ ಕೀಳೆನಿಸಲಿಲ್ಲ, ಅದರ ಬದಲಿಗೆ ಗೌರವ ಪ್ರಾಪ್ತವಾಗಿತ್ತು. ಆದರೆ, ಇವತ್ತಿನ ಕಕ್ಕಯ್ಯನಿಗೆ ಡೋಹರ ಎನ್ನುವುದು ಅಪಮಾನದ, ಅವಮಾನದ, ಕೀಳಿನ ಸಂಕೇತವಾಗಿದೆ. ಇಂದು 'ಡೋಹರ' ಎನ್ನುವಲ್ಲಿ ಕರೆಯುವವನಿಗೆ ಮೇಲ್ ಹಿರಿಮೆಯಿದ್ದರೆ; ಕರೆಯಿಸಿಕೊಳ್ಳುವವನಲ್ಲಿ ಕೀಳ್ ಹಿರಿಮೆ ಕಾಡುತ್ತಿದೆ. ಮಾದಾರ ಚೆನ್ನಯ್ಯನನ್ನು ಇಂದು ಎಂ.ಚೆನ್ನಯ್ಯನೆಂದು ರೂಪಾಂತರಿಸಬಹುದು. ಜಿಲ್ಲಾಧಿಕಾರಿಯನ್ನಾಗಿಯೂ ಮಾಡಬಹುದು. ಆದರೆ, ಕೆಳಗಿನ ಗುಮಾಸ್ತ ಮೇಲ್ಜಾತಿಯವನಾಗಿದ್ದರೆ ಆಗ ಅವರಲ್ಲಿ ನಡೆಯುವ ಆಂತರಿಕ ಗುದುಮುರುಗಿಗಳೇ ಬೇರೆ. ಇದನ್ನು ಗಂಭೀರವಾಗಿ ಲಕ್ಷಿಸಬೇಕು. ಅಧಿಕಾರ, ಆಫೀಸ್ ಸರಹದ್ದಿಗೆ ಮಾತ್ರ ಸೀಮಿತ. ಮನೆಗೆ ಹೋದ ಮೇಲೆ ಅವನ್ಯಾರೊ, ಇವನ್ಯಾರೊ. ಹಾಗಾಗಿ, ಮನಸ್ಸು ಬದಲಾಗದ ಹೊರತು ವೃತ್ತಿ ವ್ಯತ್ಯಾಸ ಹೋಗದು. ಇಂಥ ಸಂದರ್ಭದಲ್ಲಿ 'ಕಾಯಕ' ತತ್ವ ಅನಿವಾರ್ಯವೆನಿಸುತ್ತದೆ.

ಶ್ರಮದಿಂದ ಬಂದ ಸಂಪತ್ತನ್ನು ವಿಕೇಂದ್ರೀಕರಿಸಬೇಕೆಂಬುದೇ ಬಸವಣ್ಣನವರ ನಿಲುವು. ಅದನ್ನೇ 'ಕಾಯಕ' ಮತ್ತು 'ದಾಸೋಹ' ಪರಿಕಲ್ಪನೆಯಲ್ಲಿ ಕಾಣುತ್ತೇವೆ. ಸಂಪತ್ತು ಸಂಗ್ರಹಿಸಿರುವುದರಿಂದ ಶ್ರೀಮಂತರಿಗೆ ಲಾಭವೇ ಹೊರತು; ಶೋಷಿತರಿಗೆ ಅಲ್ಲ. ಇದನ್ನು ಅರಿತ ಬಸವಣ್ಣ 'ದಾಸೋಹ' ಸೂತ್ರ ಜಾರಿಗೆ ತಂದಿದ್ದ. 'ದಾಸೋಹ'ದಲ್ಲಿ ಕೊಡುವವನ ಅಹಂಕಾರವಾಗಲೀ, ಪಡೆಯುವವನ ಹಂಗಾಗಲಿ ಇರುವುದಿಲ್ಲ. ಎಲ್ಲವೂ ಸರಳ, ಸರಾಗ. ಶರಣರ ಸಂಪತ್ತು ಶರಣರಿಗೆ ಸಲ್ಲುತ್ತದೆ ಅಷ್ಟೆ. ವಿಶೇಷವಾಗಿ ಗುರು, ಲಿಂಗ, ಜಂಗಮರಿಗೆ ಸಲ್ಲುವ ಮೂಲಕ ತ್ರಿವಿಧ ನೆಲೆಯಲ್ಲಿ ಹಂಚಲ್ಪಡುತ್ತದೆ. ಆದರೆ, ಇವತ್ತಿನ ಸಂಪತ್ತು ಇಂಥವರಲ್ಲಿಯೆ ಏಕೆ ಕೇಂದ್ರೀಕರಣಗೊಳ್ಳುತ್ತಿದೆ? ಇವರಿಗೆ ಏನೂ ಅನ್ನಿಸುತ್ತಿಲ್ಲವೆ? ಇವರೇಕೆ ಇಲ್ಲದವರಿಗೆ ಹಂಚುತ್ತಿಲ್ಲ? ಈ ಪ್ರಶ್ನೆಗಳಿಗೆ ವ್ಯಂಗ್ಯವೇ ಉತ್ತರವಾಗುತ್ತಿದೆ. ಕಾರಣ, ಇವರಿಗೆ ಸಮಾಜಕ್ಕಿಂತ ಸಂಪತ್ತೇ ಮುಖ್ಯವಾಗಿದೆ. ಹೆಚ್ಚು ಸಂಪತ್ತನ್ನು ಸಂಗ್ರಹಿಸುವ ಮೂಲಕ ಬಡವರನ್ನು ನಿಯಂತ್ರಿಸುವ ಉದ್ದೇಶವಿದೆ. ಇದು ದಲಿತರಿಗೆ ಬಂಧನವೇ ಹೊರತು ಬಿಡುಗಡೆಯಲ್ಲ. ಇಂಥ ವೈರುಧ್ಯಗಳು ಹನ್ನೆರಡನೆಯ ಶತಮಾನದಲ್ಲೇ ನಡೆದುಹೋಗಿವೆ. 'ಉಳ್ಳವರು ಶಿವಾಲಯ ಮಾಡುವರು, ನಾನೇನು ಮಾಡಲಿ ಬಡವ' ಎಂಬಲ್ಲಿ ಬಲ್ಲಿದ-ಬಡವರ ನಡುವಿನ ಬಹುದೊಡ್ಡ ಬಿರುಕನ್ನು ಕಾಣುತ್ತೇವೆ. ಜೊತೆಗೆ, ಶ್ರೀಮಂತರು ಒಂದು ವೇಳೆ ತಮ್ಮ ಸಂಪತ್ತು ವ್ಯಯ ಮಾಡಿದರೂ, ಅದು ಇಂಥ ದೇವಾಲಯಗಳ 'ಬಾಯಿಗೆ' ದಕ್ಕುತ್ತಿತ್ತು. ಆದ್ದರಿಂದ ಬಸವಣ್ಣ

ಸೀರೆಯೊಳಗೊಂದು ಎಳೆಯ, ಹೊನ್ನಿನೊಳಗೊಂದು ಹೊರೆಯ. ಇಂದಿಂಗೆ ನಾಳಿಂಗೆ ಎಂದು' ತೆಗೆದಿಟ್ಟುಕೊಂಡರೆ ತಲೆದಂಡವೆಂದು ಪ್ರತಿಜ್ಞೆ ಮಾಡಿದ್ದ. ಆಯ್ದಕ್ಕಿ ಲಕ್ಕಮ್ಮನಂಥ ಸಾಮಾನ್ಯ ಶರಣೆಯಿಂದಲೂ 'ಈಸಕ್ಕಿಯ ಆಸೆ ನಿಮಗೇಕೆ?' ಎಂದು ಗಂಡನಿಗೇ ಪ್ರಶ್ನಿಸುವಂತೆ ಮಾಡಿದ್ದ. ಇದು ಬಸವನ ವಿಕೇಂದ್ರೀಕರಣ ತತ್ವ. ಇಂಥ ತತ್ವದ ದಾರಿಯಿಂದ ಮೊದಲು ಲಾಭ ತಟ್ಟುವುದು ದಲಿತರಿಗೆಂಬುದು ನಿರ್ವಿವಾದ.

ಬಸವಣ್ಣನ ರಾಜಕೀಯ ಪ್ರಜ್ಞೆಯಲ್ಲಿ ದಲಿತರ ಬಿಡುಗಡೆಯ ಅನೇಕ ದಾರಿಗಳಿವೆ. ಆತ ಅವತ್ತಿನ ರಾಜಸತ್ತೆಯ ವಿರುದ್ಧ ಶರಣಸತ್ತೆಯನ್ನು ಸದಾ ಜಿದ್ದಾ ಜಿದ್ದಿಗೆ ಇಟ್ಟ ಮನುಷ್ಯ. ಬಿಜ್ಜಳನ ಅರಸೊತ್ತಿಗೆಗೆ ಪರ್ಯಾಯವಾಗಿ, ಶರಣರ ಅನುಭವ ಮಂಟಪ ಕಟ್ಟಿದ್ದನ್ನು ಗಮನಿಸ ಬೇಕು. ಬಿಜ್ಜಳನ ಮಂತ್ರಿಮಂಡಳದಲ್ಲಿ ಮಂತ್ರಿಯಾಗಿದ್ದುಕೊಂಡೇ 'ಆನೀ ಬಿಜ್ಜಳಂಗೆ ಅಂಜುವೆನೆ ಅಯ್ಯಾ', 'ಭವಿಬಿಜ್ಜಳನ ಗದ್ದುಗೆ ಕೆಳಗೆ ಕುಳ್ಳಿರ್ದುರ್' ಎಂಬಿತ್ಯಾದಿ ಮಾತುಗಳನ್ನು ಆಡಿದ್ದ. ವಿರೋಧ ಪಕ್ಷದವರು ವಿರೋಧಿಸುವುದು ದೊಡ್ಡ ಸಮಾಚಾರವಲ್ಲ, ಆದರೆ, ಬಿಜ್ಜಳನ ಒಳಗಿದ್ದುಕೊಂಡೇ ಬಿಜ್ಜಳನನ್ನು ವಿರೋಧಿಸುವುದು ಇದೆಯಲ್ಲ ಅದು ಮಹತ್ವದ್ದು. ಇದು ಇವತ್ತಿನ ಮಂತ್ರಿಗಳಿಗೆ ಸಾಧ್ಯವೇ? ಸಾಧ್ಯವಾದರೆ ಖಂಡಿತಾ ದಲಿತರಿಗೆ ನ್ಯಾಯ ಸಿಗುತ್ತದೆ.

ಬಸವಣ್ಣನ ಅಂತರಿಕ ಮುಖ್ಯಮಂತ್ರಿ ಅಲ್ಲಮನೇ ಹೊರತು ಬಿಜ್ಜಳನಲ್ಲ. ಹೀಗಾಗಿ ದಲಿತ ಮುಖ್ಯಮಂತ್ರಿಯನ್ನು ಪಡೆದ ಮೊದಲ ಮನಸ್ಸು ಬಸವನದು. ಆದರೆ, ಸ್ವಾತಂತ್ರ್ಯ ಸಿಕ್ಕು ಅರ್ಧ ಶತಮಾನ ಗತಿಸಿದರೂ ಈ ದೇಶಕ್ಕೆ ದಲಿತ ಪ್ರಧಾನಮಂತ್ರಿಯಾಗಲೀ, ರಾಜ್ಯಕ್ಕೆ ದಲಿತ ಮುಖ್ಯಮಂತ್ರಿಯಾಗಲೀ ಆಗಲೇ ಇಲ್ಲ, ಆಗಬಹುದಿತ್ತು; ಬ್ರಾಹ್ಮಣ್ಯ ಮತ್ತು ಸ್ಥಾವರದ ಮನಸ್ಸುಗಳು ಬಿಡಲಿಲ್ಲ. ಇಂಥ ಮನಸ್ಸುಗಳ ಶುದ್ಧಿಗೆ ಬಸವಣ್ಣನಲ್ಲಿ ಔಷಧವಿದೆ ಎಂದರೆ ಅಚ್ಚರಿ ಪಡಬೇಕಿಲ್ಲ.

'ದೂಷಕನೊಬ್ಬ ದೇಶವ ಕೊಟ್ಟಡೆ
ಆಸೆಮಾಡಿ ಅವನ ಹೊರೆಯಲು ಬೇಡ' ಎನ್ನುವುದು ಬಸವಣ್ಣನ ಬುದ್ಧಿವಾದ. ವ್ಯಂಗ್ಯವೆಂದರೆ ಇವತ್ತಿನ ಉತ್ತರ ಪ್ರದೇಶ. ಮುಖ್ಯಮಂತ್ರಿ ಆಗುವ ಒಂದೇ ಆಸೆಗೆ ದಲಿತರನ್ನು ಬಲಪಂಥೀಯರ ಬಗಲಿಗೆ ಹಾಕುವ ಹುನ್ನಾರ. ಇದು ಬೇರೆಯವರಿಂದ ಆದುದಲ್ಲ; ಸ್ವತಃ ದಲಿತ ಮುಖಂಡರಿಂದ ನಡೆದದ್ದು. ಇವತ್ತು ಕೆಲ ದಲಿತ ನಾಯಕರಿಗೆ ನಿಗಮ, ಮಂಡಳಿ, ಅಕಾಡೆಮಿಗಳ ಆಸೆ ತೋರಿಸಿದರೆ ಅವರ ಬಾಯಲ್ಲಿ ನೀರು ಬರುತ್ತೆ. ಅದು 'ದೂಷಕ ಕೊಡುತ್ತಿರುವುದೆಂದು' ಇವರಿಗೆ ಗೊತ್ತೇ ಆಗುವುದಿಲ್ಲ. ವಿಧಾನಸೌಧದ ಕುರ್ಚಿಗೆ ಆಸೆ ಪಟ್ಟಿದ್ದರಿಂದಲೇ ಕರ್ನಾಟಕದ ದಲಿತ ಚಳವಳಿಗೆ ಭಾರಿ ಪೆಟ್ಟು ಬಿತ್ತು.

ಈ ಎಲ್ಲಾ ದೃಷ್ಟಿಯಿಂದ ಬಸವಣ್ಣನ ಶರಣಸತ್ತೆ ಸಿದ್ಧಾಂತವನ್ನು ಗಂಭೀರವಾಗಿ ಗ್ರಹಿಸುವ ಅಗತ್ಯವಿದೆ. ಯಾವುದೇ ರಾಜಸತ್ತೆ ಆ ರಾಜ್ಯದ ಶೋಷಿತರ ಮೇಲೆ ಮಾತ್ರ ಅಧಿಕಾರ ಚಲಾಯಿಸುತ್ತಿರುತ್ತದೆ. ಏಕೆಂದರೆ, ಇದರಾಚೆ ಅದು ಏನನ್ನೂ ಮಾಡದು. ಸರ್ಕಾರವನ್ನೇ ನಿಯಂತ್ರಿಸುವ ಶಕ್ತಿಗಳು ಹಲವು ಇರುವುದರಿಂದ, ಅವುಗಳ ಗೊಡವೆಗೆ ಸರ್ಕಾರ ಹೋಗುವುದಿಲ್ಲ. ಇಂಥ ಸಂದರ್ಭದಲ್ಲಿ ಪ್ರಜಾಸತ್ತೆಗೆ ಪ್ರಧಾನ ಪ್ರಾಶಸ್ತ್ಯ ಕೊಡದ ಸರ್ಕಾರಕ್ಕೆ ಧಿಕ್ಕಾರವೇ ಯೋಗ್ಯ.

ರಾಜಕೀಯದಲ್ಲಿ ಇನ್ನೂ ದಲಿತ ಧ್ವನಿಗಳಿಗೆ ಬೆಲೆ ಬಂದಿಲ್ಲ. ಇದು ಕರ್ನಾಟಕ, ಆ ಮೂಲಕ ಭಾರತಕ್ಕೂ ಅನ್ವಯಿಸುವ ಮಾತು. ಹಾಗಾದರೆ, ದಲಿತರಿಗೆ ಯಾರು ದಿಕ್ಕು? ಸರ್ಕಾರದಲ್ಲಿ ಭಾಗಿಯಾದವರು ಮತ್ತು ಸರ್ಕಾರದಿಂದ ಹೊರಗುಳಿದವರು ಇಬ್ಬರೂ ದಲಿತರ ಸಮಸ್ಯೆಗಳನ್ನು ಅರ್ಥೈಸಿಕೊಳ್ಳದಿದ್ದರೆ ಆ ಕಾಲಘಟ್ಟವೇ ಅರ್ಥಹೀನ. ಶರಣರ ಸಂಪತ್ತನ್ನು ಶರಣರಿಗೇ ವಿನಿಯೋಗಿಸುವಲ್ಲಿ ಬಸವಣ್ಣ ಅಂದು ಬಿಜ್ಜಳನೆದುರು ತೋರಿದ ಧೈರ್ಯ, ಇವತ್ತಿನ ಮಂತ್ರಿ ಮಹೋದಯರಿಗೆ ಬರಬೇಕು. ನಿತ್ಯ ನಡೆದ ಬಿಜ್ಜಳನೊಂದಿಗಿನ ಜಟಾಪಟಿ ಇವತ್ತು ಬೇಕು. ಇನ್ನು, ದಲಿತ ಸಮುದಾಯದಿಂದಲೇ ಎದ್ದು ಹೋದ 'ಮಹಾನುಭಾವರು' ಮಂತ್ರಿಗಳಾಗಿದ್ದಾರಲ್ಲ, ಅವರಿಗೆ ಏಕಕಾಲಕ್ಕೆ ಹನ್ನೆರಡನೆಯ ಶತಮಾನದ ಬಸವಣ್ಣ ಮತ್ತು ಇಪ್ಪತ್ತನೆಯ ಶತಮಾನದ ಅಂಬೇಡ್ಕರ್ ನೆನಪಾಗಬೇಕು. ತತ್ವ ಸಿದ್ಧಾಂತಗಳು ರಕ್ತಗತವಾಗಬೇಕು. ಆದರೂ ಆಗುತ್ತಿಲ್ಲ, ಬಸವಲಿಂಗಪ್ಪನಂತಹವರು ಯಾಕೆ ಬರುತ್ತಿಲ್ಲ? ಏಕೆಂದರೆ ಅವರ ಹೆಸರು 'ಬಸವಲಿಂಗಪ್ಪ'. ಬಸವ, ಲಿಂಗ ಮತ್ತು ಅಪ್ಪ ಕೂಡಿ ಆದ ವ್ಯಕ್ತಿತ್ವ ಅದು. ದಲಿತರಿಗಿಂತ ಅವರಿಗೆ ಕುರ್ಚಿ ಎಂದೂ ಮುಖ್ಯ ಆಗಲಿಲ್ಲ, ಹಂಗರಹಳ್ಳಿ, ಕಂಬಾಲಪಲ್ಲಿ, ವಣೇನೂರುಗಳು ಇವತ್ತಿನ ಮಂತ್ರಿಮಹೋದಯರಿಗೆ ಕಾಡಬೇಕಿತ್ತು; ಕಾಡಲಿಲ್ಲ. ದಲಿತರಿಗೆ ಇಪ್ಪತ್ತೈದು ಸಾವಿರ ಹಿಂಬಾಕಿ ಹುದ್ದೆಗಳು ಲಭಿಸಬೇಕಿತ್ತು; ಲಭಿಸಲಿಲ್ಲ.

ಇವತ್ತಿನ ಬಹುತೇಕ ರಾಜಕಾರಣಿಗಳಿಗೆ ಚುನಾವಣೆಗೊಮ್ಮೆ ದಲಿತರ, ಶೋಷಿತರ ಮನೆ-ಮನಗಳು ನೆನಪಾಗುತ್ತವೆ. ಆದರೆ, ಬಸವಣ್ಣ ಅಂದು ನಿತ್ಯವೂ ದಲಿತರ ಮನೆ-ಮನಗಳಲ್ಲಿ ಇರುತ್ತಿದ್ದ. ಆತನಿಗೆ ನಿತ್ಯವೂ ಯಾವ ಎಲೆಕ್ಷನ್‌ಗಳು ಇದ್ದವು? ಆತನೂ ಕಲ್ಯಾಣ ರಾಜ್ಯದ ಬಹುದೊಡ್ಡ ಮಂತ್ರಿ. ದಲಿತರಿಗಾಗಿ ಅದ್ಹೇಗೆ ಸಮಯ ಸಿಕ್ಕಿತ್ತು? ಅದರಂತೆ ಅಂದು ಅನೇಕ ಸಮಾರಂಭಗಳಿದ್ದವು. ಆದರೂ ಸಹ ಯಾವುದೇ ಆಮಂತ್ರಣ ಪತ್ರದಲ್ಲಿ ತನ್ನ ಹೆಸರು ಹಾಕಿಸಿಕೊಳ್ಳಲಿಲ್ಲ, ಏಕೆಂದರೆ ಸ್ಥಾವರ ಕಾರ್ಯಕ್ರಮಗಳಲ್ಲಿ ಈತ ಭಾಗಿಯಾದ ಬಗ್ಗೆ ಅಂದಿನ ಯಾವ ಶಾಸನಗಳು ಇಂದಿಗೂ ಸಾಕ್ಷಿಯಾಗಿಲ್ಲ. ಅಂದರೆ ಬಸವಣ್ಣ ಭಾಗಿಯಾಗಿರಲಿಲ್ಲ. ಆದದ್ದು ಜನಕಲ್ಯಾಣದಲ್ಲಿ ಮಾತ್ರ. ಅದರಂತೆ, ಮೆರವಣಿಗೆ, ಹಾರ, ತುರಾಯಿಗಳಿಂದ ದೂರವಿದ್ದ. ಕುದುರೆ ಮೇಲೆ ಕುಳಿತು, ಕಿರೀಟ-ಖಡ್ಗ ಧರಿಸಿರುವ ಇವತ್ತಿನ ಭಾವಚಿತ್ರದ ಬಸವಣ್ಣ ನಮ್ಮ ಸಂಕಥನ ಅಷ್ಟೆ. ನಿಜವಾಗಲೂ ಹೇಗಿದ್ದನೆಂದು ಹೇಳುವುದು ಕಷ್ಟ. ಆದರೆ ಆತನ ಮಾತು - ಮೌಲ್ಯ, ನಡೆ-ನುಡಿಗಳನ್ನು ಗಮನಿಸಿದರೆ ಅವತ್ತಿನ ಸಮಾಜವಾದಿಗಳ ಮತ್ತು ಕಮ್ಯುನಿಸ್ಟರ ಸಾದಾಸೀದ ಜೀವನ ನೆನಪಾಗುತ್ತದೆ. ಅಂಥ ಬಸವಣ್ಣ ಮತ್ತು ಆತನ ರಾಜಕೀಯ ಪ್ರಜ್ಞೆ ಇಂದಿನ ದಲಿತರ ಸಮಸ್ಯೆಗಳಿಗೆ ಕೆಲಮಟ್ಟಿಗಾದರೂ ಪರಿಹಾರ ನೀಡಬಲ್ಲದು.

ಒಟ್ಟಾರೆ, ಹನ್ನೆರಡನೇ ಶತಮಾನದ ಬಸವಣ್ಣನಲ್ಲಿ ಅನೇಕ ಹೋರಾಟಗಳಿವೆ. ವೈಚಾರಿಕ ಪ್ರಜ್ಞೆಯ ನೆಲೆಗಳಿವೆ. ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ರಂಗದಲ್ಲಿ ಸಮಾನತೆ ತರಬೇಕೆಂಬ ತುಡಿತಗಳಿವೆ. ಇವೆಲ್ಲ ದಲಿತರ ಬಿಡುಗಡೆಯಲ್ಲಿ ಮುಖ್ಯ ಪಾತ್ರ ನಿರ್ವಹಿಸಬಲ್ಲವು. ಅಂತರ್‌ಜಾತಿ ವಿವಾಹದ ಮೂಲಕ ಜಾತಿಯ ಗೋಡೆಗಳನ್ನು ಪುಡಿ ಮಾಡುವ ಪ್ರಯತ್ನವಿದೆ. ಅದರಂತೆ ಅಂದು 'ವೀರಶೈವ', 'ಲಿಂಗಾಯತ' ಎಂಬುದು ಸರ್ವಜಾತಿ ಜನಾಂಗಗಳ ಒಡ್ಡೋಲಗ. ಬ್ರಾಹ್ಮಣ್ಯದ ವಿರುದ್ಧ ಬಂಡಾಯವೆದ್ದವರ ಸಮಾವೇಶವದು. ಪರ್ಯಾಯ ಸಂಸ್ಕೃತಿ/ಸಮಾಜದ ಆಶೋತ್ತರಗಳು ಅಲ್ಲಿವೆ. ಆದ್ದರಿಂದಲೇ ಅದು ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣನಾಡಿನುದ್ದಗಲಕ್ಕೂ ವ್ಯಾಪಿಸಿತು. ಶೋಷಿತ ಸಮಾಜಗಳಲ್ಲಿ ಕೀಳರಿಮೆ ಕಳೆಯಿತು. ಹೊಲೆ ಹದಿನೆಂಟು ಜಾತಿಗಳನ್ನು ಒಂದೇ ಭಾವದಲ್ಲಿ ಒಂದಾಗಿಸಿತು.

ಆದರೆ, ಅವತ್ತಿನ ಬಸವ ಪರಿಕಲ್ಪನೆಯಲ್ಲಿಯೇ ಕೆಲವು ಬಂಧನದ ಅಂಶಗಳು ಇದ್ದ ಬಗ್ಗೆ ಗುಮಾನಿಗಳಿವೆ. ಉದಾಹರಣೆಗೆ ಅಂದು ದಲಿತರನ್ನು ವೀರಶೈವೀಕರಿಸುವಾಗ ಒಂದು ರೀತಿಯ ಬಂಧನವೇ ನಡೆಯಿತು. ಅಂದರೆ, ಅವರ ಅನನ್ಯತೆಯ ನೆಲೆಗಳಾದ ದೇವರು, ಧರ್ಮ, ಭಾಷೆ, ವೇಷ, ವಿಚಾರ, ಆಹಾರಗಳನ್ನೆಲ್ಲ ಬಿಟ್ಟು ಬರಲು ಒತ್ತಾಯಿಸಲಾಯಿತು. ಇವೆಲ್ಲ ಮೊದಲು ಚಲನಶೀಲವಾಗಿದ್ದವು. ಆದರೆ ವೀರಶೈವೀಕರಣದ ಹೆಸರಲ್ಲಿ ಅವು ಸಾಂಸ್ಥಿಕಗೊಂಡವು. ಇಷ್ಟಲಿಂಗವನ್ನು ಸ್ಥಾವರದ ವಿರುದ್ಧ ತಂದದ್ದೇನೋ ಸರಿ. ಆದರೆ ಅದು ದಲಿತರ ನೂರಾರು ದೈವಗಳನ್ನು ದೂರ ಮಾಡಿತು. ಭವಿ-ಭಕ್ತನ ಪರಿಕಲ್ಪನೆಯೆ ನೋಡ ಬಹುದು. ವೀರಶೈವರ ಆಚಾರ ವಿಚಾರ ಒಪ್ಪದಿದ್ದರೆ ಅವನನ್ನು ಅನುಭವಮಂಟಪದ ಶಾಸನ ಭವಿಯಾಗಿಯೇ ಕಾಣುತ್ತಿತ್ತು. ಆದ್ದರಿಂದ ಇಲ್ಲಿ ಭವಿ ಮತ್ತು ಭಕ್ತರಲ್ಲಿ ಯಾರದು ಬಿಡುಗಡೆ, ಯಾರದು ಬಂಧನ? ವೈದಿಕಶಾಹಿ ವಿರುದ್ಧ ದಲಿತರು ವೀರಶೈವೀಕರಣಗೊಳ್ಳ ಬೇಕು ನಿಜ. ಆದರೆ, ದಲಿತ ಜಗತ್ತನ್ನೇ ಚಿಮ್ಮುವುದು ಎಷ್ಟು ಸರಿ ? ದಲಿತರಿಗೆ ಸ್ವಾತಂತ್ರ್ಯ ವಿಲ್ಲದ್ದು ಒಂದು ರೀತಿಯ ಬಂಧನವಾದರೆ; ವೀರಶೈವೀಕರಣಗೊಳ್ಳುವುದು ಇನ್ನೊಂದು ರೀತಿಯ ಬಂಧನವಲ್ಲವೇ? ಇಂಥ ಹಲವು ಪ್ರಶ್ನೆಗಳು ಇಂದು ಚರ್ಚೆಗೆ ಒಳಪಡಬೇಕಿದೆ.

ಅದರಂತೆ ಇಂದು 'ವೀರಶೈವ' ಎಂಬುದು ಒಂದು ಪ್ರತ್ಯೇಕವಾದ 'ಏಕಸಂಸ್ಕೃತಿ' ಯಾಗಲು ಅಪೇಕ್ಷಿಸುತ್ತಿದೆ. ಇಂಥ ಅಪೇಕ್ಷೆಯನ್ನು 'ಬಹುಸಂಸ್ಕೃತಿ'ಗಳು ಆಕ್ಷೇಪಿಸಿದ್ದು ಸಹಜ; ಏಕೆಂದರೆ ಕೂಡಿ ಕಟ್ಟಿದ ಮನೆ, ಕೂಡಿಯೇ ಬದುಕಬೇಕು. ಆದರೆ, ಇದು ಸಾಧ್ಯವೇ? ಎಂಬ ಪ್ರಶ್ನೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಹನ್ನೆರಡನೆಯ ಶತಮಾನದ ಬಸವ ಪ್ರಜ್ಞೆಗಳು ಕೇಳಲು ಕಿವಿಗೆ ಇಂದು ತುಂಬಾ ಇಂಪಾಗಿರುತ್ತವೆ. ಆದರೆ, ಆಚರಣೆಯಲ್ಲಿ ಅವು ಸದಾ ಇಬ್ಬಾಯ ಖಡ್ಗ. ಅಂದಿನ ಅನುಭವ ಮಂಟಪದಲ್ಲಿ ಮೂವತ್ಮೂರಕ್ಕೂ ಮಿಕ್ಕಿ ಮಹಿಳೆಯರು ವಚನಕಾರರಾಗಿದ್ದರು. ಆ ಮೂಲಕ ಮಹಿಳೆಯರು ಮೊದಲ ಬಾರಿಗೆ ಮಾತಾಡಿದ್ದರು. ಅದು ಬಸವಣ್ಣನ ಬಹುದೊಡ್ಡ ಸಾಧನೆ. ಇಂದು ಅದೇ ಮಹಿಳೆಯರಿಗೆ ಶೇಕಡ ೩೩ರ ಅವಕಾಶ ನೀಡಲು ನಮಗೆ ಇಂದಿಗೂ ಸಾಧ್ಯ ವಾಗುತ್ತಿಲ್ಲ. ಏಕೆಂದರೆ, ಮಹಿಳೆಯೂ ಒಂದು ರೀತಿಯಲ್ಲಿ ದಲಿತಳೆ. ಇವಳ ಬಿಡುಗಡೆಗೆ ಅನುಭವ ಮಂಟಪದ ಆಶಯಗಳು ಆದರ್ಶವಾಗಬಲ್ಲವೆ? ಕಾದು ನೋಡಬೇಕು.

ಡಾ|| ರಂಗರಾಜ ವನದುರ್ಗ
ಕನ್ನಡ ಪ್ರವಾಚಕರು, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

ತಿಳಿವು

# ಕೀರ್ತಿಶನಿ

ಮಾನವನಿಗೆ ಹಣ ಆಸ್ತಿ ಅಂತಸ್ತುಗಳನ್ನು ಗಳಿಸುವುದರ ಜೊತೆಗೆ ಹೆಸರು, ಕೀರ್ತಿಗಳನ್ನು ಪಡೆಯಬೇಕೆಂಬ ಹಂಬಲವಿರುವುದೂ ಸಹಜ. ಬಿರುದು ಬಾವಲಿಗಳು, ಪ್ರಶಸ್ತಿ ಪ್ರಶಂಸೆಗಳು ಮಾನವನು ಜೀವನದಲ್ಲಿ ಗಳಿಸಿದ ಯಶಸ್ಸನ್ನು ಅಳೆಯುವ ಮಾನದಂಡಗಳಾಗಿವೆ. ತನಗೆ ಅದು ಬೇಕು, ಇದು ಬೇಕು, ತಾನು ಕೀರ್ತಿಶಾಲಿಯಾಗಬೇಕು ಎಂದು ಹಂಬಲಿಸುವವರು ನಮಗೆ ಹೇರಳವಾಗಿ ದೊರಕುತ್ತಾರೆ. ಒಮ್ಮೊಮ್ಮೆ ನನಗೆ ಇಷ್ಟೇ ಸಾಕು ಎಂದು ಇರುವುದನ್ನೆಲ್ಲಾ ಪರರಿಗೆ ನೀಡಿ ವಿರಾಗಿಗಳಾದವರನ್ನೂ ನಾವು ನೋಡುತ್ತೇವೆ.

ಈ ಸಂದರ್ಭದಲ್ಲಿ ಆದಿ ತೀರ್ಥಂಕರನಾದ ಪುರುದೇವನ ಕಥೆ ನೆನಪಾಗುತ್ತದೆ. ಪಂಪ ಕವಿ ತನ್ನ ಆದಿ ಪುರಾಣ ಕಾವ್ಯದಲ್ಲಿ ಕೀರ್ತಿಶನಿಯ ಬೆನ್ನು ಹತ್ತಿದ ಭರತ ಚಕ್ರವರ್ತಿಯ ಕಥೆಯನ್ನು ರಸಪೂರ್ಣವಾಗಿ ಚಿತ್ರಿಸಿದ್ದಾನೆ. ಪುರುದೇವ ಸಕಲ ಭೋಗಭಾಗ್ಯಗಳ ಒಡೆಯ ನಾಗಿ ರಾಜ್ಯಭಾರ ಮಾಡುತ್ತಿದ್ದಾಗ ಒಮ್ಮೆ ಕನ್ನಡಿಯಲ್ಲಿ ತನ್ನ ತಲೆಗೂದಲು ಬೆಳ್ಳಗಾಗುತ್ತಿರು ವುದನ್ನು ಕಂಡ. ತಾನು ಮುದುಕನಾಗುತ್ತಿರುವುದನ್ನು ತಿಳಿದು ಅವನಿಗೆ ಐಹಿಕ ಜೀವನದಲ್ಲಿ ವೈರಾಗ್ಯ ಮೂಡಿತು. ರಾಜ್ಯವನ್ನು ಮಕ್ಕಳಿಗೆ ಹಂಚಿ ಕಾಡಿಗೆ ಹೋಗಿ ತಪೋನಿರತನಾದ. ಅವನ ಹಿರಿಯ ಮಗ ಭರತ ವೀರಾಗ್ರೇಸರನಾಗಿ ದಿಗ್ವಿಜಯವನ್ನು ಕೈಗೊಂಡ. ಷಟ್ಖಂಡ ಭೂಮಂಡಲಗಳನ್ನು ಗೆದ್ದು ವೃಷಭಾಚಲದ ತುತ್ತ ತುದಿಯನ್ನು ಏರಿದ. ಅಲ್ಲಿ ಅವನು ತನ್ನ ಕೀರ್ತಿ ಪತಾಕೆಯ ಕುರುಹಾಗಿ ಒಂದು ಶಿಲಾಶಾಸನವನ್ನು ಕೆತ್ತಿಸಬೇಕೆಂದು ಆಶಿಸಿದ. ಆದರೆ ಅಲ್ಲಿ ಎಲ್ಲಿ ನೋಡಿದರೂ ಈಗಾಗಲೇ ದಿಗ್ವಿಜಯ ಮಾಡಿದವರ ಶಿಲಾಶಾಸನಗಳೇ ವಿರಾಜಿಸುತ್ತಿದ್ದುವು. ಆ ಶಿಲಾ ಪ್ರಶಸ್ತಿಗಳನ್ನು ನೋಡ ನೋಡುತ್ತಾ ಮಡುಗಟ್ಟಿದ್ದ ಅವನ ಗರ್ವರಸ ಸೋರತೊಡಗಿತು. ಆದರೂ ಅವನು ತನ್ನ ಹಿಂದಿನವರ ಹೆಸರುಗಳನ್ನೆಲ್ಲಾ ಅಳಿಸಿ ತನ್ನ ಹೆಸರನ್ನು ಕೆತ್ತಿಸಿ ಸಮಾಧಾನ ಪಟ್ಟುಕೊಂಡ.

ಅನಂತರ ಅವನು ತನ್ನ ರಾಜಧಾನಿಗೆ ಹಿಂದಿರುಗಿದಾಗ ತನ್ನ ಸೋದರರು ತನಗಿನ್ನೂ ಶರಣಾಗದೆ ಇದ್ದುದರ ಅರಿವಾಯಿತು. ಅವನು ಅವರನ್ನೆಲ್ಲಾ ಶರಣಾಗಲು ಕೋರಿ ದೂತರನ್ನಟ್ಟಿದ. ಬಾಹುಬಲಿಯನ್ನು ಬಿಟ್ಟು ಉಳಿದವರೆಲ್ಲಾ ಶರಣಾದರು. ಭರತ ಬಾಹುಬಲಿಯ ವಿರುದ್ಧ ಕೆರಳಿದ. ಬಾಹುಬಲಿ ಶಾಂತನಾಗಿ ಹೇಳಿದ. ನಾನು ಶರಣಾಗಬೇಕಾದರೆ ನೀನು ನನ್ನನ್ನು ಯುದ್ಧದಲ್ಲಿ ಗೆಲ್ಲಬೇಕು ಎಂದ. ಇಬ್ಬರಿಗೂ ಜಲಯುದ್ಧ, ದೃಷ್ಟಿಯುದ್ಧ ಮತ್ತು ಮಲ್ಲಯುದ್ಧಗಳು ಏರ್ಪಟ್ಟವು. ರಾಜಧಾನಿಯ ಜನ ಕುತೂಹಲದಿಂದ ನೋಡುತ್ತಿದ್ದರು. ಭರತ ಚಕ್ರವರ್ತಿ ತಮ್ಮನಾದ ಬಾಹುಬಲಿಗೆ ಸೋತ. ಆದರೂ ಸೋಲನ್ನೊಪ್ಪದ ಭರತ ತನ್ನ ಚಕ್ರರತ್ನವನ್ನು ತಮ್ಮನತ್ತ ಪ್ರಯೋಗಿಸಿದ. ಅದು ಬಾಹುಬಲಿಯ ಭುಜದ ಬಳಿ ತಲೆಬಾಗಿ ನಿಂತಿತು. ಸೋತರೂ ಸೋಲನ್ನೊಪ್ಪದ ಅಣ್ಣನ ಬಗ್ಗೆ ಬಾಹುಬಲಿಗೆ ಮರುಕವುಂಟಾಯಿತು. ಅವನೆಷ್ಟಾದರೂ ತನ್ನ ಅಣ್ಣ ಎಂದು 'ನೀನು ಆಶಿಸಿದ ರಾಜ್ಯ ಮತ್ತು ನೀನೊಲಿದ ಲತಾಂಗಿಯನ್ನು ನಾನು ಬಲ್ಲೆ, ಅದರಿಂದ ನನಗೆ ಅಪಕೀರ್ತಿ ಬಂದೀತು' ಎಂದು ತಂದೆಯಿಂದ ಬಂದ ರಾಜ್ಯವನ್ನೂ, ತಾನು ಗೆದ್ದ ಅಣ್ಣನ ರಾಜ್ಯವನ್ನೂ ಎಂಜಲು ಎಲೆಯನ್ನು ಬಿಸುಡುವಂತೆ ಬಿಸಾಡಿ ತಪಸ್ಸಿಗೆ ನಡೆದ. ಎರಡು ಹೆಜ್ಜೆ ಜಾಗದಲ್ಲಿ ನಿಂತು ತಪಸ್ಸು ಮಾಡತೊಡಗಿದ. ಬಾಹುಬಲಿಯ ಮೂರ್ತಿಯನ್ನು ಇಂದೂ ನಾವು ಶ್ರವಣಬೆಳಗೊಳದ ಗೊಮ್ಮಟ ವಿಗ್ರಹದಲ್ಲಿ ಕಾಣುತ್ತೇವೆ.

ಮೇಲಿನ ಕಥಾನಕದಿಂದ ತಿಳಿಯುವುದೇನೆಂದರೆ ಕೀರ್ತಿಯ ಬೆನ್ನು ಹತ್ತಿದ ಭರತ ಅವಮಾನದಿಂದ ಮಣ್ಣು ಮುಕ್ಕಿದ. ಇರುವುದನ್ನೆಲ್ಲಾ ತೊರೆದ ಬಾಹುಬಲಿಗೆ ಯಶೋಲಕ್ಷ್ಮಿ ಒಲಿದು ಜಗದ್ವಿಖ್ಯಾತನಾದ. ಅದಕ್ಕಾಗಿಯೇ ಕುವೆಂಪು ಅವರು ಕೀರ್ತಿಯನ್ನು ಶನಿ ಎಂದೂ ಯಶಸ್ಸನ್ನು ಲಕ್ಷ್ಮಿ ಎಂದೂ ಕರೆದಿದ್ದಾರೆ. ನೆಪೋಲಿಯನ್, ಹಿಟ್ಲರ್, ಮುಸಲೋನಿ ಮುಂತಾದವರು ಕೀರ್ತಿ ಶನಿಯ ಬೆನ್ನು ಹತ್ತಿ ಮಣ್ಣು ಮುಕ್ಕಿದವರು. ಬುದ್ಧ, ಯೇಸು, ಬಸವ, ಗಾಂಧಿಯಂಥವರು ಇರುವುದನ್ನೆಲ್ಲಾ ತೊರೆದರೂ ಅವರತ್ತ 'ಯಶೋಲಕ್ಷ್ಮಿ' ಒಲಿದು ಬಂದಳು.

ಡಿ.ವಿ.ಜಿ.ಯವರು ತಮ್ಮ ಮಂಕುತಿಮ್ಮನ ಕಗ್ಗದಲ್ಲಿ ಕೀರ್ತಿಗಾಗಿ ಹಂಬಲಿಸಿದವರ ಕಥೆಯನ್ನು ರಸವತ್ತಾಗಿ ನಿರೂಪಿಸಿದ್ದಾರೆ. 'ಸಿರಿ ಮಾತ್ರಕೇನಲ್ಲ, ಪೆಣ್ ಮಾತ್ರಕೇನಲ್ಲ, ಕರುಬಿ ಜನ ಕೆಸರು ದಾರಿಯಲಿ ಸಾಗುವುದು, ಬಿರುದ ಗಳಿಸಲಿಕೆಸಪ, ಹೆಸರ ಪಸರಿಸಲೆಸಪ ದುರಿತಗಳಿಗೆಣೆಯುಂಟೆ ?' ಎನ್ನುತ್ತಾರೆ. ಹೊನ್ನು ಹೆಣ್ಣುಗಳಿಗಾಗಿ ಮಾತ್ರ ಜನ ಅಡ್ಡದಾರಿ ಹಿಡಿಯುವುದಿಲ್ಲ. ಬಿರುದು ಬಾವಲಿಗಳಿಗಾಗಿ, ಹೆಸರಿನ ಆಸೆಗಾಗಿ ಅವರು ಮಾಡುವ ಪಾಪಕೃತ್ಯಗಳಿಗೆ ಮಿತಿಯೇ ಇಲ್ಲ. ಮತ್ತೊಂದು ಕಡೆ ಅವರು 'ಹೆಸರು ಹೆಸರೆಂದು ನೀನು ವೃಥಾ ಶ್ರಮವೇಕೆಪಡುತ್ತೀಯೆ, ನೀನು ಎಂದಾದರೂ ಒಂದು ದಿನ ಕಸದಲ್ಲಿ ಕಸವಾಗಿ ಹೋಗುವವನು ಎಂಬುದನ್ನು ಮರೆಯಬೇಡ' ಎಂದು ಎಚ್ಚರಿಸುತ್ತಾರೆ.

ಎಷ್ಟೋ ಜನ ಸಾಮಾನ್ಯ ಕುಟುಂಬದಲ್ಲಿ ಜನಿಸಿ ತಮ್ಮ ಕಠಿಣ ಪರಿಶ್ರಮದಿಂದ ಉನ್ನತ ಸ್ಥಾನಕ್ಕೇರಿ ಕೀರ್ತಿಶಾಲಿಗಳಾಗಿದ್ದಾರೆ. ಲಾಲ್ ಬಹದ್ದೂರ್ ಶಾಸ್ತ್ರಿ ವಾರಣಾಸಿ ಬಳಿಯ ಮೊಘಲ್ ಸರಾಯ್‌ನಲ್ಲಿ ಒಂದು ಬಡ ಕುಟುಂಬದಲ್ಲಿ ಜನಿಸಿದವರು. ಅವರು ಶಾಲೆಗೆ ಹೋಗುವಾಗ ದೋಣಿಯಲ್ಲಿ ಕುಳಿತು ಒಂದು ಹೊಳೆಯನ್ನು ದಾಟಬೇಕಾಗಿತ್ತು. ದೋಣಿಯವನಿಗೆ ಕೊಡಲು ಬಿಡಿಕಾಸು ಸಹ ಇರದೆ ಅವರು ಎಷ್ಟೋ ದಿನ ಈಜಿಕೊಂಡೇ ಹೊಳೆಯನ್ನು ದಾಟುತ್ತಿದ್ದರು. ಅವರು ಓದಿದ್ದು ಮೆಟ್ರಿಕ್‌ವರೆಗೆ ಮಾತ್ರ. ಅನಂತರ ಕಾಶಿಯ ವಿದ್ಯಾಪೀಠದಿಂದ 'ಶಾಸ್ತ್ರಿ' ಪದವಿಯನ್ನು ಗಳಿಸಿದರು. ಸ್ವಾತಂತ್ರ್ಯ ಸಮರದಲ್ಲಿ ನಿಷ್ಠಾವಂತರಾಗಿ ಭಾಗವಹಿಸಿ ಸ್ವಾತಂತ್ರ್ಯಾನಂತರ ತಮ್ಮ ನಿಸ್ವಾರ್ಥ ಸೇವೆಯಿಂದ ಹಂತಹಂತವಾಗಿ ರಾಜಕೀಯ ಮೆಟ್ಟಿಲುಗಳನ್ನೇರಿ ಕೊನೆಗೆ ಪ್ರಧಾನ ಮಂತ್ರಿಯಾಗಿ ಹೆಸರು ಗಳಿಸಿದರು. ಹಮ್ಮು ಬಿಮ್ಮುಗಳಿಲ್ಲದ ಅವಿರತ ಶ್ರಮವೇ ಅವರ ಯಶಸ್ಸಿನ ಗುಟ್ಟಾಗಿತ್ತು.

ಸರ್. ಎಂ. ವಿಶ್ವೇಶ್ವರಯ್ಯನವರ ಹೆಸರನ್ನು ಕೇಳದವರಾರು. ಮೈಸೂರಿನ ಕೃಷ್ಣರಾಜ ಸಾಗರ, ಭದ್ರಾವತಿಯ ಕಬ್ಬಿಣದ ಕಾರ್ಖಾನೆ, ಮೈಸೂರು ವಿಶ್ವವಿದ್ಯಾನಿಲಯ, ಶರಾವತಿ ಯೋಜನೆ ಮುಂತಾದ ಮಹತ್ಕಾರ್ಯಗಳನ್ನು ಸಾಧಿಸಿದ ಖ್ಯಾತ ಶಿಲ್ಪಿ ಮೋಕ್ಷಗುಂಡಂ ವಿಶ್ವೇಶ್ವರಯ್ಯ. ಶತಾಯುಗಳಾಗಿ ಬದುಕಿದ ಅವರ ಜೀವನದ ರಹಸ್ಯ ಸತತ ದುಡಿಮೆಯಾಗಿತ್ತು. ದಕ್ಷ ಇಂಜಿನಿಯರ್ ಆದ ಅವರು ಪ್ರಾಮಾಣಿಕತೆ ಮತ್ತು ಆತ್ಮ ಗೌರವದಿಂದ ಸರ್ಕಾರದ ಸೇವೆ ಮಾಡಿದರು. ವಿದ್ಯುಚ್ಛಕ್ತಿ ಇಲ್ಲದ ಕಾಲದಲ್ಲಿ ಅವರು ಸರ್ಕಾರದ ಮೋಂಬತ್ತಿಯನ್ನು ಸರ್ಕಾರದ ಕೆಲಸಕ್ಕೆ ಮಾತ್ರ ಉಪಯೋಗಿಸಿ ತಮ್ಮ ಸ್ವಂತ ಕೆಲಸಕ್ಕೆ ಸ್ವಂತ ಮೋಂಬತ್ತಿಯನ್ನು ಉಪಯೋಗಿಸುತ್ತಿದ್ದರು. ಅವರು ೧೯೧೮ರಲ್ಲಿ ಮೈಸೂರಿನ ದಿವಾನಗಿರಿಗೆ ರಾಜಿನಾಮೆ ಇತ್ತಾಗ ರಾಜಿನಾಮೆ ನೀಡಲು ಸರಕಾರದ ಕಾರಿನಲ್ಲಿ ಹೋದರು, ಬರುವಾಗ ತಮ್ಮ ಸ್ವಂತ ಕಾರಿನಲ್ಲಿ ಹಿಂದಿರುಗಿದರು. ಬಳಿ ಇದ್ದವರು ಕಾರಣ ಕೇಳಿದಾಗ 'ನಾನು ಈಗ ನಿವೃತ್ತ, ಸರಕಾರದ ಕಾರನ್ನು ಉಪಯೋಗಿಸುವ ಹಕ್ಕು ನನಗಿಲ್ಲ' ಎಂದರು. ಅವರಿಗೆ ಭಾರತ ಸರ್ಕಾರ ಭಾರತರತ್ನ ಪ್ರಶಸ್ತಿಯನ್ನಿತ್ತು ಗೌರವಿಸಿತು.

ಇಂತಹ ಎಷ್ಟೋ ಮಹನೀಯರ ಉದಾಹರಣೆಗಳು ನಮ್ಮ ಕಣ್ಣ ಮುಂದಿವೆ. ಅವರ ಜೀವನಗಳಿಂದ ನಾವು ಸ್ಫೂರ್ತಿ ಪಡೆಯಬಹುದು.

ಬಿ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ-೫೭೭೦೦೫

ಸುದ್ದಿಚಿತ್ರ



ದಿನಾಂಕ ೮-೧೦-೦೫ರಂದು ಮೂಡುಬಿದಿರೆಯಲ್ಲಿ ನಡೆದ ಡಾ|| ಶಿವರಾಮ ಕಾರಂತ ಪ್ರತಿಷ್ಠಾನದ ಸಮಾರಂಭದಲ್ಲಿ ಡಾ|| ಸಿ. ಆರ್. ಚಂದ್ರಶೇಖರ್ ಅವರಿಗೆ ೨೦೦೫ನೇ ಸಾಲಿನ ಡಾ|| ಶಿವರಾಮಕಾರಂತ ಪ್ರಶಸ್ತಿಯನ್ನು ಪ್ರತಿಷ್ಠಾನದ ಅಧ್ಯಕ್ಷ ಶ್ರೀ ಅಮರನಾಥ ಶೆಟ್ಟಿ ಅವರು ನೀಡಿದರು.

**HOSATHU** Kannada Monthly / November 2002 Rs. 10

RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14

# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ

ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

# ಹೊಸತು

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಇವರಿಂದ ..................
ಪ್ರೀತಿಯ ಅಣ್ಣ ಶ್ರೀಕಾಂತನ
ನೆನಪಿನ ಕಾಣಿಕೆ

ಇವರಿಗೆ ..................
ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ

ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊಸತು ಪರವಾಗಿ)

ದಿನಾಂಕ 12-12-2002

ಶ್ರೀಕಾಂತ
(ಉಡುಗೊರೆ ನೀಡುವವರ ಸಹಿ)

ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ

## ಉಡುಗೊರೆಯಾಗಿ 'ಹೊಸತು ಚಂದಾ'

ಹಬ್ಬ - ಹರಿದಿನ, ಮದುವೆ, ಸಮಾರಂಭಗಳಲ್ಲಿ
ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 3 ವರ್ಷದ ಚಂದಾ ರೂ. 250

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಇವರಿಂದ ..................

ಇವರಿಗೆ ..................

ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ...

ಪುಟಗಳು : 64 ಡೆಮಿ ಚೌಕಾಕಾರ ಬಿಡಿ ಪ್ರತಿ : ರೂ. 10

ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ

ವಿವರಗಳಿಗೆ : ಹೊಸತು

15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna